ಡಿ. ವಿ. ಗುಂಡಪ್ಪ

25



ಜ್ಞಾಪಕಚಿತ್ರಶಾಲೆ – ೧

# ಸಾಹಿತಿ ಸಜ್ಜನ ಸಾರ್ವಜನಿಕರು

# ಅರಿಕೆ

ಈ ಪುಸ್ತಕದಲ್ಲಿರುವ ಇಪ್ಪತ್ತು ಪ್ರಬಂಧಗಳಲ್ಲಿ ಕಡೆಯದರ ಹೊರತು ಮಿಕ್ಕವು ಬಹುಶಃ ೧೯೫೩ ರಲ್ಲಿ ಜನಪ್ರಗತಿ ವಾರಪತ್ರಿಕೆಯಲ್ಲಿ (ತಾ. ೧೨-೪-೧೯೫೩ ರಿಂದ ತಾ. ೧-೧೧-೧೯೫೩ರ ವರೆಗೆ) ಪ್ರಕಟವಾಗಿದ್ದವು.

ಆ ಲೇಖನಗಳನ್ನು ಬರೆಯಲು ಪ್ರೋತ್ಸಾಹ ಕೊಟ್ಟು ಪ್ರಕಟನೆಗೆ ಸಹಾಯವಾದವರು ಆಗ ಆ ಪತ್ರಿಕೆಯ ಸಂಪಾದಕರಾಗಿದ್ದ ಶ್ರೀ ಎನ್. ಎಸ್. ಸೀತಾರಾಮಶಾಸ್ತ್ರಿಗಳವರು. ಅವರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ಎಸ್. ವರದರಾಜಯ್ಯಂಗಾರ್ಯರನ್ನು ಕುರಿತ ಲೇಖನವು ಬೆಂಗಳೂರು ಬಸವನಗುಡಿಯಲ್ಲಿರುವ ಅಬಲಾಶ್ರಮ ಸಂಸ್ಥೆಯ ಸುವರ್ಣೋತ್ಸವ ಸಂಚಿಕೆಯಲ್ಲಿ ಪ್ರಕಟವಾದದ್ದು.

ಲೇಖನಗಳೆಲ್ಲ ಬಹುಮಟ್ಟಿಗೆ ಮೊದಲು ಇದ್ದಂತಯೇ ಇವೆ. ಗರಣಿ ಕೃಷ್ಣಾಚಾರ್ಯರನ್ನು ಕುರಿತದ್ದರಲ್ಲಿ ಕೆಲವು ಹೊಸ ವಾಕ್ಯಗಳನ್ನು ಈಗ ಸೇರಿಸಿದೆ. ಇನ್ನೂ ಒಂದೆರಡು ಕಡೆ ಕೊಂಚ ಕೊಂಚವಾಗಿ ಹೊಸ ಅಂಶಗಳನ್ನು ಈಗ ಸೇರಿಸಿದೆ.

ಈ ಲೇಖನಗಳು ಆಯಾ ವ್ಯಕ್ತಿಯ ಜೀವನಚರಿತ್ರೆಯಲ್ಲ; ಯೋಗ್ಯತಾ ನಿರ್ಣಯವೂ ಅಲ್ಲ. ಆಯಾ ವ್ಯಕ್ತಿಯ ವಿಷಯದಲ್ಲಿ ನನ್ನ ಮನಸ್ಸು ಗ್ರಹಿಸಲಾದಷ್ಟನ್ನು, ಅದರಲ್ಲಿ ನನ್ನ ನೆನೆಪು ಉಳಿಸಿಕೊಟ್ಟಷ್ಟನ್ನು, ಲಿಖಿತ ಮಾಡುವುದಷ್ಟೇ ನನ್ನ ಪ್ರಯತ್ನ. ನನಗೆ ತೋರಿದ್ದೇ ಪೂರ್ಣವಲ್ಲ; ನನ್ನ ಅಭಿಪ್ರಾಯವೇ ತೀರ್ಮಾನವಲ್ಲ. ಬೇರೆ ಅನುಭವಗಳೂ ಬೇರೆ ಅಭಿಪ್ರಾಯಗಳೂ ನಾಲ್ಕಾರಿದ್ದಾವು, ಸಾಧ್ಯವಿರುವ ಹತ್ತು ದೃಷ್ಟಿಗಳಲ್ಲಿ ನನ್ನ ದೃಷ್ಟಿಯೂ ಒಂದು.

ಈ ಪುಸ್ತಕದ ಅಚ್ಚಿನ ಕರಡುಗಳನ್ನು ತಿದ್ದುವುದರಲ್ಲಿಯೂ ಇತರ ವಿಧಗಳಲ್ಲಿಯೂ ನನ್ನ ಕಿರಿಯ ಮಿತ್ರರು ಶ್ರೀ ಎಸ್. ಆರ್. ರಾಮಸ್ವಾಮಿಯವರು ತುಂಬ ಸಹಾಯ ಕೊಟ್ಟಿದ್ದಾರೆ.

ಶ್ರೀ ಕೂಡಲಿ ಚಿಂದಂಬರಂ ಅವರ ಉಪಕಾರ ಅಮೂಲ್ಯವಾದದ್ದು.

ಚಿತ್ರಪಟಗಳಿಗಾಗಿ ಆಯಾ ಮಹನೀಯರ ಬಂಧುವರ್ಗಕ್ಕೂ ಮಿತ್ರವರ್ಗಕ್ಕೂ ಕರ್ಣಾಟಕ ಸಾಹಿತ್ಯ ಪರಿಷತ್ತು ಮೊದಲಾದ ಸಂಸ್ಥೆಗಳಿಗೂ ನಾನು ಋಣಿಯಾಗಿದ್ದೇನೆ.

ಮಹಾಜನರ ಅಭಿಮಾನವನ್ನು ಬೇಡುತ್ತೇನೆ. ಸರ್ವಂ ಶಿವಂ.

ಬೆಂಗಳೂರು

ಜೂನ್ ೧೯೬೬

ಡಿ.ವಿ.ಜಿ.

# ಉಪೋದ್ಘಾತ

ದೇಶಚರಿತ್ರೆ (History), ವ್ಯಕ್ತಿಚರಿತ್ರೆ (Biography) - ಈ ಎರಡು ಗ್ರಂಥಜಾತಿಗಳೂ ನಮ್ಮ ದೇಶಕ್ಕೆ ತೀರಾ ಹೊಸವು. ಅವು ಯಾವ ದೇಶಕ್ಕೂ ತುಂಬ ಹಳೆಯವಲ್ಲ.

ಈ ಲೇಖನದಲ್ಲಿ 'ಚರಿತ್ರೆ' ಎಂದರೆ ದೇಶದ ಚರಿತ್ರೆ, ಹಿಸ್ಟರಿ (History), ಯಾವುದಾದರೊಂದು ಭೂಭಾಗದ ಅಥವಾ ಪ್ರದೇಶದ ಚರಿತ್ರೆ ಎಂದೂ, 'ವ್ಯಕ್ತಿಚರಿತ್ರೆ' ಎಂದರೆ ಒಬ್ಬಾನೊಬ್ಬ ಪ್ರಸಿದ್ಧ ಮನುಷ್ಯನ ಅಥವಾ ಮಹಿಳೆಯ ಜೀವಿತಚರಿತ್ರೆ, ಬಯೋಗ್ರಫಿ (Biography) ಎಂದೂ ಸಂಕೇತ. ವಿವರಗಳನ್ನು ಮುಂದೆ ನೋಡಲಾಗುತ್ತದೆ.

## ಈ ಸಾಹಿತ್ಯ ಎಲ್ಲೆಲ್ಲಿಯೂ ಈಚಿನದು

ಯೂರೋಪು ದೇಶಗಳ ಸಾಹಿತ್ಯ ಸಂಸ್ಕೃತಿಗಳಿಗೆ ಗ್ರೀಸ್ ದೇಶವು ಮಾತೃಸ್ಥಾನವೆಂದು ಎಲ್ಲರೂ ಅಂಗೀಕರಿಸಿದ್ದಾರೆ. ಅದು ಅಲ್ಲಿಗೆ ಬಹು ಪುರಾತನವಾದ ದೇಶ. ಆ ದೇಶದ ಪ್ರಥಮ ಚರಿತ್ರಕಾರನು ಹೆರೊಡೋಟಸ್ (Herodotus). ಇವನ ಕಾಲ ಸುಮಾರು ಕ್ರಿಸ್ತಪೂರ್ವ ೪೮೪ ರಿಂದ ೪೨೫. ಇವನು ಬರೆದಿಟ್ಟದ್ದು ತನ್ನ ಕಾಲದ ಕಿಂವದಂತಿಗಳನ್ನ - ಪುರಾಣ ಕಥೆಗಳನ್ನ. ಆ ಪ್ರಬಂಧಗಳನ್ನು ಔಪಚಾರಿಕವಾಗಿ ಚರಿತ್ರೆ ಎಂದಿಟ್ಟುಕೊಳ್ಳಬಹುದು. ಅವನಾದ ಮೇಲೆ ಬಂದವನು ಸುಮಾರು ಅದೇ ಕಾಲದ ತುಚಿದಿದೀಸ್

(Thucydides). ಇವನ ಕಾಲ ಕ್ರಿ. ಪೂ. ಸುಮಾರು ೪೬೪ ರಿಂದ ಸುಮಾರು ೪೦೨, ಇವನ ಪ್ರಬಂಧವೂ ಬಹುಮಟ್ಟಿಗೆ ಸ್ವಕಪೋಲಕಲ್ಪಿತವೇ. ಅವನ ಕಥಾನಾಯಕರ ಭಾಷಣಗಳನ್ನು ಅವನು ಸ್ವತಃ ಕಿವಿಯಿಂದ ಕೇಳಿದ್ದಿದ್ದರೆ ಹೇಗೋ ಹಾಗೆ 'ಸಾಕ್ಷಾತ್ ಪ್ರಕಾರ' (Direct reporting) ದಲ್ಲಿ, ಈಗಿನ ವರ್ತಮಾನ ಪತ್ರಿಕೆಗಳ ರೀತಿಯಲ್ಲಿ ಬರೆದಿದ್ದಾನೆ. ಆ ಭಾಷಣಗಳನ್ನು ಅವನು ಸ್ವಯಂ ಕೇಳಿದ್ದವನಲ್ಲ. ಬೇರೆ ಯಾರೋ ಕೇಳಿ ಅವನಿಗೆ ಹೇಳಿರಬಹುದೆಂಬುದಾದರೆ ಆ ವರದಿಗಾರನ ಜ್ಞಾಪಕಶಕ್ತಿ ಅದ್ಭುತವಾದದ್ದಾಗಿರಬೇಕು. ಆ ಕಾಲದಲ್ಲಿ ಶೀಘ್ರಲಿಪಿ ಕಲೆ (Shorthand, Stenography) ಹುಟ್ಟಿರಲಿಲ್ಲ. ತುಚಿದಿದೀಸನು ತನ್ನ ಕಥಾಪಾತ್ರಗಳ ಭಾಷಣ ಘೋಷಣಗಳನ್ನು ತಾನೇ ರಚಿಸಿ ಕಥಾ ಪಾತ್ರಗಳಿಗೆ ಆರೋಪ ಮಾಡಿರಬೇಕು.

ಇಂಗ್ಲೆಂಡಿನ ಆದಿ ಚರಿತ್ರಕಾರ ಬೀಡ್ (Bede). ಈತನು ಕ್ರಿ. ಶ. ಸುಮಾರು ೬೭೩ ರಿಂದ ೭೩೫ ರವರೆಗೆ ಇದ್ದವನು. ಇವನ ಕೃತಿ ವಿಶೇಷವಾಗಿ ಕ್ರಿಸ್ತ ಮಠಗಳ ಚರಿತ್ರೆ, ಇವನ ತರುವಾಯದ ಮಹಾಪ್ರಸಿದ್ಧ ಚರಿತ್ರಕಾರನು ಎಡ್ವರ್ಡ್ ಗಿಬ್ಬನ್ (Edward Gibbon) . ಗಿಬ್ಬನ್ನನ ಕಾಲ ಕ್ರಿ. ಶ ೧೭೩೭-೯೪. ಇವನು ಚರಿತ್ರೆಯಲ್ಲಿ ಅದು ಉತ್ತಮ ಸಾಹಿತ್ಯವೆನ್ನಿಸುವಂತೆ ಕಾವ್ಯದ ಸೊಗಸಿಟ್ಟು ಬರೆದವನು. ಇವನ ಕೃತಿಯ ವಿಷಯ ರೋಮ್ ಚಕ್ರಾಧಿಪತ್ಯದ ಅವನತಿ ಮತ್ತು ಪತನ. ಇವನ ಅನಂತರ ಬಂದ ಚರಿತ್ರಕಾರರಲ್ಲಿ ಮಕಾಲೆ (Macaulay), ಫ್ರೂಡ್ (Froude), ಫ್ರೀಮೆನ್ (Freeman), ಗಾರ್ಡಿನರ್ (Gardiner) - ಇವರು ಪ್ರಸಿದ್ಧರು.

ಇಂಗ್ಲೆಂಡಿನಲ್ಲಿ ಚರಿತ್ರೆಯ ರೂಪದ ಸಾಹಿತ್ಯ ಹೆಚ್ಚಾಗಿ ಬೆಳೆದು ಪ್ರಬಲಿಸಿದ್ದು ಮುಖ್ಯವಾಗಿ ೧೯ನೆಯ ಶತಮಾನದಲ್ಲಿ. ಫ್ರಾನ್ಸ್ ಜರ್ಮನಿಗಳಲ್ಲಿಯೂ ಹಾಗೆಯೇ. ಹೀಗಿರಲಾಗಿ ಹಿಂದೂ ಜನಕ್ಕೆ ಚಾರಿತ್ರಿಕ ಬುದ್ಧಿ (Sense of History) ಇಲ್ಲವೆಂಬ ಅಪವಾದ ಹೇರಿಸುವವರು ವಿಚಾರ ತಿಳಿಯದವರು.

ನಮ್ಮ ಪುರಾಣೇತಿಹಾಸಗಳಲ್ಲಿ ಚಾರಿತ್ರಿಕ ಸಾಮಗ್ರಿ ಅಡಗಿದೆ. ಅದನ್ನು ಗ್ರೀಸಿನ ಹೆರೊಡೋಟಸ್ಸಿನ ಪ್ರಬಂಧದ ಜಾತಿಗೆ ಸೇರಿಸಬಹುದು. ಈಗ ಚರಿತ್ರೆಯೆಂದರೆ ಕಥೆಯಲ್ಲ, ಪುರಾಣವಲ್ಲ, ಇತಿಹಾಸ ಕೂಡ ಅಲ್ಲ. ನಮ್ಮಲ್ಲಿ ಇತಿಹಾಸವೆಂದು ಕರೆಯುವ ಸಾಹಿತ್ಯಜಾತಿಯು ಕೂಡ ಇಂಗ್ಲಿಷಿನ ಹಿಸ್ಟರಿಯಿಂದ ಕೊಂಚ ಬೇರೆಯಾದದ್ದು. ಇತಿ+ಹ+ಆಸ - "ಹೀಗೆ ಆಯಿತಲ್ಲವ" - ಎಂಬುದು ಶಬ್ದಾರ್ಥ. ಇದೂ ಕಿಂವದಂತಿಯೇ. ಇದನ್ನು ಪುರಾವೃತ್ತವೆಂದು ಕರೆದಿದ್ದಾರೆ. ಇದು ಹಿಸ್ಟರಿಗೆ ಹತ್ತಿರ ಹತ್ತಿರ ಬರುತ್ತದೆ. ಚರಿತ್ರೆಯಲ್ಲಿ ಹೇಳುವ ಪ್ರತಿಯೊಂದು ಸಂಗತಿಯೂ ದಾಖಲೆಯಿಂದಲೂ ಸಾಕ್ಷ್ಯದಿಂದಲೂ

ರುಜುವಾತಾದದ್ದಾಗಿರಬೇಕು. ಕೋರ್ಟುಗಳಲ್ಲಿ ಹೇಳಿದ ಸಂಗತಿಗಳು ಹೇಗೆ ದಸ್ತಾವೇಜುಗಳಿಂದಲೂ ಸಾಕ್ಷ್ಯಗಳ ವಾಙ್ಮೂಲಗಳಿಂದಲೂ ಪ್ರಮಾಣಪೂರ್ವಕವಾಗಿ ದೃಢಪಟ್ಟಿರಬೇಕೋ ಚರಿತ್ರೆಯ ಅಂಶಗಳೂ ಹಾಗೆ ಪ್ರಮಾಣಗಳಿಂದ ಸ್ಥಿರಪಟ್ಟಿರಬೇಕು. ಇದೇ ಪ್ರಕೃತಕಾಲದ ಚರಿತ್ರೆಯೆಂಬ ಸಾಹಿತ್ಯದ ಮುಖ್ಯ ಲಕ್ಷಣ. ಅದು ರುಜುವಾತಾದ ಸಂಗತಿಗಳ ಅರ್ಥಕಲ್ಪನೆ (Interpretation).

# ಚರಿತ್ರೆಯ ಮುಖ್ಯ ವಿಷಯ

ಹೀಗೆ ದೇಶಚರಿತ್ರೆಯೆಂಬ ಸಾಹಿತ್ಯಪ್ರಭೇದದಲ್ಲಿ ಮುಖ್ಯವಾಗಿ ಎರಡಂಶಗಳು ಅಂತರ್ಗತವಾಗಿರುತ್ತವೆ:

೧. ಹೊರಗಣ ರುಜುವಾತಿಗೆ ಸಿಕ್ಕುವ ತಾರೀಖು, ಸ್ಥಳ, ಮಾನುಷ ಘಟನೆ, ಸಾಕ್ಷಿ - ಇಂಥ ಬಹಿರಂಗ ಸಂಗತಿಗಳು.

೨. ಹೊರಗಣ ರುಜುವಾತಿಗೆ ಸಿಕ್ಕದೆ ಊಹೆಗೆ ಮಾತ್ರ ತೋರುವ ಜನದ ಮನೋಗತಗಳು, ಜನನಾಯಕರ ಅಂತರಂಗದ ಆಶಯಗಳು, ರಾಜರ ಸ್ವಾರ್ಥ ತಾತ್ಪರ್ಯಗಳು, ದಂಡನಾಯಕರ ಒಳಸಂಚುಗಳು, ಮಂತ್ರಿಗಳ ಹುನ್ನರುಗಳು - ಇವೇ ಮೊದಲಾದವು.

ಒಂದು ಉದಾಹರಣೆ : ಒಂದಾನೊಂದು ಆಕಾಶ ವಿಮಾನವು ಬೆಂಗಳೂರಿನ ಮೇಲೆ ಹಾರಿಹೋಯಿತೆಂದು ಭಾವಿಸೋಣ. ಅದು ಯಾವ ತಾರೀಖಿನಲ್ಲಿ, ಎಷ್ಟು ಹೊತ್ತಿನಲ್ಲಿ, ಯಾವ ದಿಕ್ಕಿನಿಂದ ಯಾವ ದಿಕ್ಕಿಗೆ - ಇಂಥ ವಿವರಗಳು ರುಜುವಾತಿಗೆ ಸಿಕ್ಕತಕ್ಕವು. ಆ ವಿಮಾನದಲ್ಲಿದ್ದದ್ದು ಯುದ್ಧ ಸಾಮಗ್ರಿಯೇ, ಔಷಧಗಳೇ, ವೈದ್ಯರೇ, ಆಹಾರ ಸಾಮಗ್ರಿಯೇ, ಅದನ್ನು ವಿತರಣೆಮಾಡುವ ದಾದಿಯರೇ? ಆ ವಿಮಾನ ಬರ್ಮಾ ಕಡೆಗೆ ಹೋಯಿತೇ, ಚೀಣಕ್ಕೆ ಹೋಯಿತೆ ? ಚೀಣಕ್ಕೆ ಹೋದುದರ ಉದ್ದೇಶವೇನಿರಬಹುದು ? - ಇವು ಊಹಾಪೋಹಗಳ ವಿಷಯ.

ಚರಿತ್ರೆಯಲ್ಲಿ ಹೀಗೆ ವಾಸ್ತವದ ಸಂಗತಿಗಳೂ, ಊಹಾಪೋಹದ ತರ್ಕಗಳೂ ಬೆರೆತು ಕೊಂಡಿರುತ್ತವೆ. ಅವುಗಳನ್ನು ಬಿಡಿಸಿ ವಿಮರ್ಶೆ ಮಾಡುವುದು ಪ್ರಯಾಸದ ಕೆಲಸ. ಚರಿತ್ರಕಾರರಲ್ಲಿ ಭೇದವುಂಟಾಗುವುದು ಈ ಕಾರಣದಿಂದ.

ಚರಿತ್ರೆಯು ಸಾಹಿತ್ಯದ ಒಂದು ಪ್ರಭೇದವೆನಿಸುವುದು ಸ್ವಾಭಾವಿಕ. ಸಾಹಿತ್ಯವೆಂಬುದೇನು ? ಒಟ್ಟಿನಲ್ಲಿ ಸಾಹಿತ್ಯವೆಂಬುದು ಮನುಷ್ಯಸನ್ನಿವೇಶಗಳ, ಮನುಷ್ಯವರ್ತನೆ ಪ್ರತಿ ವರ್ತನೆಗಳ ಮತ್ತು ಅವುಗಳಿಂದ ತೋರುವ ಆಶಯ ಉದ್ದೇಶಗಳ ನಿರೂಪಣೆ. ಇಂಥ ನಿರೂಪಣೆಯ ಸಂಗತಿಗಳು ಬಹುಶಃ ಕಲ್ಪಿತಗಳಾಗಿದ್ದರೆ ಅದು ಕಾವ್ಯವೋ ನಾಟಕವೋ ಕಾದಂಬರಿಯೋ ಆಗುತ್ತದೆ. ಆ ಸಂಗತಿಗಳು ವಾಸ್ತವಿಕ ಪ್ರಪಂಚದವಾಗಿದ್ದಾಗ ಅದು ಚರಿತ್ರೆಯೆನಿಸುತ್ತದೆ. ಚರಿತ್ರೆ ಸಾಹಿತ್ಯಗಳೆರಡಕ್ಕೂ ಮೂಲದ್ರವ್ಯ ಒಂದೇ. ಅದು

ಮನುಷ್ಯಸ್ವಭಾವ. ಮನುಷ್ಯಸ್ವಭಾವದ ಊಹಾಪೋಹ ಕಲ್ಪನೆಯ ವರ್ಣನೆಯೇ ಶುದ್ಧ ಸಾಹಿತ್ಯ. ಅದರ ಯಥಾವತ್ತಾದ ವರದಿಯೇ ಚರಿತ್ರೆ. ವಾಗ್ಗುಂಫನದ ಸೊಗಸಿಗೂ, ವರ್ಣನೆಯ ಬೆಡಗಿಗೂ, ಕಥನ ಧೋರಣೆಗೂ ಎರಡರಲ್ಲೂ ಅವಕಾಶವುಂಟು. ಇಂಗ್ಲಿಷ್ ಚರಿತ್ರಕಾರರಲ್ಲಿ ಗಿಬ್ಬನ್, ಮಕಾಲೆ, ಫ್ರೂಡ್, ಟ್ರೆವೆಲ್ಯನ್ - ಇವರ ಲೇಖನ ಶೈಲಿಯೂ ವರ್ಣನಾ ವೈಖರಿಯೂ, ಕಥನ ಚಮತ್ಕಾರವೂ ಇವರನ್ನು ಪ್ರಸಿದ್ಧರನ್ನಾಗಿಸಿ ಸಾಹಿತ್ಯ ಕಾರರ ಪಂಕ್ತಿಗೆ ಸೇರಿಸಿವೆ.

ವಾಸ್ತವಿಕ ಸಂಗತಿಗಳನ್ನು ವರದಿ ಮಾಡುವುದರಲ್ಲಿ ಲೇಖಕನು ತನ್ನ ಊಹಾಪೋಹಗಳನ್ನು ನಡಸುವಾಗ ವಾಸ್ತವ ಸತ್ಯಕ್ಕೆ ಅಷ್ಟಿಷ್ಟು ಧಕ್ಕೆ ತಗಲಬಹುದಲ್ಲ - ಎಂಬ ಆಕ್ಷೇಪಣೆ ಇಂಗ್ಲೆಂಡಿನಲ್ಲಿ ಇದ್ದದ್ದುಂಟು. ಈ ತರ್ಕದಲ್ಲಿ ಹೆಸರಾದವರು ಒಂದು ಕಡೆಯ ಫ್ರೂಡ್, ಇನ್ನೊಂದು ಕಡೆಯ ಫ್ರೀಮನ್. ಈ ತರ್ಕವು ತಾರ್ಕಿಕರ ಮನಸ್ಸಿನ ಧೋರಣೆಯನ್ನವಲಂಬಿಸಿಕೊಂಡಿರುತ್ತದೆ. ಸರ್ವಸಮ್ಮತವಾಗುವ ಉತ್ತರ ಅದಕ್ಕೆ ದುರ್ಲಭ. ಒಂದೇ ಕಾವ್ಯಕ್ಕೆ ಅರ್ಥ ಮಾಡುವುದರಲ್ಲಿ ಬೇರೆ ಬೇರೆ ವ್ಯಾಖ್ಯಾನಕಾರರು ಹೇಗೆ ಭಿನ್ನಾಭಿಪ್ರಾಯಗಳುಳ್ಳವರಾಗಿರುತ್ತಾರೋ ಹಾಗೆ ಒಂದಾನೊಂದು ವಾಸ್ತವಿಕ ಸಂಗತಿಯ ಅರ್ಥವ್ಯಾಪ್ತಿಯನ್ನು ಊಹಿಸುವುದರಲ್ಲಿ ಚರಿತ್ರಲೇಖಕರು ಭಿನ್ನಾಭಿಪ್ರಾಯವುಳ್ಳವರಾಗಿರುವುದು ಸಹಜ. ಇಂಥ ಸಂದರ್ಭದಲ್ಲಿ ವಾಚಕನ ಪಾಡೇನೆಂದು ಕೇಳಿದರೆ, ವಾಚಕನು ತನ್ನ ಸ್ವಂತ ವಿವೇಕವನ್ನು ಉಪಯೋಗಿಸಿ ಅದರಂತೆ ನಿರ್ಧರಿಸಿಕೊಳ್ಳಲು ಸ್ವತಂತ್ರನಾಗಿರುತ್ತಾನೆನ್ನಬೇಕಾಗುತ್ತದೆ. ಇಂಥ ವಿವೇಚನೆ ವಾಚಕನಿಗಿರುವ ಸ್ವಾತಂತ್ರ್ಯಮಾತ್ರವೇ ಅಲ್ಲ; ಅದು ಅವನ ಕರ್ತವ್ಯವೂ ಹೌದು. ಸೀಲಿ (Seeley) ಎಂಬ ಪ್ರಸಿದ್ಧ ಚರಿತ್ರ ಕಾರನು ಹೀಗೆ ಹೇಳಿದ್ದಾನೆ : ಈ ಹೊತ್ತು ನಾವು ಯಾವುದನ್ನು ಚರಿತ್ರೆ ಎನ್ನುತ್ತೇವೆಯೊ ಅದರ ಸಂಗತಿ ನಿನ್ನೆಯ ರಾಜಕೀಯ. ನಮ್ಮ ಈ ಹೊತ್ತಿನ ರಾಜಕೀಯ ನಾಳೆಯ ಚರಿತ್ರೆಗೆ ವಸ್ತುವಾಗುತ್ತದೆ.

# ಚರಿತ್ರೆಯ ಆವಶ್ಯಕತೆ

ಹೀಗೆಂದರೆ ಅರ್ಥವೇನು ? ಚರಿತ್ರೆ ನಮ್ಮನ್ನು ಎಂದೂ ಬಿಟ್ಟದ್ದಲ್ಲ ಎಂದು. ನಾವು ಮಾಡುವುದು, ಮಾಡದೆ ಬಿಡುವುದು, ನಾವು ಪಡುವುದು, ಪಡದೆ ತಪ್ಪಿಸಿಕೊಳ್ಳುವುದು, ಇಂಥ ಎಲ್ಲ ನಮ್ಮ ಪಾಡೂ ಚರಿತ್ರೆಯೇ ಆದದ್ದರಿಂದ ನಾವು ಮಾಡುವುದರಲ್ಲಿಯೂ, ಪಡುವುದರಲ್ಲಿಯೂ, ವಿವೇಕದಿಂದ ನಡೆದುಕೊಂಡರೆ ಅಪಾಯಗಳು ತಪ್ಪುತ್ತವೆ, ಇಷ್ಟಾರ್ಥಗಳು ಕೊಂಚಮಟ್ಟಿಗಾದರೂ ಕೈಗೂಡುತ್ತವೆ ಎಂಬುದು. ಇಂಥ ವಿವೇಕವನ್ನು ನಾವು ಸಂಪಾದಿಸಿಕೊಳ್ಳಬೇಕೆಂದರೆ ಚರಿತ್ರೆಯ ವ್ಯಾಸಂಗವೇ ನಮಗಿರುವ ದಾರಿ.

ನಮ್ಮ ದೇಶದಲ್ಲಿ ಚರಿತ್ರೆಯ - ನಾನಾ ದೇಶಗಳ ಚರಿತ್ರೆಯ - ವ್ಯಾಸಂಗ ಈಗ ತೀರ ಕಡಮೆಯಾಗಿದೆ. ವಿಜ್ಞಾನ ಈಗೀಗ ಬಹುಮುಖ್ಯ ಎಂದು ಹೇಳುತ್ತ ಆ ನೆವದಲ್ಲಿ ಚರಿತ್ರೆಯ ಪ್ರಶಸ್ತಿಯನ್ನು ತಗ್ಗಿಸಿದ್ದೇವೆ. ಇದರ ಫಲಿತಾಂಶ ಈಗ ನಮ್ಮ ಅನುಭವಕ್ಕೆ ಚೆನ್ನಾಗಿ ಬರುತ್ತಿದೆ. ಹಿಂದು ಮುಂದು ತಿಳಿಯದೆ, ಹಿಂದೇನು ಮುಂದೇನೆಂದು ವಿಚಾರಿಸದೆ ರಾಜ್ಯ ನಿರ್ವಾಹ ಮಾಡುತ್ತೇವೆಂಬ ಕಾರ್ಯವಂತಿಕೆಯೇ ಆ ಫಲಿತಾಂಶ.

ದೇಶಚರಿತ್ರೆಯು ಆ ದೇಶದ ಜನಸಮಷ್ಟಿಯ ಚರಿತ್ರೆ; ಆ ಜನತೆಯ ಒಟ್ಟು ಜೀವನವನ್ನು ಕುರಿತ ಚರಿತ್ರೆ, ಮತ್ತು ಜನಜೀವನದ ಎಲ್ಲ ಕ್ಷೇತ್ರಗಳಿಗೂ ಸೇರಿದ ಚರಿತ್ರೆ. ಹಾಗಿದ್ದರೂ ಮೊದಮೊದಲು ಆದ ಚರಿತ್ರೆಯ ಪುಸ್ತಕಗಳಲ್ಲಿ ರಾಜರೇ ಕಥಾನಾಯಕರಾಗಿದ್ದಾರೆ. ಜನಸಾಮಾನ್ಯದ ವಿಷಯ ಆ ಪುಸ್ತಕಗಳಲ್ಲಿ ಹೆಚ್ಚಾಗಿ ಕಾಣಬರುವುದಿಲ್ಲ. ರಾಜ, ಅವನ ದಂಡಯಾತ್ರೆಗಳು, ಅವನ ಸೇನಾನಾಯಕರು, ಅವನ ಪರಿವಾರ, ಅವನ ವೈಭವ, ಅವನ ಪ್ರತಾಪ - ಇವೇ ಪೂರ್ವ ಕಾಲದಲ್ಲಿ ಬರೆದ ಚರಿತ್ರೆಗಳಲ್ಲಿ ಎದ್ದು ಕಾಣುವ ಸಂಗತಿಗಳು. ಜನ ಹೇಗೆ ಬದುಕಿತ್ತು, ಅದಕ್ಕೆ ಏನು ಕಷ್ಟವಿತ್ತು, ಆ ಕಷ್ಟ ಹೇಗೆ ಪರಿಹಾರವಾಯಿತು - ಇಂಥ ವಿಚಾರಗಳು ಎಲ್ಲೋ ಒಂದೆರಡು ಪಂಕ್ತಿಯಷ್ಟು ಕೊಂಚವಾಗಿ ಕಾಣಬರುತ್ತವೆ.

ಇದಕ್ಕೆ ಕಾರಣವನ್ನು ಊಹಿಸುವುದು ಕಷ್ಟವಲ್ಲ. ಪೂರ್ವಕಾಲದಲ್ಲಿ ಜನರ ಆಗು ಹೋಗುಗಳೆಲ್ಲ ರಾಜನ ಕೈಯಲ್ಲಿದ್ದವು. ಅವನು ಸೂತ್ರ ತಿರುಗಿಸಿದಂತೆ ದೇಶಕಾರ್ಯಗಳು ನಡೆಯುತ್ತಿದ್ದವು. ಜನರು ರಾಜನನ್ನು ತಮ್ಮ ಏಕೈಕ ಪ್ರತಿನಿಧಿಯನ್ನಾಗಿ ಅಂಗೀಕರಿಸಿದ್ದರು. ಜನದ ಜೀವನ ಸರ್ವಸ್ವವೂ ರಾಜನ ಅಧೀನದಲ್ಲಿತ್ತು. ಆದದ್ದರಿಂದ ರಾಜ ಚರಿತ್ರೆಯೇ ದೇಶಚರಿತ್ರೆಯಾಯಿತು.

ರಾಜವಂಶ, ರಾಯಭಾರಿಗಳ ಬರೋಣ-ಹೋಗೋಣಗಳು, ದಂಡನಾಯಕರ ಪರಾಕ್ರಮ, ಯುದ್ಧರಂಗ, ಯುದ್ಧದಲ್ಲಿ ಸೇರಿದ್ದ ಚತುರಂಗ ಬಲದ ಸಂಖ್ಯೆ-ಸಜ್ಜುಗಳು, ಪಕ್ಷ-ಪ್ರತಿಪಕ್ಷಗಳ ಜಯಾಪಜಯಗಳು, ಪಲಾಯನಗಳು, ಕೌಲು - ಕರಾರುಗಳು - ಇವೇ ಮೊದಮೊದಲಿನ ಚರಿತ್ರೆಯ ಮುಖ್ಯ ವಿಷಯಗಳಾಗಿದ್ದವು. ಹೀಗೆ ರಾಜಕೀಯವೇ ಚರಿತ್ರೆಯ ಮುಖ್ಯ ವಸ್ತುವೆಂಬ ಭಾವನೆ ಪ್ರಬಲಿಸಿತು.

## ಚರಿತ್ರೆಯಲ್ಲಿ ಹೊಸರೀತಿ

ಕಾಲಕ್ರಮದಲ್ಲಿ ಈ ಭಾವನೆ ಬದಲಾಯಿಸಿತು. ಪಾಶ್ಚಾತ್ಯ ದೇಶಗಳಲ್ಲಿ ಪ್ರಜಾಭಿಪ್ರಾಯ ಬಲಪಟ್ಟು, ರಾಜ್ಯನಿರ್ವಾಹದಲ್ಲಿ ಪ್ರಜೆಯೆಂಬ ಭಾಗಕ್ಕೆ ಪ್ರಾಬಲ್ಯ ಬಂದಂತೆಲ್ಲಾ ಪ್ರಜೆಯೆಂಬ ರಾಜ್ಯಾಂಗದ ಮಹತ್ತ್ವ ಚರಿತ್ರಲೇಖಕರಿಗೆ ಸ್ಪಷ್ಟವಾಗುತ್ತ ಬಂತು. ಅಲ್ಲಿಂದೀಚಿನ ಚರಿತ್ರೆಗಳಲ್ಲಿ ರಾಜಕೀಯವು ಎಷ್ಟು ಮುಖ್ಯವೋ ಜನಜೀವನದ ಇತರೆ ಕ್ಷೇತ್ರಗಳೂ ಅಷ್ಟು ಮುಖ್ಯವೆಂದು ಅಂಗೀಕೃತವಾಯಿತು. ದೇಶದ ಸಂಪತ್ತಿನ ಸ್ಥಿತಿ, ವ್ಯಾಪಾರ, ಜನದಲ್ಲಿ ವಿದ್ಯಾ ಪ್ರಚಾರ, ಕಲಾಕುಶಲತೆ, ವಿಜ್ಞಾನಾಭಿವೃದ್ಧಿ, ಅವರ ಮತಾಚಾರಗಳು, ಧರ್ಮ ಸಮಯಗಳು - ಇವೆಲ್ಲ ಚರಿತ್ರೆಗೆ ತಕ್ಕ ವಿಷಯಗಳೆಂದು ಸಾಮಾನ್ಯವಾಗಿ ಅಂಗೀಕೃತವಾಯಿತು. ಹೀಗೆ, ಈಚೀಚಿನ ಚರಿತ್ರಕಾರರು ಸಮಾಜಜೀವನವನ್ನೂ, ಜನದ ಸಂಸ್ಥೆ - ಸಂಪ್ರದಾಯಗಳನ್ನೂ ಚಿತ್ರಿಸುವುದಕ್ಕೆ ಪ್ರಾರಂಭಿಸಿದರು. ಇನ್ನೂ ಈಚಿನ ಚರಿತ್ರಕಾರರು ದೇಶದಲ್ಲಾಗುವ ವಿಜ್ಞಾನ ಸಂಶೋಧನೆ, ವಿವಿಧ ಸಾಹಸಗಳು, ಯಂತ್ರ ಪರಿಶ್ರಮ, ಸಂಸ್ಕೃತಿ ಪ್ರಚಾರ, ತತ್ತ್ವ ಶೋಧನೆ ಇವೆಲ್ಲವೂ ಜನಜೀವನದ ಮುಖ್ಯ ಲಕ್ಷಣಗಳಾದದ್ದರಿಂದ ಆ ಎಲ್ಲ ವಿಷಯಗಳೂ ಚರಿತ್ರೆಯ ಗ್ರಂಥಕ್ಕೆ ಅವಶ್ಯವಾದ ಸಾಮಗ್ರಿಯೆಂದು ಪರಿಗಣಿಸಿರುತ್ತಾರೆ. ಈಚೀಚಿನ ಪ್ರಸಿದ್ಧ ಚರಿತ್ರಕಾರರಾದ ಟ್ರೆವಲ್ಯನ್ (Trevelyan), ನ್ಯಾಮಿಯರ್ (Namier), ಬ್ಯೂರಿ (Bury), ಗೂಚ್ (Gooch) ಮೊದಲಾದವರ ಲೇಖನಗಳಲ್ಲಿ ಚರಿತ್ರೆಯ ವಿಷಯ ವಿಸ್ತಾರವನ್ನು ಚೆನ್ನಾಗಿ ಕಾಣಲಾಗುತ್ತದೆ.

# ವ್ಯಕ್ತಿ ಚರಿತ್ರೆ

ದೇಶಚರಿತ್ರೆಯು ಹೀಗೆ ಸಮಗ್ರ ಜನಜೀವನದ ಪ್ರತಿಬಿಂಬವಾದರೆ ವ್ಯಕ್ತಿಚರಿತ್ರೆಯು ಜನಜೀವನದ ಮೂಲಾಂಕುರಪ್ರಾಯಗಳಾದ ಮಹಾಪುರುಷರ ಪ್ರತಿಬಿಂಬ. ಸಮಾಜದಲ್ಲಿ ಆಗಿಂದಾಗ್ಗೆ ಹೊರಡುವ ಹೊಸಹೊಸ ಅಭಿಪ್ರಾಯಗಳು, ಹೊಸಹೊಸ ಸಮಾರಂಭಗಳು, ಹೊಸಹೊಸ ಸಂಸ್ಥೆಗಳು - ಇವಕ್ಕೆ ಪ್ರಥಮಕಾರಣರಾದವರು ಜನ ಜೀವಿತದ ಮೂಲಪುರುಷರು. ಅವರ ಬೋಧನೆಯಂತೆ, ಅವರು ಮಾಡಿದ ವಾದ ಪ್ರಚಾರದಂತೆ, ಅವರು ಅನುಸರಿಸಿದ ಸಂಪ್ರದಾಯದಂತೆ, ಅವರು ನಡೆದ ನಡುವಳಿಕೆಯಂತೆ, ಜನಸಾಮಾನ್ಯ ನಡೆಯುತ್ತದೆ.

ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥

-ಗೀತಾ, ೩-೨೧

ಹೀಗೆ, ಜನಜೀವನಕ್ಕೆ ಕೊಂಚವಾಗಿಯೋ ಹೆಚ್ಚಾಗಿಯೋ ಅಂಕುರಪ್ರಾಯರಾಗಿದ್ದವರು ಗಣ್ಯಪುರುಷರು. ಅಂಥವರ ಚರಿತ್ರೆ ಜೀವನಚರಿತ್ರೆ (Biography). ಹೀಗೆ ಜೀವನ ಚರಿತ್ರ ಎಂಬ ಸಾಹಿತ್ಯಜಾತಿಯು ದೇಶಚರಿತ್ರೆ ಎಂಬ ಸಾಹಿತ್ಯಕ್ಕೆ ಅಂಗಭೂತವಾದದ್ದು. ಜೀವನಚರಿತ್ರೆಯನ್ನು ದೇಶಚರಿತ್ರೆಯ ಅಂತರಂಗವೆಂದು ಭಾವಿಸುವುದು ಯುಕ್ತವಾಗುತ್ತದೆ.

ದೇಶಚರಿತ್ರೆಯ ರೂಪದ ಗ್ರಂಥರಚನೆಯು ಸಾಹಿತ್ಯದ ಚರಿತ್ರೆಯಲ್ಲಿ ಈಚೀಚಿನದೆಂದು ಮೇಲೆ ಹೇಳಿದೆ. ದೇಶಚರಿತ್ರೆಗಿಂತ ಆಧುನಿಕವಾದದ್ದು ವ್ಯಕ್ತಿಚರಿತ್ರೆ. ನಮ್ಮ ದೇಶದಲ್ಲಿ ಜೀವನಚರಿತ್ರೆಯ ಸಾಹಿತ್ಯವು ಗಾತ್ರದಲ್ಲಿ ಸಣ್ಣದಾಗಿದೆಯೆಂಬ ಕಾರಣದಿಂದ ನಾವು ಸಂಕೋಚಪಟ್ಟುಕೊಳ್ಳಬೇಕಾದ ಕಾರಣವಿಲ್ಲ. ಎಲ್ಲ ದೇಶಗಳಲ್ಲಿಯೂ ಅದು ಈಚೀಚಿನ ಸಾಹಿತ್ಯರಚನೆಯೇ.

ನಮ್ಮಲ್ಲಿ ಎಲ್ಲ ದೇಶಗಳಲ್ಲಿಯೂ ಇರುವಂತೆ ಜೀವನಚರಿತ್ರೆಯ ಸಾಹಿತ್ಯ ಕಾಲಕ್ರಮದಲ್ಲಿ ವೃದ್ಧಿಯಾಗುತ್ತದೆಂಬುದರಲ್ಲಿ ಸಂದೇಹವಿಲ್ಲ. ಅಷ್ಟೇ ಅಲ್ಲ, ಅದು ಅತಿಯಾಗಿ ವೃದ್ಧಿಯಾದೀತೆಂದು ಶಂಕೆಪಡುವುದು ಅಕಾರಣವಲ್ಲ. ರಾಜಾಧಿರಾಜರುಗಳ ಕಾಲದಲ್ಲಿ, ಪಾಳೆಯಗಾರರ ಕಾಲದಲ್ಲಿ, ಲೇಖನ

ಶಕ್ತಿಯಿದ್ದ ವಿದ್ವಾಂಸರಿಗೆ ಆಶ್ರಯಕೊಟ್ಟು, ಅವರಿಂದ ಸ್ವಪ್ರಶಂಸಾ ಕಾವ್ಯವನ್ನು ಬರೆಯಿಸಿಕೊಂಡದ್ದೂ ಅಪರೂಪವಲ್ಲ. ನಮ್ಮ ಮಠಾಚಾರ್ಯರುಗಳನ್ನೂ, ಅವರ ಶಿಷ್ಯರುಗಳನ್ನೂ ಕುರಿತು ದಿಗ್ವಿಜಯ ಗ್ರಂಥಗಳು ಹೇರಳವಾಗಿವೆ. ಇನ್ನು ಮುಂದೆ ರಾಜಕೀಯದಲ್ಲಿಯೂ ವ್ಯಾಪರದಲ್ಲಿಯೂ ಪ್ರಸಿದ್ಧರಾದವರೂ ಮತ್ತು ಪ್ರಸಿದ್ಧಿಯನ್ನು ಅಪೇಕ್ಷಿಸುವವರೂ ತಮ್ಮ ತಮ್ಮ ಜೀವನ ಚರಿತ್ರೆಯನ್ನು ಬರೆಯಿಸಿ ಪ್ರಕಟಿಸಬಹುದು. ಇಂಗ್ಲಿಷ್ ಭಾಷೆಯಲ್ಲಿ ಇಂಥಾದ್ದು ನಡೆದಿದೆ. ಗ್ರಾಮಾಂತರಗಳ ಪಾದರಿಗಳ ಜೀವನಚರಿತ್ರೆಗಳನ್ನೂ, ಅವರ ಭಾಷಣಗಳ ಸಂಗ್ರಹವನ್ನೂ ಅವರ ಮಕ್ಕಳೋ, ಇತರ ಅಭಿಮಾನಿಗಳೋ ಪ್ರಕಟಿಸಿರುತ್ತಾರೆ. ಹತ್ತಿಪ್ಪತ್ತು ವರ್ಷಗಳ ಅನಂತರ ಆ ಪ್ರಬಂಧಗಳು ಅವರ ಹತ್ತಿರದ ಜನರ ನೆನಪಿನಿಂದಲೂ ಅಳಿಸಿ ಹೋಗಿರುತ್ತವೆ. ಇಂಥ ಹುಲ್ಲು ಸಾಹಿತ್ಯದ ರಚನೆಯನ್ನು ತಪ್ಪಿಸುವುದು ಸಾಧ್ಯವಾಗಲಾರದು. ಆದರೂ ಸಾಹಿತ್ಯಾಭಿಮಾನಿಗಳು ಇಂಥ ಅಪಾಯ ಉಂಟೆಂಬುದನ್ನು ಜ್ಞಾಪಕದಲ್ಲಿರಿಸಿಕೊಳ್ಳುವುದು ಅವರ ಕರ್ತವ್ಯವಾಗುತ್ತದೆ.

# ಎರಡು ಪಕ್ಕಗಳು

ಜೀವನ ಚರಿತ್ರೆಯ ಮುಖ್ಯಾಂಶಗಳನ್ನು ಎರಡು ಜಾತಿಯಾಗಿ ವಿಂಗಡಿಸಬಹುದು :

೧. ಬಾಹ್ಯ ಸಂಗತಿಗಳು, ೨. ಅಂತಃಸ್ವಭಾವ.

ಬಾಹ್ಯಸಂಗತಿಗಳು ಎಂದರೆ, ಚರಿತ್ರನಾಯಕ ಹುಟ್ಟಿದ ತಾರೀಖು, ಸ್ಥಳ, ಕುಲ, ವಂಶಾನುಪೂರ್ವಿ, ವಿದ್ಯಾಭ್ಯಾಸದ ಸ್ಥಳ, ಅವನು ತೇರ್ಗಡೆ ಹೊಂದಿದ ಪರೀಕ್ಷೆಗಳು, ಅವನು ಸಂಪಾದಿಸಿದ ಹುದ್ದೆಗಳು, ಅವನ ವರಮಾನ, ಅವನ ಪ್ರಯಾಣಗಳು, ಅವನು ಮಾಡಿದ ಭಾಷಣಗಳು, ಅವನ ಲೇಖನಗಳು, ಅವನಿಗೆ ಬಂದ ಜಯಪತ್ರಗಳು, ಪ್ರಶಸ್ತಿಗಳು - ಇವು ಹೊರಗಣ ಸಂಗತಿಗಳು. ಈ ಸಂಗತಿಗಳು ಒಬ್ಬಾನೊಬ್ಬ ಮನುಷ್ಯನ ಛಾಯಚಿತ್ರಗಳಂತೆ (Photograph) ಅವನ ಆಕಾರ-ವಿಕಾರಗಳನ್ನು ಕೊಂಚಮಟ್ಟಿಗೆ ಗುರುತು ಮಾಡಿಕೊಡುತ್ತವೆ.

ಇದಕ್ಕಿಂತ ಮುಖ್ಯವಾದದ್ದು ಅವನ ಅಂತರಂಗದ ನಿರೂಪಣೆ. ಆತನು ತುಂಬ ಪ್ರೀತಿಯಿಂದ ನೋಡುತ್ತಿದ್ದುದು ಎಂಥವರನ್ನ, ಅವನ ಆಪ್ತಮಿತ್ರರು ಯಾರ್ಯಾರು, ಅವನ ಸಂಭಾಷಣ ವಿಷಯಗಳೇನು, ಅವನಿಗೆ ಅತ್ಯಂತ ಪ್ರಿಯವಾದ ಕಾಲಕ್ಷೇಪದ ಮಾರ್ಗ ಯಾವುದು - ಸಂಗೀತವೇ, ಸಾಹಿತ್ಯವೇ, ತತ್ತ್ವವಿಚಾರಗಳೇ, ಗಣಿತ ವಿಜ್ಞಾನಾದಿ ಶಾಸ್ತ್ರ ಆಚಾರ ಸಂಪ್ರದಾಯಗಳಲ್ಲಿ ಅವನು ತನ್ನ ನಿತ್ಯಜೀವನದಲ್ಲಿ ಅನುಸರಿಸುತ್ತಿದ್ದ ಮಾರ್ಗ ಯಾವುದು, ಸಾರ್ವಜನಿಕ ವಿಷಯಗಳಲ್ಲಿ ಅವನ ಪಂಥ ಯಾವುದು, ಅವನು ಬಹಿರಂಗವಾಗಿ ಸಾರುತ್ತಿದ್ದ ಅಭಿಪ್ರಾಯಗಳಿಗೂ, ಅಂತರಂಗವಾಗಿ ನಡೆಯುತ್ತಿದ್ದ ನಡವಳಿಕೆಗಳಿಗೂ ಹೊಂದಿಕೆ ಎಷ್ಟು ಮಾತ್ರ ಇತ್ತು - ಜೀವನಚರಿತ್ರೆಯಿಂದ ನಮಗೆ ತಿಳಿದುಬರಬೇಕಾದ ಅಂಶಗಳು ಈ ಅಂತರಂಗದ ಜಾತಿಯವು.

ದೇಶಜೀವನದ ಮುಖ್ಯ ಲಕ್ಷಣಗಳಿಗೂ, ಮುಖ್ಯ ಸಮಾರಂಭಗಳಿಗೂ ಮೂಲಕಾರಣರಾದವರು ಜೀವನಚರಿತ್ರೆಗೆ ಅರ್ಹರಾದ ಗಣ್ಯ ಪುರುಷರೆಂದು ಮೇಲೆ ವಿಜ್ಞಾಪಿಸಿದೆ. ಯಾರು ತಮ್ಮ ಆಲೋಚನೆ - ಅಭಿಪ್ರಾಯಗಳ ಪ್ರಭಾವದಿಂದಾಗಲೀ ತಮ್ಮ ಸೌಶೀಲ್ಯ - ಸೌಜನ್ಯಗಳ ಪ್ರಭಾವದಿಂದಾಗಲೀ ಜನತೆಯ ಮೇಲೆ ಅಷ್ಟಿಷ್ಟು ಪರಿಣಾಮವನ್ನು ಉಂಟುಮಾಡಿರುತ್ತಾರೋ ಅಂಥವರು ಜೀವನ ಚರಿತ್ರೆಗೆ ತಕ್ಕ ವಿಷಯವಾಗುತ್ತಾರೆ - ಎಂದು ಹೇಳಿದ ಮೇಲೆ ಅಂಥ ಜನರ ಅಂತರಂಗಸಂಪತ್ತು ದೇಶದ ಅಭ್ಯುದಯ -

ಅಭಿವೃದ್ಧಿಗಳಿಗೆ ಕಾರಣವಾಯಿತು ಎಂದು ಸ್ಪಷ್ಟವಾಯಿತು. ಹೀಗೆ, ಒಬ್ಬ ಜನನಾಯಕನ, ಒಬ್ಬ ರಾಜ್ಯಕುಶಲನ ಅಥವಾ ಒಬ್ಬ ನವಸಂಪ್ರದಾಯ ಸ್ಥಾಪನಕನ ವೃತ್ತಾಂತವು ದೇಶ ಚರಿತ್ರೆಯ ಒಳಭಾಗವಾಗಿರುತ್ತದೆ. ಈ ಮಹಾನಾಯಕರ ಅಂತರಂಗವನ್ನು ನಾವು ಕಂಡುಕೊಂಡದ್ದಾದರೆ ಜನಜೀವನದ ಬಹಿರಂಗದ ಅನೇಕ ಸಂದರ್ಭಗಳ ಒಳಮರ್ಮಗಳು ನಮಗೆ ತಿಳಿದುಬರುತ್ತವೆ.

ಹೀಗೆ ದೇಶದ ಬಾಹ್ಯಸಂದರ್ಭಗಳ ಒಳಮರ್ಮಗಳು ನಮಗೆ ತಿಳಿದುಬಂದಮೇಲೆ ಜನತೆಯ ಸದ್ಯದ ಪರಿಸ್ಥಿತಿಯಲ್ಲಿ ಇರುವ ಗುಣಾವಗುಣಗಳನ್ನೂ ಬಲಾಬಲಗಳನ್ನೂ ಕಂಡುಕೊಳ್ಳಲು ನಾವು ಸಮರ್ಥರಾಗುತ್ತೇವೆ. ಆ ತಿಳಿವಳಿಕೆಯಿಂದ ನಮಗೆ ಆಗಬೇಕಾಗಿರುವ ಪರಿಷ್ಕಾರದ ಸ್ವರೂಪವು ನಿಶ್ಚಿತವಾಗುತ್ತದೆ. ಹೀಗೆ, ಜೀವನಚರಿತ್ರೆಯು ದೇಶ ಚರಿತ್ರೆಯ ಒಂದು ಅಂಗ. ಅದರಿಂದ ಜನತೆಯ ಜೀವನದ ಸುಧಾರಣೆಗೆ ಮೊದಲು ಆಗಬೇಕಾದ ಮನಸ್ಸಿದ್ಧತೆ.

ಚರಿತ್ರೆ ಎಂದರೆ ಹಿಂದಿನ ಅನುಭವದ ವೃತ್ತಾಂತ. ದೇಶಚರಿತ್ರೆ ಎಂದರೆ ದೇಶದ ಜನದ ಒಟ್ಟಿಗೆ ಆದ ಅನುಭವಗಳು. ಜೀವನ ಚರಿತ್ರೆಯೆಂದರೆ ಒಬ್ಬಾನೊಬ್ಬ ವ್ಯಕ್ತಿ ಮನುಷ್ಯನಿಗೆ ಆದ ಅನುಭವ.

ಚರಿತ್ರೆ, ಚರಿತೆ, ಚಾರಿತ್ರ್ಯ, ಚರ್ಯೆ, ಆಚರಣೆ, ಆಚಾರ - ಇವೆಲ್ಲ ಒಂದೇ ಬುಡಕಟ್ಟಿನಿಂದ ಬಂದಿರುವ ಪದಗಳು. ಅವುಗಳ ಸಾಮಾನ್ಯವಾದ ಅರ್ಥ "ನಡವಳಿಕೆ" ಎಂದು.

ಒಂದಾನೊಂದು ನಡವಳಿಕೆಯು ಕೆಲವು ಕಾರಣಗಳಿಂದ ಉಂಟಾಗುತ್ತದೆ. ಮತ್ತು ಅದು ಕೆಲವು ಫಲಿತಾಂಶಗಳನ್ನು ಸಂಪಾದಿಸುತ್ತದೆ. ಆ ಕಾರಣಗಳೂ, ಆ ನಡವಳಿಕೆಗಳೂ ಆ ಫಲ ಪರಿಣಾಮಗಳೂ ಎಲ್ಲವೂ ಒಟ್ಟಿಗೆ ಅನುಭವ ಎಂಬ ಮಾತಿನಲ್ಲಿ ಅಡಕವಾಗಿರುತ್ತದೆ. ಇಂಥ ಅನುಭವಗಳ ನಿರೂಪಣೆಯೇ ಪಾರಿಭಾಷಿಕವಾಗಿ (Technically) ಚರಿತ್ರೆ.

# ಚರಿತ್ರೆಯು ಅನುಭವ ಪರೀಕ್ಷೆ

ಚರಿತ್ರೆಯ ವ್ಯಾಸಂಗವು ಲೋಕನಿರ್ವಾಹಕ್ಕೆ ಅವಶ್ಯವಾದ ಒಂದು ಜ್ಞಾನ ಸಿದ್ಧತೆ. ಈ ವಿಷಯದಲ್ಲಿ ನಮ್ಮ ಜನದ ತಿಳಿವಳಿಕೆ ವಿಶದಪಟ್ಟು ಸ್ಥಿರಪಡಬೇಕಾಗಿದೆ. ಏಕೆಂದರೆ ಚರಿತ್ರೆಯೆಂದರೆ ಏನೋ ಪುರಾಣ, ಏನೋ ಆಕಾಶರೆಗಳೆ, ಏನೋ ಕಟ್ಟುಕಥೆ, ಯಾವುದೋ "ರಾಯ ಕೇಳೆಂದ," ಯಾವುದೋ "ಭೂಪ ಕೇಳೆಂದ," ಏನೋ ಬ್ರಹ್ಮಾಂಡ ಪುರಾಣ - ಎಂದು ಭಾವನೆ ಇಟ್ಟುಕೊಂಡಿರುವ ಜನ ನಮ್ಮಲ್ಲಿ ಬಹು ಮಂದಿ ಇದ್ದಾರೆ. ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗೂ ಕೂಡ ಇಂಥ ಅಸಂಗತವಾದ ಅಭಿಪ್ರಾಯ ಸಾಮಾನ್ಯವಾಗಿದೆ. ಚರಿತ್ರೆಯ ಓದು ಎಂದರೆ ಕೆಲವು ತಾರೀಖುಗಳನ್ನು ಉರು ಹೊಡೆಯುವುದು, ಕೆಲವು ಹೆಸರು ಪಟ್ಟಿಗಳನ್ನು ಬಾಯಿಪಾಠ ಮಾಡುವುದು - ಇದಿಷ್ಟೇ ಎಂದು ಅವರ ತಿಳಿವಳಿಕೆ. ಚರಿತ್ರೆಯ ಪಾಠದಲ್ಲಿ ಸ್ವತಂತ್ರವಾದ ಬುದ್ಧಿಕಾರ್ಯವೇನೂ ಇಲ್ಲ, ಅದು ನಡೆದುಹೋದದ್ದರ ಕಂತೆ ಎಂದು ಅವರ ತಿಳಿವಳಿಕೆ.

ಈ ಅಭಿಪ್ರಾಯ ಎಷ್ಟು ಮಾತ್ರವೂ ಸಾಧುವಲ್ಲ. ತಾರೀಖುಗಳೂ, ಹೆಸರುಗಳೂ ಚರಿತ್ರೆಯಲ್ಲ. ಬಾಗಿಲಿಗೆ ಹಾಕಿದ ಕೈ ಹಿಡಿಕೆ ಬಾಗಿಲಲ್ಲ. ಕೈ ಹಿಡಿಕೆ ಬಾಗಿಲನ್ನು ಉಪಯೋಗಿಸಲು ಒಂದು ಸಣ್ಣ ಸೌಕರ್ಯ. ಹಾಗೆಯೇ ತಾರೀಖು. ಹೆಸರು, ಒಂದು ಮಹಾಸಂಗತಿಯನ್ನು ಜ್ಞಾಪಕಕ್ಕೆ ತರುವ ಹೆಗ್ಗುರುತು. ಹೆಗ್ಗುರುತೇ ವಸ್ತುವಲ್ಲ. ವಸ್ತುಗುರುತಿಗಿಂತ ಬಹುದೊಡ್ಡದು.

ನಮ್ಮ ದೇಶದಲ್ಲಿ ಸಾರ್ವಜನಿಕ ವಿಚಾರಗಳಲ್ಲಿ ನಡೆಯುತ್ತಿರುವ ಪ್ರಮಾದಗಳಿಗೆ ಚರಿತ್ರೆಯ ಅಪರಿಚಯವೇ ಮುಖ್ಯ ಕಾರಣವೆಂದು ಹೇಳಬಹುದು. ಚರಿತ್ರೆಯೆಂದರೆ ಒಂದು ಪ್ರಶ್ನೆಯ ಹಿನ್ನೆಲೆ. ಆ ಪ್ರಶ್ನೆ ಹೇಗೆ ಹುಟ್ಟಿತು. ಹಿಂದಿನವರು ಆ ಪ್ರಶ್ನೆಯನ್ನು ಹೇಗೆ ಎದುರಿಸಿದರು, ಅವರ ನಡವಳಿಕೆಯಲ್ಲಿ ಇದ್ದ ಮನೋಗತವೇನು, ಆ ನಡವಳಿಕೆ ವ್ಯರ್ಥವಾದದ್ದಕ್ಕೆ ಕಾರಣಗಳೇನು - ಇಂಥ ಅನುಭವ ಪರೀಕ್ಷೆಯೇ ಚರಿತ್ರೆ. ಚರಿತ್ರೆಯನ್ನು ಒಳಹೊಕ್ಕು ವಿಮರ್ಶಿಸಿದರೆ ಹಿಂದೆ ಮಾಡಿದ ತಪ್ಪೇನು ಎಂದು ನಮಗೆ ಎಚ್ಚರಿಕೆ ದೊರೆಯುತ್ತದೆ. ಈಗ ನಾವು ಅಂಥ ತಪ್ಪನ್ನು ಮಾಡದಿರಲು ಯಾವ ಎಚ್ಚರಿಕೆ ಅವಶ್ಯ, ನಾವು ಯಾವ ಹೊಸ ನೀತಿಯನ್ನು ಅವಲಂಬಿಸಿದರೆ ಹಳೆಯ ಅಪಾಯ ನಮಗೆ ತಪ್ಪೀತು ? - ಈ ವಿಧವಾದ ಜಾಗ್ರತೆ ಮತ್ತು ಬೋಧನೆ ನಮಗೆ ಚರಿತ್ರೆಯ ವಿಮರ್ಶನೆಯಿಂದ ಆಗಬಹುದಾದ ಉಪಕಾರ.

ಉದಾಹರಣೆಗಳು : ಈಗ್ಗೆ ಎರಡು ಸಾವಿರದ ಐನೂರೂ ವರ್ಷಗಳ ಹಿಂದೆ ಗ್ರೀಸ್ ದೇಶವು ವಿದ್ಯೆ ವೈದುಷ್ಯಗಳಲ್ಲಿ ಯೂರೋಪಿನ ಜನಾಂಗಗಳಿಗೆ ಆದರ್ಶವಾಗಿತ್ತು. ಯೂರೋಪಿನ ಸಾಹಿತ್ಯ ಕಲೆ ಸಂಸ್ಕೃತಿಗಳಿಗೆ ಗ್ರೀಸ್ ದೇಶವು ಮಾತೃಸ್ಥಾನವೆಂದು ಎಲ್ಲರೂ ಅಂಗೀಕರಿಸಿದ್ದಾರೆ. ಅದು ಪಟ್ಟಣ-ರಾಜ್ಯಗಳಿದ್ದ (City-States) ದೇಶ. ಅಲ್ಲಿಯ ಅಥೆನ್ಸ್ (Athens) ಪಟ್ಟಣ-ರಾಜ್ಯವು ಪ್ರಜಾಪ್ರಭುತ್ವಕ್ಕೆ (Democracy) ಉದಾಹರಣೆಯಾಗಿತ್ತು. ಅಲ್ಲಿಯ ಸ್ಪಾರ್ಟಾ (Sparta) ಪಟ್ಟಣ-ರಾಜ್ಯವು ಶಿಸ್ತಿಗೂ ನಿಯಮಪಾಲನೆಗೂ (Discipline) ಹೆಸರಾಗಿತ್ತು. ಈ ಪಟ್ಟಣ-ರಾಜ್ಯಗಳು ಅಷ್ಟು ಉನ್ನತಿಗೆ ಏರಿದ್ದು ಹೇಗೆ, ಕಾಲಕ್ರಮದಲ್ಲಿ ಅವನತಿಗೆ ಇಳಿದದ್ದು ಹೇಗೆ, ಗ್ರೀಸಿನ ಆ ಪಟ್ಟಣ-ರಾಜ್ಯಗಳಲ್ಲಿ ಪರಸ್ಪರ ಸ್ಪರ್ಧೆ ಅತಿಯಾದಾಗ, ಪರ್ಷಿಯ ಮೊದಲಾದ ಇತರ ರಾಜ್ಯಗಳಿಂದ ಭಯ ಬಂದಾಗ, ಅದನ್ನು ನಿವಾರಿಸಿಕೊಳ್ಳಲು ಆ ಪಟ್ಟಣ-ರಾಜ್ಯಗಳು ಒಂದು ಸಂಯುಕ್ತ ವ್ಯವಸ್ಥೆಯ (Federation) ಒಡಂಬಡಿಕೆಯನ್ನು ಮಾಡಿಕೊಂಡದ್ದು ಹೇಗೆ, ಅದು ಕುಸಿದುಹೋದದ್ದು ಹೇಗೆ - ಈ ಪ್ರಶ್ನೆಗಳು ಪುರಾತನಕ್ಕೆ ಮಾತ್ರ ಸೇರಿದವಲ್ಲ. ಈಗ ಮುಗಿದುಹೋದವೂ ಅಲ್ಲ. ಅವು ನಮ್ಮ ಕಾಲದಲ್ಲೂ ರೂಪ ರೂಪಾಂತರಗಳಲ್ಲಿ ಅವತಾರ ಮಾಡುತ್ತಿರುವ ಪ್ರಶ್ನೆಗಳು.

ಗ್ರೀಸ್ ಆದಮೇಲೆ ರೋಮ್ ಚಕ್ರಾಧಿಪತ್ಯ ಬೆಳೆದು ಪ್ರಖ್ಯಾತವಾಯಿತು. ಅದು ಯೂರೋಪ್ ಖಂಡದ ಬಹುಭಾಗಗಳಲ್ಲಿ ತನ್ನ ದರ್ಪವನ್ನು ಹರಡಿತ್ತು. ಯೂರೋಪಿನ ಬಹುಜನಾಂಗಗಳ ವ್ಯವಹಾರ ನ್ಯಾಯಪದ್ಧತಿಗಳು (Jurisprudence) ರೋಮ್ ಚಕ್ರಾಧಿಪತ್ಯದಿಂದ ಪ್ರಚಾರಗೊಂಡವೆಂದು ಹೇಳುತ್ತಾರೆ. ಅಷ್ಟು ಬಲಿಷ್ಠವಾಗಿ ಪುಷ್ಟವಾಗಿದ್ದ ಚಕ್ರಾಧಿಪತ್ಯ ಏಕೆ ಸಡಿಲಿತು? ಅದಕ್ಕೆ ಕಾರಣರು ಯಾರು? ಪ್ರಜೆಗಳೇ ಪ್ರಭುಗಳೇ? ಪ್ರಜೆಯಲ್ಲಿ ದುರ್ಬಲತೆ ಉಂಟಾಯಿತೆಂಬುದಾದರೆ ಆ ದುರ್ಬಲತೆ ಕಾರಣಗಳೇನೇನು?

ಇಂಥ ಪ್ರಶ್ನೆಗಳಿಗೆ ಜರ್ಮನಿ ದೇಶದ ಚರಿತ್ರೆಯಲ್ಲಿಯೂ ಅವಕಾಶವಿದೆ. ಅದು ಇನ್ನೂರು ವರ್ಷಗಳ ಹಿಂದೆ ಒಂದು ಸಾಮಾನ್ಯವಾದ ಸಣ್ಣ ರಾಜ್ಯವಾಗಿತ್ತು. ಅಲ್ಲಿಂದಲ್ಲದು ಪ್ರಬಲಿಸಿ ನಾಲ್ಕನೆಯ ಕೈಸರನ ಕಾಲದಲ್ಲಿ ಮಹಾರಾಜ್ಯವಾಯಿತು. ಅದು ಹೇಗೆ? ಮಹಾ ಪ್ರಸಿದ್ಧಿಗೆ ಬಂದು ಕೆಲವು ಕಾಲ ಕಾರುಬಾರು ನಡೆಸಿ, ಆಮೇಲೆ ದುರ್ಬಲವಾಯಿತು. ಈಚೆಗೆ ಕ್ಷೀಣಿಸಿ ಇಬ್ಭಾಗವಾಗಿ ಈಗ ಮತ್ತೆ ತಲೆಯೆತ್ತಲು ಏನೇನು ಸಾಹಸ ಮಾಡಿದರೂ ಮುಂದಕ್ಕೆ ಸಾಗಲಾರದೆ ಇದೆ. ಜರ್ಮನಿಗೆ ವಿಜ್ಞಾನಶಾಸ್ತ್ರದಲ್ಲಿ ಅಗ್ರಸ್ಥಾನವೆಂದು

ಕೆಲವು ಕಾಲ ಪ್ರಸಿದ್ಧಿಯಿತ್ತು. ಅವರು ಮೇಧಾವಿಗಳು, ಮಹಾ ಪ್ರಯತ್ನ ಶೀಲರು. ಹಾಗಿದ್ದರೂ ಅವರನ್ನು ದುರದೃಷ್ಟ ಹೇಗೆ ಹಿಂಬಾಲಿಸುತ್ತಿದೆ?

ಇಂಗ್ಲೆಂಡನ್ನೇ ನೋಡೋಣ. ನಾನೂರು ವರ್ಷಗಳ ಹಿಂದೆ ಅದು ಒಂದು ಸಾಮಾನ್ಯವಾದ ಸಣ್ಣ ದ್ವೀಪ. ಅದು ಕ್ರಮೇಣ ಜಗದ್ವಿಸ್ತಾರವಾದ ಸಾಮ್ರಾಜ್ಯವನ್ನು ಕಟ್ಟಿತು. 'ಸೂರ್ಯಾಸ್ತಮಾನವಿಲ್ಲದ ಚಕ್ರಾಧಿಪತ್ಯ' ಎಂದು ಹೆಸರಾಯಿತು. ಹತ್ತಾರುವರ್ಷ ಹಾಗೆ ಅಭ್ಯುದಯದಲ್ಲಿದ್ದು ಈಗ ಮತ್ತೆ ಸಾಮಾನ್ಯ ದಶೆಗೆ ಹಿಂದಿರುಗುತ್ತಿದೆ. ಇದರ ಗುಟ್ಟೇನು?

ಹೀಗೆ ಜನತೆಯ ಹಾದಿವೃದ್ಧಿಗಳೂ, ಬಲಾಬಲಗಳೂ, ಉನ್ನತಿ ಅವನತಿಗಳೂ, ಅವರ ಸೌಜನ್ಯ, ಪಾರಿಶುದ್ಧ್ಯ, ಉದಾತ್ತತೆ, ನೀಚದೃಷ್ಟಿ, ಭೋಗಾಸಕ್ತಿ, ಅಹಂಕಾರ, ದರ್ಪ, ಮದ ಮಾತ್ಸರ್ಯಗಳು - ಇಂಥ ದೇಹಗುಣ ಮನೋಗುಣ ಬುದ್ಧಿಗುಣಗಳು ಅವರ ಏಳಿಗೆಗೂ ಬೀಳಿಗೂ ಹೇಗೆ ಹೇಗೆ ಕಾರಣವಾದವೆಂಬುದರ ವಿವೇಕವೇ ಚರಿತ್ರೆಯ ವ್ಯಾಸಂಗದಿಂದ ನಮಗೆ ಉಂಟಾಗುವ ಲಾಭ. ಅನುಭವ ಪರೀಕ್ಷೆಯ ಮೂಲಕ ಉತ್ಪನ್ನವಾದ ಯುಕ್ತಾಯುಕ್ತ ವಿವೇಕವು ನಮ್ಮ ಮುಂದಿನ ಪ್ರಯಾಣಕ್ಕೆ ಕೈದೀವಿಗೆಯಂತಾಗುತ್ತದೆ.

# ವ್ಯಕ್ತಿಚರಿತ್ರೆಗೆ ಅರ್ಹರಾದವರು

ದೇಶಚರಿತ್ರೆ (History) ಜನತೆಯ ಬಹಿರಂಗ ವ್ಯಾಪಾರವಾದರೆ ಜೀವನ ಚರಿತ್ರೆಯು (Biography) ಅವರ ಅಂತರಂಗ ಚಲಿತ.

ಜನದ ಮನಸ್ಸನ್ನು ಕೆರಳಿಸುವವರೂ, ಅವರ ಬುದ್ಧಿಯನ್ನು ಕೆಣಕುವವರೂ, ಅವರ ಆಶೆ ಅಭಿಲಾಷೆಗಳಿಗೆ ರೂಪಕೊಡುವವರೂ, ಅವರಲ್ಲಿ ಭಾವೋದ್ರೇಕ ಮಾಡಿಸುವವರೂ, ಹೊಸ ಹೊಸ ಅಭಿಪ್ರಾಯಗಳನ್ನು ಉತ್ಪಾದನೆ ಮಾಡಿಸುವವರೂ, ಚಳವಳಿಯೆಬ್ಬಿಸಿ ಆಂದೋಳನ ಮಾಡಿಸುವವರೂ, ಅವರ ಶೀಲಸ್ವಭಾವಗಳನ್ನು ತಿದ್ದಿ ಮಾರ್ಪಡಿಸುವವರೂ ದೇಶದ ನಾಯಕರು ತಾನೆ? ಈ ಪ್ರಸಿದ್ಧ ಪುರುಷರೇ ಜನದ ಅಂತರಂಗಕ್ಕೆ ಅಧಿಕಾರಿಗಳು. ನಾಯಕರಂತೆ ಜನತೆ, ದೇಶದ ಸಮಾರಂಭಗಳ ಮರ್ಮವನ್ನೂ ಸಂದರ್ಭ ಸನ್ನಿವೇಶಗಳ ಒಳರೂಪವನ್ನೂ ನಾವು ತಿಳಿದುಕೊಳ್ಳಬೇಕೆಂದರೆ ಆ ನಾಯಕರ ಅಂತರಂಗವನ್ನು ಕಂಡುಕೊಳ್ಳಬೇಕು. ಹೀಗೆ ಬರುತ್ತದೆ ಬೆಲೆ ಜೀವನಚರಿತ್ರೆಯೆಂಬ ಸಾಹಿತ್ಯ ಜಾತಿಗೆ.

ದೇಶಚರಿತ್ರೆಯಲ್ಲಿರುವಂತೆ ವ್ಯಕ್ತಿಚರಿತ್ರೆಯಲ್ಲಿಯೂ ಮುಖ್ಯ ಭಾಗಗಳು ಎರಡು : (೧) ಬಹಿರಂಗದ್ದು, (೨) ಅಂತರಂಗದ್ದು. ಒಬ್ಬ ಮನುಷ್ಯನ ಶೀಲ ಸ್ವಭಾವ ಲಕ್ಷಣಗಳು ಅವನನ್ನು ಹತ್ತಿರದಿಂದ ನೋಡಿರುವವರಿಗೆ ಚೆನ್ನಾಗಿ ತಿಳಿದಿರುತ್ತವೆ. ವ್ಯಕ್ತಿಚರಿತ್ರೆಯು ಯಾರನ್ನು ಕುರಿತದ್ದಾಗಿರುತ್ತದೆಯೋ ಆತನಿಗೂ ಯಾರು ಬರೆಯುತ್ತಾನೋ ಆತನಿಗೂ ಪರಸ್ಪರ ಆಪ್ತತೆಯೂ ಸ್ನೇಹವೂ ಎಷ್ಟು ಹೆಚ್ಚಾಗಿದ್ದರೆ ಆ ವ್ಯಕ್ತಿಚರಿತ್ರೆ ಅಷ್ಟು ಪ್ರಾಮಾಣಿಕವಾಗಿ ಅಷ್ಟು ಸ್ವಾರಸ್ಯಕರವಾಗಿರುತ್ತದೆ. ಇಂಗ್ಲೀಷಿನಲ್ಲಿ ಬಾಸ್ ವೆಲ್ (Boswell) ಬರೆದ ಜಾನ್ ಸನ್ ಪಂಡಿತನ (Dr. Johnson) ಜೀವನಚರಿತ್ರೆ, ಕಾರ್ ಲೈಲ್ (Carlyle) ಬರೆದ ಕ್ರಾಮ್ ವೆಲ್ (Cromwell), ಫ್ರೆಡರಿಕ್ (Frederick the Great) ಮೊದಲಾದವರ ಜೀವನಚರಿತ್ರೆಗಳು, ಲಾಕ್ ಹಾರ್ಟ್ (Lockhart) ಎಂಬವನು ಬರೆದ ಸ್ಕಾಟ್ (Scott) ಕವಿತಾ ಕಾದಂಬರಿಕಾರನ ಚರಿತ್ರೆ, ಮಾರ್ಲೇ (Lord Morley) ಬರೆದ ಗ್ಲಾಡ್ ಸ್ಟನ್ (Gladstone) ರಾಜನಿಪುಣನ ಜೀವನಚರಿತ್ರೆ - ಇವು ವ್ಯಕ್ತಿಚರಿತ್ರೆಗಳಲ್ಲಿ ಬಹು ಪ್ರಸಿದ್ಧವಾದವು.

ನಾನು ೧೯೧೦ರಲ್ಲಿ ದಿವಾನ್ ರಂಗಾಚಾರ್ಲು ಅವರನ್ನು ಕುರಿತ ವ್ಯಕ್ತಿಚರಿತ್ರೆಯನ್ನು ನನಗೆ ಸಾಧ್ಯವಿದ್ದಷ್ಟು ಮಟ್ಟಿಗಾದರೂ ಸಮಗ್ರ ಮಾಡಬೇಕೆಂದು ಆಗಿನ ದಿವಾನರಾಗಿದ್ದ ಪ್ರಧಾನ ಶಿರೋಮಣಿ ಟಿ. ಆನಂದರಾಯರವರನ್ನು ಕಂಡೆ. ಅವರು ರಂಗಾಚಾರ್ಲು ಅವರನ್ನು ಬಲ್ಲವರೆಂದೂ, ಆನಂದರಾಯರ

ತಂದೆ ರಾಜಾ ಸರ್ ಟಿ. ಮಾಧವ ರಾಯರೂ ರಂಗಾಚಾರ್ಲು ಅವರೂ ಗಾಢ ಸ್ನೇಹಿತರಾಗಿದ್ದರೆಂದೂ ಕೇಳಿದ್ದೆ. ಆ ಕಾರಣದಿಂದ ಆನಂದರಾಯರಿಂದ ನನಗೆ ಹೆಚ್ಚು ವಿಷಯ ತಿಳಿದೀತೆಂದು ನಿರೀಕ್ಷಿಸಿಕೊಂಡಿದ್ದೆ.

ಆನಂದರಾಯರು ನನ್ನ ಉದ್ದೇಶವನ್ನು ನಾನು ತಿಳಿಸಿದ ಕೂಡಲೆ - "ನೀವು ರಂಗಾಚಾರ್ಯರನ್ನು ನೋಡಿದ್ದೀರೋ?" ಎಂದರು.

"ಇಲ್ಲ; ನಾನು ಹುಟ್ಟುವಾಗ್ಗೆ ಅವರು ಸತ್ತು ೬-೭ ವರ್ಷವಾಗಿತ್ತು."

"ಹಾಗಾದರೆ ರಂಗಾಚಾರ್ಯರ ಮಾತುಕಥೆ ಮರ್ಯಾದೆ ಕಾರ್ಯಧೋರಣ - ಇಂಥಾ ವ್ಯಕ್ತಿ ವಿಶೇಷ ಕಥೆಗಳನ್ನು (Anecdotes, Table -talk) ಹೇಳಿಲ್ಲವೆ?"

"ಅದನ್ನು ಕುರಿತು ಹೆಚ್ಚಾಗಿ ಹೇಳಿಲ್ಲ. ನಾನು ಕೇಳಿರುವಷ್ಟು ಮಾತ್ರ ಹೇಳಿದ್ದೇನೆ."

"ಒಳ್ಳೆಯದು; ನೀವು ಮೈಸೂರಿಗೆ ಹೋಗಿ ಅಲ್ಲಿ ಅಂಬಿಲ್ ನರಸಿಂಹಯ್ಯಂಗಾರ್ಯರು, ವೆಂಕಟಕೃಷ್ಣಯ್ಯನವರು, ಇನಾಂದಾರ್ ರಾಘವಾಚಾರ್ಯರು - ಇವರನ್ನು ಕಂಡು ಪ್ರಶ್ನೆ ಮಾಡಿ ಅವರು ಹೇಳುವುದನ್ನು ಗುರುತು ಮಾಡಿಕೊಂಡು ಬಂದು ಅದನ್ನು ನಿಮ್ಮ ಪುಸ್ತಕಕ್ಕೆ ಅನುಬಂಧವಾಗಿ ಸೇರಿಸಿರಿ. ಆಗ ಈ ಪುಸ್ತಕ ಇನ್ನೂ ಸ್ವಾರಸ್ಯಪಡಬಹುದು."

ಹೀಗೆ ಶ್ರೀ ಆನಂದರಾಯರ ಸಲಹೆ. ನಾನು ಅದನ್ನಂಗೀಕರಸಿ ಅದನ್ನು ನಡಸಲು ಪ್ರಯತ್ನ ಮಾಡಿದೆ. ಅದಕ್ಕಾಗಿ ಮೈಸೂರಿನಲ್ಲಿ ೨೦-೨೫ ದಿನವಿದ್ದೆ. ಆದರೆ ನಿರೀಕ್ಷೆ ಮಾಡಿದಷ್ಟು ಲಾಭ ದೊರೆಯಲಿಲ್ಲ. ಶ್ರೀ ಅಂಬಿಲ್ ನರಸಿಂಹಯ್ಯಂಗಾರ್ಯರು ಕಾಯಿಲೆಯಲ್ಲಿದ್ದದ್ದರಿಂದ ನಾಲ್ಕು ವಾಕ್ಯಗಳನ್ನು ಪೀಠಿಕೆಯಾಗಿ ಕೊಟ್ಟಿದ್ದಾರೆ. ವೆಂಕಟಕೃಷ್ಣಯ್ಯನವರು ಅವರು ಬರೆದ ಪೀಠಿಕೆಯಲ್ಲಿ ವೈಯಕ್ತಿಕ ಸಂಗತಿಗಳನ್ನು ಏನನ್ನೂ ಹೇಳಿಲ್ಲ.

ನಮ್ಮ ಜನ ವ್ಯಕ್ತಿಚರಿತ್ರೆಗೆ ಉಪಯುಕ್ತವಾಗುವ ಅಂಶಗಳೇನೆಂಬುದನ್ನು ಗಮನವಿರಿಸಿ ತಿಳಿದುಕೊಳ್ಳಬೇಕು. "ಆತ ಮಹಾ ದೊಡ್ಡ ಮನುಷ್ಯ," "ಆಜಾನುಬಾಹು," "ಉದಾತ್ತಸಂಕಲ್ಪ," "ಪ್ರತಿಭಾವಂತ," "ನಿರಂತರೋದ್ಯೋಗಿ" - ಇಂಥ ಸಾಮಾನ್ಯವಾದ ವರ್ಣನೆಯ ಪದಗಳಿಂದ ಉದ್ದಿಷ್ಟ ವ್ಯಕ್ತಿಯ ಸ್ವರೂಪವು ನಮ್ಮ ಮನಃಫಲಕದ ಮೇಲೆ ಆಳವಾಗಿ ಮುದ್ರಿತವಾಗುವುದಿಲ್ಲ.

ಕೆಲವರು ರಂಗಾಚಾರ್ಯರ ವಿಷಯ ಹೇಳಿ ಎಂದು ಕೇಳಿದರೆ ಅದನ್ನು ನೆವಮಾಡಿಕೊಂಡು ತಮ್ಮ ವಿಷಯವನ್ನೇ ಹೇಳಿಕೊಳ್ಳುತ್ತಾರೆ. ರಂಗಾಚಾರ್ಯರಿಗೆ ಬಂದ ಯಾವುದೋ ಒಂದು ಕಷ್ಟ, ಆ ಸಂದರ್ಭದಲ್ಲಿ ಅವರು ಈ ತಿಮ್ಮಣ್ಣಯ್ಯನನ್ನು ಕೇಳಿಕೊಂಡ ರೀತಿ, ಈ ತಿಮ್ಮಣ್ಣಯ್ಯನು ಮಾಡಿದ ಸಾಹಸ, ಈ ತಿಮ್ಮಣ್ಣಯ್ಯನ ಬುದ್ಧಿವಂತಿಕೆಯಿಂದ ಆ ಕಷ್ಟ ನಿವಾರಣೆಯಾದದ್ದು, ಈ ತಿಮ್ಮಣ್ಣಯ್ಯನ ವಿಷಯದಲ್ಲಿ ರಂಗಾಚಾರ್ಯರು ಇಟ್ಟುಕೊಂಡಿದ್ದ ಕೃತಜ್ಞತೆ ಗೌರವಗಳು, ಈ ತಿಮ್ಮಣ್ಣಯ್ಯನ ಪ್ರತಾಪ ಮಹಿಮೆಗಳು - ಇಂಥವೇ ಆ ಪುಣ್ಯಾತ್ಮನ ಬಾಯಿಂದ ಹರಿದು ಬಂದು ರಂಗಾಚಾರ್ಯರನ್ನು ಅಮುಖ್ಯರನ್ನಾಗಿ ಮಾಡುತ್ತವೆ.

## ಶೀಲ ನಿದರ್ಶನ

ವ್ಯಕ್ತಿಚರಿತ್ರೆಗೆ ಬೇಕಾದದ್ದು ಶೀಲನಿದರ್ಶಕವಾದ ಘಟನೆಗಳು (Character revealing incidents).

ಒಂದು ಉದಾಹರಣೆ : ದಿವಾನ್ ರಂಗಾಚಾರ್ಲು ಅವರ ವ್ಯಕ್ತಿಚರಿತ್ರೆಯನ್ನು ಕುರಿತು ನಾನು ದಿವಾನ್ ಟಿ. ಆನಂದರಾಯರನ್ನು ಕಾಣಲು ಹೋಗಿದ್ದ ಸಂಗತಿಯನ್ನು ಮೇಲೆ ಪ್ರಸ್ತಾಪಿಸಿದೆಯಷ್ಟೆ. ಆಗ ನಾನು ಸುಮಾರು ಇಪ್ಪತ್ತರಲ್ಲಿದ್ದವನು; ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ಮಣ್ಣು ತಿಂದಿದ್ದೆ. ಆನಂದರಾಯರವರಾದರೋ ಅರುವತ್ತರ ಹತ್ತಿರಕ್ಕೆ ಬಂದಿದ್ದವರು. ನಡೆನುಡಿಗಳೆರಡರಲ್ಲೂ ಕರಾರುವಾಕ್ ಮನುಷ್ಯರೆಂದು ಹೆಸರಾಗಿದ್ದವರು. ಅವರು ಇಂಗ್ಲಿಷ್ ಸಾಹಿತ್ಯದಲ್ಲಿ ಪರಿಣತರಾಗಿದ್ದವರು. ಇಂಥಾ ದೊಡ್ಡ ಮನುಷ್ಯರಲ್ಲಿ ನನ್ನಂಥವನು ಹೇಗೆ ನಡೆದುಕೊಳ್ಳುವುದು ಯುಕ್ತವೆಂದು ನಾನು ಚಿಂತೆ ಮಾಡಿದ್ದೆ. ಅವರು ಗೊತ್ತು ಮಾಡಿದ್ದ ದಿವಸ, ಗೊತ್ತು ಮಾಡಿದ್ದ ವೇಳೆಗೆ, ಗೊತ್ತು ಮಾಡಿದ್ದ ಸ್ಥಳಕ್ಕೆ ಹೋದೆ. ಸ್ಥಳ ಅವರ ಮನೆ, ಹೊತ್ತು ಮಧ್ಯಾಹ್ನ ಮೂರು ಗಂಟೆ.

ನಾನು ಮನೆಯ ಆವರಣವನ್ನು ಪ್ರವೇಶಿಸಿ, ಮೊಗಸಾಲೆಯ ಮೆಟ್ಟಿಲನ್ನು ಹತ್ತುತ್ತಿದ್ದಂತೆ ಒಬ್ಬ ಕಾರಕೂನರು ಒಳಗಿನಿಂದ ಬಂದು ನನ್ನ ಹೆಸರು ಹೇಳಿ, ಇಂಗ್ಲಿಷಿನಲ್ಲಿ “ನೀವು ಇಂಥವರೇ?” ಎಂದು ಕೇಳಿದರು. ನಾನು “ಹೌದು” ಎನ್ನುತ್ತಲೇ ಅವರು “ಒಳಕ್ಕೆ ಹೋಗಿ” ಎಂದರು. ಅದರಂತೆ ನಾನು ಅವರು ತೋರಿಸಿದ ಕೊಠಡಿಯೊಳಕ್ಕೆ ಕಾಲಿಟ್ಟೆ. ಆನಂದರಾಯರವರು ಅಲ್ಲಿ ನಿಂತಿದ್ದರು. ನಾನು “ನಮಸ್ಕಾರ” ಎಂದು ಹೇಳಿ ಕೈಮುಗಿದೆ. ಅವರು ಪ್ರತಿ ನಮಸ್ಕಾರ ಮಾಡಲು ಕೈಕುಲುಕಿ (ಷೇಕ್ ಹ್ಯಾಂಡ್)ಗಾಗಿ ತಮ್ಮ ಕೈಯನ್ನು ಚಾಚಿದರು. ಅದಾದ ಮೇಲೆ ಒಂದು ಕುರ್ಚಿಯನ್ನು ತೋರಿಸಿ (ಇಂಗ್ಲಿಷಿನಲ್ಲಿ) “ದಯವಿಟ್ಟು ಕೂಡಿ” ಎಂದರು. ನಾನು ಕುಳಿತುಕೊಳ್ಳದೆ ನನ್ನ ಪ್ರವರವನ್ನು ಹೇಗೆ ಮೊದಲು ಮಾಡಬೇಕೆಂದು ಯೋಚಿಸುತ್ತಿದ್ದೆ. ಅವರು ಎರಡನೆಯ ಸಾರಿ, “ದಯವಿಟ್ಟು ಕೂಡಿರಿ” ಎಂದರು. ನಾನು “ಪರವಾಗಿಲ್ಲ” ಎಂದು ಹೇಳಿ ಮುಂಬರಿಯುವ ಪ್ರಯತ್ನದಲ್ಲಿದ್ದೆ. ಆನಂದರಾಯರು ಮೂರನೆಯ ಸಾರಿ “ದಯವಿಟ್ಟು ಕೂಡಿರಿ. ನೀವು ಕೂತುಕೊಳ್ಳುವುದಕ್ಕೆ ಮುಂಚೆ ನಾನು ಕೂಡುವುದಿಲ್ಲ. ಇಬ್ಬರೂ ಕೂಡದಿದ್ದರೆ ಮಾತು ಕಥೆಯಿಲ್ಲ” ಎಂದು ಖಂಡಿತವಾದ ಧ್ವನಿಯಿಂದ ಹೇಳಿದರು. ಬಳಿಕ ನಾನು ಕುಳಿತು ಮಾತುಕಥೆಯಾಡಿದೆ ಎಲ್ಲ ಸುಮುಖವಾಯಿತು. ಆನಂದರಾಯರವರು ಎಂಥ ವಿನಯ ಮರ್ಯಾದೆಗಳುಳ್ಳವರು ಎಂಬುದಕ್ಕೆ ಇದು ನಿದರ್ಶನ.

ಆನಂದರಾಯರು ಸೆನ್ಸಸ್ ಕಮಿಷನರಾಗಿದ್ದರು. ಆಗ ಅವರ ಕಛೇರಿಯ ಮ್ಯಾನೇಜರಾಗಿದ್ದವರು ರಾಮಯ್ಯ ಎಂಬವರು. ಆನಂದರಾಯರು ಕಛೇರಿಗೆ ಹನ್ನೊಂದು ಘಂಟೆಗೆ ಸರಿಯಾಗಿ ಬರುವರು. ಒಂದು ನಿಮಿಷ ಮುಂದೆ ಅಲ್ಲ; ಒಂದು ನಿಮಿಷ ಹಿಂದೆ ಅಲ್ಲ. ಗಡಿಯಾರ ಟಣ್ ಟಣ್ ಎನ್ನಲು ಮೊದಲಾದಾಗ ಅವರು ಹೊಸಲಿನಿಂದ ಒಳಗೆ ಹೆಜ್ಜೆಯಿಡುವರು. ಹಾಗೆ ಬಂದು ತಮ್ಮ ಕುರ್ಚಿಯ ಮೇಲೆ ಕುಳಿತ ಮರುಕ್ಷಣದಲ್ಲಿಯೇ "ರಾಮಯ್ಯ, ಎಲ್ಲರೂ ಬಂದಿದ್ದಾರೆಯೇ?" ಎಂದು ಕೇಳುವರು. ಆನಂದರಾಯರಿಗೆ ದೃಷ್ಟಿಪಾಟವ ಕೊಂಚ ಕಡಮೆ. ಅವರಿಗೆ ತುಂಬ ಸಮೀಪವಾಗಿದ್ದ ವಸ್ತುವನ್ನು ಮಾತ್ರ ಗುರುತಿಸಲಾಗುತ್ತಿತ್ತು. ಓದುವುದೂ ಬರೆಯುವುದೂ ಅವರಿಗೆ ಪ್ರಯಾಸವಾಗಿತ್ತು. ರಾಮಯ್ಯನವರು "ಎಲ್ಲರೂ ಬಂದಿದ್ದಾರೆ" ಎಂದು ಹೇಳಿದ ಕೂಡಲೆ "ಸಿಬ್ಬಂದಿಯೆಲ್ಲ ಬಂದಿದೆಯೆ?" ಎಂದು ಕೇಳುವರು. "ಎಲ್ಲ ಬಂದಿದೆ ಸರ್" ಎಂದು ಜವಾಬು ದೊರೆತ ಕೂಡಲೆ "ಹಾಗಾದರೆ ಎಲ್ಲರಿಗೂ ಕಾಫಿ ಬಡಿಸಿದ್ದಾಗಲಿ" ಎನ್ನುವರು. ಹೀಗೆಯೇ ಮಧ್ಯಾಹ್ನ ಎರಡು ಘಂಟೆಯ ಸುಮಾರಿನಲ್ಲಿಯೂ ಆಗುವುದು. ದೊಡ್ಡ ಲೋಟದಲ್ಲಿ ಕಾಫಿ, ದೊಡ್ಡ ತಟ್ಟೆಯಲ್ಲಿ ಉಪಾಹಾರ, ಈ ಕಾಫಿ ಉಪಾಹಾರಗಳು ಆನಂದರಾಯರ ಸ್ವಂತವಾಗಿ ಸಹೋದ್ಯೋಗಿಗಳಿಗೆ ದಿನದಿನವೂ ಮಾಡಿಸುತ್ತಿದ್ದ ಔತಣ.

ಆನಂದರಾಯರು ಆಗರ್ಭ ಶ್ರೀಮಂತರು. ಆ ಶ್ರೀಮಂತಿಕೆಯ ಜೊತೆಗೆ ಔದಾರ್ಯವೂ ವಿನಯವೂ ಸ್ವಾಭಾವಿಕವಾಗಿ ಬಂದಿದ್ದ ಗುಣಗಳೆಂಬುದನ್ನು ನೆನೆಸಿಕೊಂಡರೆ ಹರ್ಷ ಉಂಟಾಗುತ್ತದೆ. ಇದು ವ್ಯಕ್ತಿವಿಶೇಷಕ್ಕೆ ನಿದರ್ಶನ.

ಮೇಲಣ ಎರಡು ಸಂಗತಿಗಳಿಂದ ಆನಂದರಾಯರ ಸ್ವರೂಪವನ್ನು ಸಂಪೂರ್ಣವಾಗಿ ಚಿತ್ರಿಸಿದಂತಾಯಿತೆಂದು ಯಾರೂ ಭಾವಿಸಲಾರರು. ಆ ಸಂಗತಿಗಳು ಅವರ ಅಧಿಕಾರ ನಿರ್ವಾಹ ದಕ್ಷತೆಯನ್ನು ತೋರಿಸುತ್ತವೆಯೆಂದೂ ಯಾರೂ ತಿಳಿಯರು. ಅವರ ಅಧಿಕಾರ ನಿರ್ವಾಹದ ರೀತಿನೀತಿಗಳ ವಿಚಾರದಲ್ಲಿ ಅಭಿಪ್ರಾಯ ಭೇದವಿರುವುದು ಸ್ವಾಭಾವಿಕ. ರಾಜಕೀಯವಾದರೋ ಸಾರ್ವಜನಿಕ ವಿಚಾರ. ಮರ್ಯಾದೆ ಸ್ನೇಹಗಳಾದರೋ ಅವರ ವೈಯಕ್ತಿಕ ವಿಶೇಷ.

ವ್ಯಕ್ತಿಯ ಸ್ವಭಾವಕ್ಕೂ ಸಾರ್ವಜನಿಕ ವರ್ತನೆಗೂ ಸಂಬಂಧವುಂಟೇ ಉಂಟು. ಆ ಸಂಬಂಧ ಆನಂದರಾಯರಲ್ಲಿ ಎಂಥಾದ್ದಾಗಿತ್ತು, ಎಷ್ಟು ಮಾತ್ರವಿತ್ತು ಎಂಬುದನ್ನು ಚರಿತ್ರಕಾರನು ಪರಾಮರ್ಶಿಸಿಯಾನು. ಆದರೆ ಅವನಿಗೆ ಬೇಕಾದ ಸಾಮಗ್ರಿ ಮೇಲಿನಂಥ ಸಂಗತಿಗಳಲ್ಲಿ ಅಡಗಿರುತ್ತದೆ.

## ಚಾರಿತ್ರಿಕ ಸಾಮಗ್ರಿ

ನಮ್ಮ ಜನ ನಮ್ಮ ಪ್ರಸಿದ್ಧ ವ್ಯಕ್ತಿಗಳಿಗೆ ಸಂಬಂಧಪಟ್ಟಂತೆ ಅವರ ಸಂಭಾಷಣ ರೀತಿ, ಮಿತ್ರ ಬಂಧು ಜನ ಪ್ರತಿವರ್ತನೆಗಳು, ಅವರ ಸಂಗೀತ ಸಾಹಿತ್ಯಾದಿ ಕಲಾಭಿರುಚಿ, ಅವರ ವೈಯಕ್ತಿಕ ಧ್ಯೇಯಗಳು, ಅವರ ಆಚಾರ ವ್ಯವಹಾರಗಳ ರೀತಿ, ಉಡುಗೆ ತೊಡುಗೆಗಳಲ್ಲಿ ಅವರ ಅಭ್ಯಾಸ, ಅವರ ಶ್ರಮ ಸಹಿಷ್ಣುತೆ, ಇತ್ಯಾದಿ ವೈಯಕ್ತಿಕ ಗುಣವಿಶೇಷಗಳನ್ನು ತೋರ್ಪಡಿಸುವಂಥ ಸಂದರ್ಭಗಳನ್ನು ಗುರುತಿಸಿ ಬರೆದಿಟ್ಟರೆ ಅದು ಚರಿತ್ರಕಾರನಿಗೆ ಅಮೂಲ್ಯವಾದ ಸಾಮಗ್ರಿಯಾಗುತ್ತದೆ.

ನಮ್ಮಲ್ಲಿ ಚಾರಿತ್ರಿಕ ಸಾಮಗ್ರಿಯನ್ನು ಕಾಪಾಡಿಡುವ ಪದ್ಧತಿ ವಿರಳವಾಗಿದೆ. ಬಹು ಪ್ರಖ್ಯಾತರಾಗಿ ಲೋಕಮಾನ್ಯರಾಗಿರುವ ಅನೇಕ ಮಂದಿ ಮಹನೀಯರ ಜೀವನಕ್ಕೆ ಸಂಬಂಧಪಟ್ಟ ಜ್ಞಾಪಕಗಳನ್ನೂ ದಾಖಲೆಗಳನ್ನೂ ಆ ಮಹನೀಯರು ಸಂಗ್ರಹಿಸಿಡುವ ಗೋಜಿಗೆ ಹೋಗುವುಲ್ಲ. ಒಬ್ಬ ಮಹನೀಯನ ಬಳಿಗೆ ಹೋಗಿ - ನಿಮ್ಮ ತಂದೆ ಮಹಾನುಭಾವರು. ಅವರನ್ನು ಕುರಿತು ನಾನು ಬರೆಯಬೇಕೆಂದಿದ್ದೇನೆ. ಅದಕ್ಕೆ ಬೇಕಾದ ಕಾಗದ ಪತ್ರಗಳು ಟೀಕು ಟಿಪ್ಪಣಿಗಳು ಏನಾದರೂ ಇದ್ದರೆ ದಯಮಾಡಿ ಕೊಡಬೇಕು - ಎಂದು ಬೇಡಿದರೆ ಹಾಗೆ ಬೇಡಲ್ಪಟ್ಟವರು ಬರಿಗೈ ತೋರಿಸುವುದು, ತಮ್ಮಲ್ಲಿ ಯಾವ ಸಾಮಗ್ರಿಯೂ ಇಲ್ಲವೆನ್ನುವುದು ನನಗೆ ಅನುಭವಕ್ಕೆ ಬಂದಿರುವ ಸಂಗತಿ. ನಾಲ್ಕಾರು ಕಡೆ ನಾನು ಹೀಗೆ ನಿರಾಶನಾಗಿದ್ದೇನೆ. ಮಹಾ ಪ್ರಸಿದ್ಧರಾದ ಸರ್ ಟಿ. ಮುತ್ತುಸ್ವಾಮಿ ಐಯ್ಯರ್, ಅಥವಾ ಸರ್ ಕೆ. ಶೇಷಾದ್ರಿ ಐಯ್ಯರ್ ಇಂಥವರನ್ನು ಕುರಿತೇ ನಮಗೆ ಯಾವ ಗ್ರಂಥಸಾಮಗ್ರಿಯೂ ಸಿಕ್ಕುತ್ತಿಲ್ಲ. ಅವರು ಸಂಪಾದಿಸಿದ ಸ್ವತ್ತನ್ನು ಅನುಭವಿಸುತ್ತಿರುವ ಅವರ ವಂಶಸ್ಥರೇ ಅವರ ವಿಷಯದಲ್ಲಿ ಹೆಮ್ಮೆ ಇಲ್ಲದವರಾಗಿರುತ್ತಾರೆ. ತಮ್ಮ ಪೂರ್ವಿಕರ ಖ್ಯಾತಿಯನ್ನು ಕಾಪಾಡಬೇಕೆಂಬ ಪಿತೃಭಕ್ತಿ ಸಹ ನಮ್ಮವರಲ್ಲಿ ಅಪರೂಪವಾಗಿದೆ.

ಈ ಪುಸ್ತಕದಲ್ಲಿರುವ ಪ್ರಕರಣಗಳು ನನ್ನ ಜ್ಞಾಪಕದಲ್ಲಿದ್ದು ರೂಪಗೊಂಡವು. ಅವಕ್ಕೆ ರುಜುವಾತು ದಾಖಲೆ ಮೊದಲಾದ ಲಿಖಿತ ಪ್ರಮಾಣಗಳನ್ನು ಕೊಟ್ಟಿಲ್ಲ. ಆ ಕೆಲಸ ನನಗೆ ಈಗ ಸಾಧ್ಯವಿಲ್ಲ.

ಲ್ಯಾಟಿನ್ ಭಾಷೆಯಲ್ಲಿ Ex pede Herculem “ಹರ್ಕ್ಯುಲೀಸನ ಪಾದವನ್ನು ನೋಡಿ ಮಿಕ್ಕದ್ದನ್ನು ತಿಳಿದುಕೊ” - ಎಂಬ ನಾಡ ನುಡಿಯುಂಟಂತೆ. ಹರ್ಕ್ಯುಲಿಸನು (ನಮ್ಮ ಭೀಮಸೇನ ದೇವರಂತೆ) ದೈವಾಂಶ ಸಂಭೂತನಾದ ಮಹಾವೀರ. ಆ ವೀರನ ಸಾಹಸಕಾರ್ಯಗಳು ಪುರಾಣ ಪ್ರಸಿದ್ಧವಾಗಿವೆ. ಅವನ ವಿಗ್ರಹವನ್ನು ಕುರಿತದ್ದು ಮೇಲಿನ ನಾಡನುಡಿ. ಹರ್ಕ್ಯುಲೀಸನ ಆಕಾರ ಮಹಿಮೆಯನ್ನು

ತಿಳಿದುಕೊಳ್ಳಬೇಕೆಂದರೆ ಅವನ ದೇಹವನ್ನು ತಲೆಯಿಂದ ಅಡಿಯವರೆಗೂ ನೋಡಬೇಕಾದದ್ದಿಲ್ಲ. ಅವನ ಹೆಬ್ಬೆಟ್ಟೊಂದನ್ನು ನೋಡಿದರೆ ಸಾಕು, ಮಿಕ್ಕ ಅಂಗಗಳೆಲ್ಲ ಅದರ ಪ್ರಮಾಣಕ್ಕೆ ಸರಿಯಾಗುವಂತೆ ಇರುತ್ತವೆ. - ಎಂದು ತಾತ್ಪರ್ಯ.

ಈ ಪ್ರಬಂಧಗಳು ಚರಿತ್ರೆಯಲ್ಲ. ಇವು ಆಯಾ ಮಹನೀಯರ ಮುಖಗಳ ಪಾರ್ಶ್ವ ರೇಖೆಗಳು. ಇವು ಜೀವನಚರಿತ್ರಕಾರನಿಗೂ, ದೇಶಚರಿತ್ರಕಾರನಿಗೂ ಅಷ್ಟಿಷ್ಟು ಉಪ ಯುಕ್ತವಾಗಬಹುದಾದ ಕಚ್ಚಾ ಸಾಮಗ್ರಿ.

ನನ್ನ ಬುದ್ಧಿಗೆ ಅರ್ಹರೆಂದು ತೋರಿದ ಕೆಲಮಂದಿ ಮಹನೀಯರ ವಿಷಯದಲ್ಲಿ ನನ್ನ ಕಣ್ಣು ಕಂಡಷ್ಟನ್ನು, ನನ್ನ ಮನಸ್ಸು ಪಟ್ಟಷ್ಟನ್ನು, ನನ್ನ ನೆನಪು ಉಸಿರಿದಷ್ಟನ್ನು ಒಬ್ಬರಿಬ್ಬರು ಚಿರಂಜೀವಿ ಮಿತ್ರರಿಗೆ ಹೇಳಿ ಅವರ ಕೈಯಿಂದ ಬರೆಯಿಸಿದ್ದೇನೆ. ಇವು ಸಂಪೂರ್ಣಗಳಲ್ಲ. ನಾನು ಹೇಳಿರುವ ಅಭಿಪ್ರಾಯಗಳು ಸರ್ವಸಮ್ಮತವಾದವೆಂದೂ ನನ್ನ ಮನಸ್ಸಿನಲ್ಲಿಲ್ಲ. ನಾನು ಹೇಳಿರುವ ಎಷ್ಟೋ ಅಭಿಪ್ರಾಯಗಳಿಂದ ಬೇರೆಯಾದ ಭಾವನೆಗಳು ಇತರರ ಮನಸ್ಸಿನಲ್ಲಿರಬಹುದು. ನನ್ನ ನೆನಪಿನಲ್ಲಿಯೂ ಲೋಪಗಳಿರಬಹುದು. ಅಭಿಪ್ರಾಯ ವಿಷಯದಲ್ಲಿ ಭೇದವಿರುವುದು ಅಷ್ಟು ಮುಖ್ಯವಲ್ಲ; ವಸ್ತುಸಂಗತಿಗಳಲ್ಲಿ ಭೇದವಿದ್ದರೆ ಅದನ್ನು ದಾಖಲೆ ನೋಡಿ ತಿದ್ದಿಕೊಳ್ಳಬೇಕಾಗುತ್ತದೆ. ನಾನು ಹೇಳಿರುವ ವಸ್ತು ಸಂಗತಿಗಳಲ್ಲಿ ಏನಾದರೂ ಹೆಚ್ಚು ಕಡಮೆ ವಾಚಕರಿಗೆ ಕಂಡುಬಂದಲ್ಲಿ ಅವರು ದಯ ಮಾಡಿ ನನಗೆ ತಿಳಿಸಿಕೊಡಬೇಕೆಂದು ಬೇಡುತ್ತೇನೆ.

ಸಂತಃ ಸದಾಭಿಗಂತವ್ಯಾ
ಯದಿ ನೋಪದಿಶಂತ್ಯಪಿ ।
ಯಾಸ್ತು ಸ್ವೈರಕಥಾಸ್ತೇಷಾಂ
ಉಪದೇಶಾ ಭವಂತಿ ತಾಃ ॥

[ಸತ್ಪುರುಷರಲ್ಲಿಗೆ ಯಾವಾಗಲೂ ಹೋಗುತ್ತಿರಬೇಕಾದದ್ದು. ಅವರು (ಉಪದೇಶವೆಂದು ಹೇಳಿ) ಉಪದೇಶ ಮಾಡದೆ ಇದ್ದರೂ ಪರವೆಯಿಲ್ಲ. ಅವರು ತಮ್ಮ ಮನಸ್ಸು ಬಂದಂತೆ ಏನು ಮಾತುಕಥೆ ನಡಸಿದರೂ ಅದೇ ನಮಗೆ ಉಪದೇಶವಾಗುತ್ತದೆ.]



# ಕೆ. ರಾಮಚಂದ್ರರಾಯರವರು

೧೮೬೫-೧೯೨೯

೧೯೦೬ ಅಥವಾ ೧೯೦೭ ರಲ್ಲಿ ಬೆಂಗಳೂರಿಗೆ ಶ್ರೀ ಅಭೇದಾನಂದ ಸ್ವಾಮಿಗಳವರು ದಯಮಾಡಿಸಿದರು. ಅವರು ಭಗವಾನ್ ಶ್ರೀ ರಾಮಕೃಷ್ಣ ಪರಮಹಂಸರ ಸಾಕ್ಷಾಚ್ಛಿಷ್ಯರಲ್ಲೊಬ್ಬರು. ಸ್ವಾಮಿ ವಿವೇಕಾನಂದರವರು ಅಮೆರಿಕದಲ್ಲಿ ಹಿಂದೂಮತದ ಕೀರ್ತಿ ಜ್ಯೋತಿಯನ್ನು ಬೆಳಗಿಸಿದ, ನಮ್ಮ ದೇಶಕ್ಕೆ ಪಾಶ್ಚಾತ್ಯ ಪ್ರಪಂಚದಲ್ಲಿ ಅಪೂರ್ವವಾದ ಗಣ್ಯತೆಯನ್ನು ಸಂಪಾದಿಸಿಕೊಟ್ಟು ಸ್ವದೇಶಕ್ಕೆ ಹಿಂತಿರುಗಿದ ಬಳಿಕ, ಅಮೆರಿಕದಲ್ಲಿ ಅವರು ಪ್ರಾರಂಭಿಸಿದ್ದ ಕಾರ್ಯವನ್ನು ಅಲ್ಲಿ ನಿಂತು ಯಶಸ್ಕರವಾದ ರೀತಿಯಲ್ಲಿ ಮುಂಬರಿಸಿದ್ದವರು ಅಭೇದಾನಂದಸ್ವಾಮಿಗಳು, ಅಂಥ ಮಹನೀಯರು ನಮ್ಮೂರಿಗೆ ಬರುವುದೆಂದರೆ ಅದೊಂದು ಅತಿಶಯಭಾಗ್ಯವೆಂಬಂತೆ ನಮ್ಮ ಮಹಾಜನರು ಭಾವಿಸಿದ್ದು ಸ್ವಾಭಾವಿಕವೇ ಅಲ್ಲವೆ? ಅಭೇದಾನಂದರವರಿಗೆ ಸ್ವಾಗತ ನೀಡುವುದಕ್ಕಾಗಿ ವಿಶೇಷವಾದ ಏರ್ಪಾಟುಗಳು ನಡೆಯುತ್ತಿದ್ದುವು. ಯುವರಾಜರ ವಿದ್ಯಾಗುರುಗಳಾಗಿದ್ದು ಕಡೆಗೆ ಶ್ರೀನಿವಾಸಾನಂದ ನಾಮಧೇಯದಿಂದ ಯತ್ಯಾಶ್ರಮ ಗ್ರಹಣಮಾಡಿದ್ದ ಶ್ರೀಮಾನ್ ಎಂ. ಎ. ನಾರಣಯ್ಯಂಗಾರ್ಯರವರೂ, ಹಲಸೂರಿನ ಡಾ ॥ ವೆಂಕಟರಂಗಂ ಅವರೂ, ಆಗ ಸ್ಯಾನಿಟರಿ ಕಮಿಷನರಾಗಿದ್ದ ಡಾ ॥ ಪಲ್ಪು ಅವರೂ, ಅಂದಿನ ಸಮಾಜಪ್ರಮುಖರು ಇನ್ನೂ ಅನೇಕರೂ ಆ ಸ್ವಾಗತ ಸಮಾರಂಭದಲ್ಲಿ ಉತ್ಸಾಹದಿಂದ ಕೆಲಸಮಾಡುತ್ತಿದ್ದರು.

ಆ ಉತ್ಸಾಹದ ಗಾಳಿ ನನ್ನನ್ನೂ ಸೋಕಿತು. ಆದರೆ ನನ್ನ ಉತ್ಸಾಹಕ್ಕೆ ರೂಪು ಕೊಡಲು ಬೇಕಾದ ಯಾವ ಸಂಪತ್ತೂ ನನಗಿರಲಿಲ್ಲ. ಹುಡುಗ, ಅದಕ್ಕಿಂತ ಹೆಚ್ಚಾಗಿ ಬಡವ. ಆದರೂ-ಅಥವಾ, ಆದದ್ದರಿಂದಲೇ-ನನ್ನ ಮನಸ್ಸು ಒಂದು ವಿಚಿತ್ರ ಮಾರ್ಗವನ್ನು ಹಿಡಿಯಿತು. ಆಗ ವಿದ್ಯೆ ಕಲಿತ ಜನಕ್ಕೆ ಇಂಗ್ಲಿಷು ತುಂಬಾ ಮೋಹಕವಾಗಿತ್ತು. ಅವರ ಮನಸ್ಸಿನಲ್ಲಿ ಉದಿಸಿದ ಭಾವನೆಗಳು ಇಂಗ್ಲಿಷಿನ ಸಂಪರ್ಕದಿಂದ ಉದಿಸಿದವು. ಆ ಭಾವನೆಗಳಿಗೆ ಇಂಗ್ಲೀಷ್ ಒಪ್ಪುವಷ್ಟು ಚೆನ್ನಾಗಿ ಕನ್ನಡ ಒಗ್ಗಿಬರಲಾರದು-ಹೀಗೆ ಅಭಿಪ್ರಾಯ

ಸಾಮಾನ್ಯವಾಗಿತ್ತು. ಇಂಗ್ಲಿಷಿನಲ್ಲಿ ಪದ್ಯರಚನೆ ಮಾಡುವ ಹುಚ್ಚು ಬಹುಮಂದಿಗೆ ಹಿಡಿದಿತ್ತು. ಆ ಹುಚ್ಚು ಹೇಗೋ ನನಗೂ ಅಂಟಿತು. ನಾನು ಓದಿದ್ದ ಅಲ್ಪ ಸ್ವಲ್ಪ ಇಂಗ್ಲೀಷ್ ಕಾವ್ಯಗಳ ಪೈಕಿ ಲಾಂಗ್ ಫೆಲೊ (Longfellow) ಎಂಬ ಅಮೆರಿಕನ್ ಕವಿಯ ಫ್ಲಾರೆನ್ಸ್ ನೈಟಿಂಗೇಲ್ (Florence Nightingale) ಎಂಬ ವೈದ್ಯದಾದಿಯ ಲೋಕೋಪಕಾರ ಮಹಿಮೆಯನ್ನು ಕುರಿತ ಒಂದು ಕವಿತೆ ನನ್ನ ಮನಸ್ಸನ್ನು ಬಲವಾಗಿ ಹಿಡಿದಿತ್ತು. ಆ ಕವಿತೆ ನನಗೆ ಈಗ ಸಂಪೂರ್ಣವಾಗಿ ಮರೆತುಹೋಗಿದೆ. ಆದರೆ ಆ ಚಿಕ್ಕ ಪ್ರಾಯದಲ್ಲಿ ಆ ಲಾಂಗಫೆಲೋ ಛಂದಸ್ಸಿನಲ್ಲಿ, ಆ ಸರಳ ಸರಸ ಶೈಲಿಯಲ್ಲಿ, ಪದ್ಯ ಬರೆಯಬೇಕೆಂದು ಮನಸ್ಸಿನಲ್ಲಿ ಚಪಲವಿತ್ತು. ಅಭೇದಾನಂದರ ಆಗಮನದಿಂದ ಆ ಚಪಲಕ್ಕೆ ಒಂದು ಸಾಮಗ್ರಿ ದೊರಕಿತು. ವೇದಾಂತದ ಮಹತ್ತ್ವ, ವಿವೇಕಾನಂದರ ಆದರ್ಶ, ಅಭೇದಾನಂದರ ದೀಕ್ಷೆ-ಈ ವಿಷಯಗಳನ್ನು ಕುರಿತು ಇಂಗ್ಲಿಷಿನಲ್ಲಿ ಸ್ವಾಗತ ಪದ್ಯ ರೂಪದಲ್ಲಿ ನಾಲ್ಕಾರು ಪಂಕ್ತಿಗಳನ್ನು ಹೊಸೆದೆ. ಆಮೇಲೆ ಅದನ್ನು ಪ್ರಕಟಪಡಿಸುವ ಯೋಚನೆ. ಆ ಬಾಲಕೃತಿಯನ್ನು ಕೆಲಮಂದಿ ಆಪ್ತೇಷ್ಟರಿಗೆ ತೋರಿಸಲಾಗಿ. ಅವರು ಇಂಗ್ಲೀಷ್ ಕವಿತ್ವವನ್ನು ಶೋಧಿಸಿ ಯೋಗ್ಯತಾನಿರ್ಣಯ ಮಾಡಬಲ್ಲ ಜನ ಆಗ ಬೆಂಗಳೂರಿನಲ್ಲಿ ಮೂವರಿದ್ದಾರೆಂದು ನನಗೆ ಹೇಳಿದರು. ಆ ಮೂವರು (೧) ಲಂಡನ್ ಮಿಷನ್ ಹೈಸ್ಕೂಲಿನ ಹೆಡ್ಮಾಸ್ಟರು, ಶ್ರೀ ಕೆ. ರಾಮಚಂದ್ರರಾಯರವರು, ಬಿ.ಎ., (೨) ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲೀಷ್ ಅಧ್ಯಾಪಕರಾಗಿದ್ದ ಕೆ.ಎ. ಕೃಷ್ಣಸ್ವಾಮಿ ಅಯ್ಯರ್ ಅವರು, ಬಿ. ಎ., (೩) ಬಿ.ಎ., ಪಾಸ್ ಮಾಡಿ ಬಿ.ಎಲ್., ಗೆ ವ್ಯಾಸಂಗ ಮಾಡುತ್ತಿದ್ದ ಎಂ.ಜಿ. ವರದಾಚಾರ್ಯರವರು. ನಾನು ಈ ಮೂವರಲ್ಲಿ ಒಬ್ಬರನ್ನಾದರೂ ನೋಡಿ ಅವರಿಂದ ಪದ್ಯ ಸರಿಯಾಗಿದೆ ಎಂದು ಒಪ್ಪಿಗೆ ಪಡೆದರೆ ಬಳಿಕ ಅದನ್ನು ಅಚ್ಚುಮಾಡಿಸಬಹುದು ಎಂದು ನನ್ನ ಸ್ನೇಹಿತರು ಸಲಹೆಕೊಟ್ಟರು. ಮತ್ತು ಆ ಮೂವರೂ ಒಳ್ಳೆಯವರೆಂದೂ ಸಹಾನುಭೂತಿಯಿಂದ ನೋಡುವವರೆಂದೂ ಭರವಸೆ ಕೊಟ್ಟರು.

ಅವರ ಮಾತಿನಂತೆ ನಾನು ಮೊದಲು ರಾಮಚಂದ್ರರಾಯರಲ್ಲಿಗೆ ಹೋದೆ. ಆಗ ಅವರು ಚಾಮರಾಜಪೇಟೆಯ ಅಪ್ಪಾಜಪ್ಪನವರ ಅಗ್ರಹಾರದಲ್ಲಿ ಪೂರ್ವದ ಕಡೆಯ ಸಾಲಿನ ಮಧ್ಯದಲ್ಲಿಯ ಒಂದು ಮನೆಯಲ್ಲಿ ವಾಸವಾಗಿದ್ದರು. ನಾನು ಹೋದದ್ದು ಒಂದು ದಿನ ಅಪರಾಹ್ಣ ಸುಮಾರು ೩ ಘಂಟೆಯ ವೇಳೆಯಲ್ಲಿ. ನನ್ನ ಮುಖವನ್ನು ನೋಡಿದಕೂಡಲೆ ಯಾರೋ ವಿದ್ಯಾರ್ಥಿ ಇರಬಹುದೆಂದು ಅವರು ಊಹಿಸಿರಬೇಕು. ಆದರದಿಂದ ಒಳಕ್ಕೆ ಕರೆದರು. ಅಲ್ಲಿ ಒಂದು ಕೊಠಡಿಯಲ್ಲಿ ಪುಸ್ತಕತುಂಬಿದ ಎರಡು ಬೀರುಗಳು, ಒಂದು ಮೇಜು, ಎರಡು ಕುರ್ಚಿ, ಒಂದು ಹಲಗೆ ಮಂಚ-ಇಷ್ಟಿದ್ದವು. ಅವರು ಸೌಮ್ಯವಾಗಿ ನನಗೆ ಒಂದು ಕುರ್ಚಿ ತೋರಿಸಿ, "ಕೂತುಕೊಳ್ಳಿ" ಎಂದರು. ನಾನು ಹಲಗೆಯಮೇಲೆ ಕುಳಿತು

ನನ್ನ ಉದ್ದೇಶವನ್ನು ಸೂಕ್ಷ್ಮವಾಗಿ ವಿವರಿಸಿದೆ. ರಾಮಚಂದ್ರರಾಯರು ನನ್ನ ವಿದ್ಯೆಯ ಮಟ್ಟವೆಷ್ಟರದೆಂಬುದನ್ನೂ ನನ್ನ ಕಾವ್ಯಪರಿಚಯವೆಷ್ಟರದೆಂಬುದನ್ನೂ ಪ್ರಶ್ನೆ ಹಾಕಿ ತಿಳಿದುಕೊಂಡ ಬಳಿಕ, ನನ್ನ ಕಡತವನ್ನು ಬಿಚ್ಚಬೇಕೆಂದರು. ನಾನು ವಾಸ್ತವವಾದ ಸಂಕೋಚದಿಂದಲೇ ನನ್ನ ಬರವಣಿಗೆಯನ್ನು ಅವರಿಗೊಪ್ಪಿಸಿದೆ. ನನ್ನ ಅಕ್ಷರದಿಂದಲೇ ಅವರಿಗೆ ಬೇಸರವುಂಟಾಗಬಹುದಿತ್ತು. ಕೋಳಿಯ ಕಾಲಿನ ಮಣ್ಣು ಕೆರೆತವೇ ನನ್ನ ಬರವಣಿಗೆಯೆಂದು ಯಾರಾದರೂ ಹೇಳಿದ್ದಿದ್ದರೆ ಅದು ತಪ್ಪಾಗುತ್ತಿರಲಿಲ್ಲ. ರಾಮಚಂದ್ರರಾಯರಾದರೋ ನಗುಮುಖದಿಂದ ಅದನ್ನು ಒಮ್ಮೆ ಮೊದಲಿನಿಂದ ಕಡೆಯವರೆಗೂ ಓದಿದರು. ಆಮೇಲೆ ಸೀಸದ ಕಡ್ಡಿ ತೆಗೆದುಕೊಂಡು ಇನ್ನೊಂದು ಸಲ ಓದಿದರು. ಆಗ ಅಲ್ಲಲ್ಲಿ ಪೆನ್ಸಿಲ್ ಗುರ್ತುಮಾಡಿ ಅಲ್ಲಿ ಸ್ವರಶೈಥಿಲ್ಯ ತೋರುತ್ತದೆಂದೂ ತಿದ್ದುವುದು ಅವಶ್ಯವೆಂದೂ ಸೂಚಿಸಿದರು. ಪುನಃ ಇನ್ನೊಂದಾವರ್ತಿ ಓದಿದರು. ಓದಿ, ಇನ್ನಷ್ಟು ಗುರುತುಮಾಡಿದರು. ಕಡೆಗೆ "ನಿನ್ನ ವಿಷಯ ಸ್ವಾರಸ್ಯವಾಗಿದೆ : ಭಾಷೆಯ ಮೇಲಿನ ಹಿಡಿತಮಾತ್ರ ಅಲ್ಲಲ್ಲಿ ಸಡಿಲವಾಗಿದೆ. ವಾಕ್ಯಬಂಧ ಇನ್ನೂ ಸರಳವಾಗಿದ್ದರೆ ಚೆನ್ನ. ನೀನು ಇದನ್ನು ಕೃಷ್ಣಸ್ವಾಮಯ್ಯರವರಿಗೆ ತೋರಿಸು. ಅವರು ತಿದ್ದಿಕೊಟ್ಟಾರು. ಅವರು ಒಪ್ಪಿಕೊಂಡರೆ ತಿಳಿದವರೆಲ್ಲರೂ ಒಪ್ಪುತ್ತಾರೆ. ಅವರು ಬಹಳ ಒಳ್ಳೆಯವರು. ನೀನು ಅವರಲ್ಲಿಗೆ ಧೈರ್ಯವಾಗಿ ಹೋಗಬಹುದು" -ಎಂದು ಪ್ರೋತ್ಸಾಹಕೊಟ್ಟರು. ಆ ಬಳಿಕ ನಾನು ಕೃಷ್ಣಸ್ವಾಮಯ್ಯನವರ ಬಳಿ ಹೋದೆ. ಅವರ ವಿಷಯದಲ್ಲಿ ರಾಮಚಂದ್ರರಾಯರು ಆಡಿದ್ದ ಮಾತು ಎಷ್ಟು ಸಂಪೂರ್ಣವಾಗಿ ನಿಜ ಎಂಬುದನ್ನು ಕಂಡುಕೊಂಡೆ. ಆ ಕಥೆ ಬೇರೆ ಪ್ರಕರಣಕ್ಕೆ ವಿಷಯವಾಗಬೇಕಾದದ್ದು.

ರಾಮಚಂದ್ರರಾಯರವರಿಗೂ ನನಗೂ ಮೊದಲು ಪರಿಚಯವಾದದ್ದು ಹೀಗೆ. ಅದು ಬಹುಬೇಗ ಪಕ್ವವಾಯಿತು. ರಾಮಚಂದ್ರರಾಯರವರೂ ಇಂಗ್ಲಿಷಿನಲ್ಲಿ ಆಗಾಗ ಪದ್ಯ ರಚನೆ ಮಾಡುತ್ತಿದ್ದುದುಂಟು. ಅವರು ಹಾಗೆ ಮಾಡಿದಾಗಲೆಲ್ಲ ನನ್ನನ್ನು ಕರೆಯಿಸಿ ನನಗೆ ಕೃತಿಯನ್ನು ಓದಿ ಹೇಳಿ ವಿವರಿಸುತ್ತಿದ್ದರು. ಅವರ ರಚನೆಗಳಲ್ಲಿ ಬಹು ಮುಖ್ಯವಾದದ್ದೆಂದು ನನಗೆ ತೋರಿರುವುದು "ದಿ ಹಿಂದೂ ವಿಡೋ" -ಎಂಬುದು. ಅದು ಹಿಂದೂ ವಿಧವೆಯ ಮನಸ್ಸಿನೊಳಗಣ ಸಂಕಟಗಳನ್ನೂ ಹೊರಗಿನ ಕಷ್ಟಾನುಭವಗಳನ್ನೂ ಮನೋವೇಧಕವಾದ ರೀತಿಯಲ್ಲಿ ವರ್ಣಿಸುತ್ತದೆ. ನಾನು ಅವರನ್ನು ನೋಡಿದಂದಿಗೆ ಅನೇಕ ವರ್ಷಗಳ ಹಿಂದೆಯೇ ಅದು ಮುದ್ರಿತವಾಗಿತ್ತು. ಅದರ ಮೇಲೆ ಅವರು ಆರ್.ಎಸ್. ಭುವನಕರ್ ಎಂದು ಕುಲನಾಮಧೇಯವನ್ನು ಹಾಕಿದ್ದರು.

ರಾಮಚಂದ್ರರಾಯರಿಗಿದ್ದ ಉದ್ಯೋಗ ಲಂಡನ್ ಮಿಷನ್ ಹೈಸ್ಕೂಲಿನ ಮುಖ್ಯೋಪಾಧ್ಯಾಯ (ಹೆಡ್ಮಾಸ್ಟರ್) ಕಾರ್ಯ. ಆ ಸ್ಕೂಲು ಆಗ ಇದ್ದ ಕಟ್ಟಡದಲ್ಲಿ ಈಗ ಸರ್ಕಾರದ ಸೆಂಟ್ರಲ್ ಹೈಸ್ಕೂಲು ನಡೆಯುತ್ತಿದೆ. ಆ ಕಟ್ಟಡದ ಉತ್ತರ ಪಕ್ಕಕ್ಕೆ ಡಿಸ್ಟ್ರಿಕ್ಟ್ ಆಫೀಸೂ ಪಶ್ಚಿಮ ಪಕ್ಕಕ್ಕೆ ಮೈಸೂರು ಬ್ಯಾಂಕೂ ಆಂಜನೇಯನ ಗುಡಿಯೂ ಇವೆ. ಲಂಡನ್ ಮಿಷನ್ ಹೈಸ್ಕೂಲು ಆ ಕಾಲಕ್ಕೆ ಪ್ರಸಿದ್ಧವಾದ ಸಂಸ್ಥೆ. ಪಟ್ಟಣದ ಸಾರ್ವಜನಿಕ ಕೇಂದ್ರಗಳಲ್ಲಿ ಅದೂ ಒಂದು. ಅದರ ಸಭಾಮಂದಿರದಲ್ಲಿ ಒಳ್ಳೊಳ್ಳೆಯ ಉಪನ್ಯಾಸಗಳು ಪ್ರಾಯಶಃ ವಾರವಾರವೂ ನಡೆಯುತ್ತಿದ್ದವು. ಮಿತ್ರಮಂಡಲಿ ಎಂಬ ವಿದ್ಯಾರ್ಥಿ ಸಂಸ್ಥೆಯ ಕಾರ್ಯಕ್ಷೇತ್ರ ಅಲ್ಲಿಯೇ, ಈಗ ಆ ಲಂಡನ್ ಮಿಷನ್ ಸ್ಕೂಲು ವೆಸ್ಲಿಯನ್ ಸ್ಕೂಲಿನೊಡನೆ ಐಕ್ಯವಾಗಿ ಯುನೈಟೆಡ್ ಮಿಷನ್ ಸ್ಕೂಲು ಎನ್ನಿಸಿಕೊಂಡಿದೆ. ರಾಮಚಂದ್ರರಾಯರು ಪಾಠ ಹೇಳುತ್ತಿದ್ದ ಮುಖ್ಯ ವಿಷಯ ಇಂಗ್ಲೀಷ್ ಭಾಷೆ ಸಾಹಿತ್ಯಗಳು.

ಬೆಂಗಳೂರಿನಲ್ಲಿ ಯಾವ ಸಾರ್ವಜನಿಕ ಸಭೆ ನಡೆದರೂ ಯಾವ ಸಾಮಾಜಿಕ ಸಮಾರಂಭ ನಡೆದರೂ ಅಲ್ಲಿ ಶ್ರೀಮಾನ್ ರಾಮಚಂದ್ರರಾಯರವರು ಅಗ್ರಪಂಕ್ತಿಯಲ್ಲಿರುತ್ತಿದ್ದರು. ಅವರ ಸೌಜನ್ಯದಿಂದಲೂ ಭೂತದಯಾ ತತ್ಪರತೆಯಿಂದಲೂ ಮತ್ತು ಅವರ ವಾಕ್ ಸೌಷ್ಠವದಿಂದಲೂ ಅವರಿಗೆ ಈ ಸನ್ಮಾನ್ಯತೆ ಬಂದಿತ್ತು. ಅವರ ಇಂಗ್ಲೀಷ್ ಭಾಷಣಶೈಲಿ ಮೃದುವಾದ ಪದಗಳಿಂದಲೂ, ಎಷ್ಟು ಉಚಿತವೋ ಅದಕ್ಕೆ ಕಡಿಮೆ ಬೀಳದೆಯೂ ಹೆಚ್ಚಾಗದೆಯೂ ಇರುವ ಮಿತಪ್ರಮಾಣದಿಂದಲೂ, ಮನಮುಟ್ಟುವ ವಿಶದತೆಯಿಂದಲೂ ಮತ್ತು ಗಾಂಭೀರ್ಯದಿಂದಲೂ ವಿದ್ವದ್ರಂಜಕವಾಗಿತ್ತು. ಎಲ್ಲ ಸುಶಬ್ದಗಳು; ವ್ಯಾಕರಣ ಮರ್ಯಾದಾವಿಹಿತವಾದ ವಾಕ್ಯಬಂಧ; ಸ್ಫುಟವಾದ ವರ್ಣೋಚ್ಚಾರಣೆ; ತುಂಬ ಎತ್ತರವೂ ತುಂಬ ತಗ್ಗೂ ಅಲ್ಲದ ಸ್ನಿಗ್ಧಧ್ವನಿ-ಇವು ಅವರ ಭಾಷಣದ ಬಾಹ್ಯ ಲಕ್ಷಣಗಳು. ಅದರ ಅಂತರ್ಲಕ್ಷಣವೆಂದರೆ ವಿಷಯದಲ್ಲಿ ಅವರಿಗಿದ್ದ ಶ್ರದ್ಧಾಸಕ್ತಿಗಳು. ನಮ್ಮ ಸಮಾಜದ ಪುರೋಭಿವೃದ್ಧಿಗೆ ಸಂಬಂಧಪಟ್ಟ ಎಲ್ಲ ವಿಷಯಗಳಲ್ಲಿಯೂ ರಾಮಚಂದ್ರರಾಯರಿಗೆ ಗಾಢವಾದ ಆಸಕ್ತಿ ಇತ್ತು. ಮುಖ್ಯವಾಗಿ ವಿದ್ಯಾಭ್ಯಾಸ, ಸಾಹಿತ್ಯ, ಸಮಾಜ ಪರಿಷ್ಕಾರ, ಸಂಪದಭಿವೃದ್ಧಿಯ ಪ್ರಯತ್ನ-ಈ ನಾಲ್ಕು ವಿಚಾರಗಳೂ ಸಾಮಾನ್ಯವಾಗಿ ಆಗಿನ ದೇಶಾಭಿಮಾನಿಗಳಿಗೆ ಬಹು ಮುಖ್ಯವಾಗಿದ್ದವು.

ಸಾರ್ವಜನಿಕ ಜೀವನದಲ್ಲಿ ರಾಮಚಂದ್ರರಾಯರೊಡನೆ ಸಹೋದ್ಯೋಗಿಗಳಾಗಿದ್ದವರಲ್ಲಿ ಮುಖ್ಯರಾದ ಕೆಲವರ ಹೆಸರುಗಳನ್ನು ಇಲ್ಲಿ ಸ್ಮರಿಸಬೇಕಾಗಿದೆ : ರಿಟೈರ್ಡ್ ಸಬ್ ಜಡ್ಜ್ ಸೂಲಿಕುಂಟೆ ವರದರಾಜಯ್ಯಂಗಾರ್ಯರು, ಅವರ ಜ್ಯೇಷ್ಠ ಪುತ್ರರು ಅಡ್ವೊಕೇಟ್ ಎಸ್.

ವೆಂಕಟಾಚಲಯ್ಯಂಗಾರ್ಯರು, 'ಮೈಸೂರು ಸ್ಟ್ಯಾಂಡರ್ಡ್' ಮತ್ತು 'ನಡೆಗನ್ನಡಿ' ಪತ್ರಿಕೆಗಳ ಸಂಪಾದಕರು ಎಂ. ಶ್ರೀನಿವಾಸಯ್ಯಂಗಾರ್ಯರು, ಬೆಳ್ಳಾವೆ ಸೋಮನಾಥಯ್ಯನವರು, ಬಸವನಗುಡಿಯ ಅನಾಥಾಲಯದ ಸ್ಥಾಪಕರಾದ ಸಿ ವೆಂಕಟವರದಯ್ಯಂಗಾರ್ಯರು, ಅಡ್ವೊಕೇಟ್ ಸಾಲಿಗ್ರಾಮದ ಸುಬ್ಬರಾಯರು. ಇವರೂ ಇವರುಗಳ ಸ್ನೇಹಿತರುಗಳೂ ಸೇರಿ 'ಇಂಡಿಯನ್ ಪ್ರೋಗ್ರೆಸಿವ್ ಯೂನಿಯನ್' ಅಥವಾ 'ದೇಶಾಭ್ಯುದಯ ಸಂಘ' ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದ್ದರು. ರಾಮಚಂದ್ರರಾಯರು ಅದರ ಸಂಚಾಲಕರಲ್ಲೊಬ್ಬರು. ಆ ಸಂಸ್ಥೆಯ ಪರವಾಗಿ ೧೯೦೫ರ ಜನವರಿಯಿಂದ ಕನ್ನಡದಲ್ಲಿ 'ಹಿತವಾದಿ' ಎಂಬ ಮಾಸಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಆ ಪತ್ರಿಕೆಯಲ್ಲಿ ಮಹನೀಯರ ಚರಿತ್ರೆ, ಸದ್ವಿಚಾರದ ಉಪನ್ಯಾಸಗಳು, ನಾನಾ ಭಾಷೆಗಳ ಉದ್ ಗ್ರಂಥಗಳಿಂದ ಆರಿಸಲ್ಪಟ್ಟ ವಾಕ್ಯಗಳು, ಚಾರಿತ್ರಿಕ ದೃಷ್ಟಾಂತಗಳು, ಸತ್ಕಾರ್ಯಗಳನ್ನು ಕುರಿತ ವರ್ತಮಾನಗಳು ಮತ್ತು ಮನೋರಂಜಕವಾದ ವಿವಿಧ ವಿಷಯಗಳು ಪ್ರಕಟವಾಗುತ್ತಿದ್ದವು. ನಾನು ಲೋವರ್ ಸೆಕಂಡರಿ ಕ್ಲಾಸಿನಲ್ಲಿದ್ದಾಗ ಆ ಪತ್ರಿಕೆಯನ್ನೋದಲು ಮೊದಲುಮಾಡಿ ಅದು ಬದುಕಿದ್ದಷ್ಟು ಕಾಲವೂ ಅದನ್ನು ಕುತೂಹಲದಿಂದ ನೋಡುತ್ತಿದ್ದೆ. ನನ್ನ ಮನಸ್ಸಿಗೆ ಆ ಪತ್ರಿಕೆಯ ಭಾಷಾಶೈಲಿ ಬಹಳ ಒಳ್ಳೆಯದೆಂದು ತೋರಿತು. ಅದರ ಲೇಖಕರು ಕೈಗೆ ತೆಗೆದುಕೊಂಡ ವಿಷಯವನ್ನು ಬಹು ಸರಳವಾದ ಮತ್ತು ಸುಲಭವಾದ ಮತ್ತು ಕೊಂಚವೇ ಆದ ಮಾತುಗಳಿಂದ ಓದುಗರಿಗೆ ಸಂದೇಹವುಂಟಾಗದಂತೆ ವಿಶದಗೊಳಿಸಿ, ಅವರ ಮನಸ್ಸನ್ನು ಹೊಸ ಆಲೋಚನೆಯ ಕಡೆಗೆ ಪ್ರೇರಿಸುತ್ತಿದ್ದರು. ನಮ್ಮ ಸಮಾಜವ್ಯವಸ್ಥೆಯಲ್ಲಿ ಕಾಣಬರುವ ಕುಂದುಕೊರತೆಗಳ ಕಡೆಗೆ ಗಮನವನ್ನೆಳೆಯುವುದರಲ್ಲಿ ಅತ್ಯಂತ ಮುಖ್ಯವಾದ ಪ್ರಯತ್ನವೆಂದರೆ ಈ 'ಹಿತವಾದಿ' ಲೇಖಕರದು. ಅವರು ಹಳೆಯ ಪ್ರಶ್ನೆಗಳಿಗೆ ಒಂದು ಹೊಸ ದೃಷ್ಟಿಯನ್ನು ತರುತ್ತಿದ್ದರು, ಚಿರಪರಿಚಯದ ಮರೆಯಲ್ಲಿ ಗಮನ ತಪ್ಪಿಸಿಕೊಂಡಿದ್ದ ಒಂದು ಅನ್ಯಾಯವನ್ನೋ ವಕ್ರತೆಯನ್ನೋ ಅವರು ತಮ್ಮ ವಾದಶಕ್ತಿಯಿಂದ ಜನದ ಗಮನದಮೇಲೆ ಒತ್ತುತ್ತಿದ್ದರು. 'ಹಿತವಾದಿ' ಪತ್ರಿಕೆ ನಡಸಿದಂಥ ಸಮಾಜಸೇವೆಯನ್ನು-ಅಂಥ ಸಮಾಜ ಪರಿಷ್ಕಾರ ಪ್ರಚಾರವನ್ನು-ಕನ್ನಡದಲ್ಲಿ ಇನ್ನಾವ ಪತ್ರಿಕೆಯೂ ನಡಸಿಲ್ಲವೆಂದೂ ನಾನು ಧೈರ್ಯವಾಗಿ ಹೇಳಬಲ್ಲೆ. ಈ ಸಮಾರಂಭಕ್ಕೆ ಬೆಂಬಲವಾಗಿದ್ದ ನಾಲ್ವರೈವರಲ್ಲಿ ರಾಮಚಂದ್ರರಾಯರೊಬ್ಬರು.

ಪತ್ರಿಕಾ ಪ್ರಕಟನೆಯ ಜೊತೆಗೆ ದೇಶಾಭ್ಯುದಯ ಸಂಘವು ಸಣ್ಣ ಸಣ್ಣ ಪುಸ್ತಕಗಳನ್ನು ಪ್ರಕಟಿಸುತ್ತಿತ್ತು. ಪ್ರೌಢ ವಿವಾಹ, ವಿತಂತು ವಿವಾಹ ಮೊದಲಾದ ಸಮಾಜಸುಧಾರಣೆಯ ಪ್ರಶ್ನೆಗಳನ್ನು ಕುರಿತು ಜನಸಾಮಾನ್ಯದಲ್ಲಿ ತಿಳಿವಳಿಕೆ ಹರಡುವುದು ಆ ಲಘು ಪುಸ್ತಕಗಳ ಉದ್ದೇಶ, ಹಾಗೆಯೇ ಆ ಸಂಘವು

ಆಗಾಗ ಸ್ನೇಹಗೋಷ್ಠಿಗಳನ್ನು ಸೇರಿಸುತ್ತಿತ್ತು, ರಾಮಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ, ರ್ಯಾನಡೆ-ಮೊದಲಾದ ಸುಧಾರಕರ ಜ್ಞಾಪಕಾರ್ಥವಾಗಿಯೂ, ಸಹಗಮನ ನಿರೋಧ ಶಾಸನ, ಬಾಲ್ಯವಿವಾಹ ನಿರೋಧ ಶಾಸನ, ವಿತಂತು ವಿವಾಹ ಸಮರ್ಥನ ಶಾಸನ ಮೊದಲಾದ ಸುಧಾರಣೆಯ ಕಾನೂನುಗಳು ಹುಟ್ಟಿದ ದಿನಗಳ ಜ್ಞಾಪಕಾರ್ಥವಾಗಿಯೂ ವರ್ಷವರ್ಷವೂ ಸಭೆ ಸೇರಿಸಿ ಉಪನ್ಯಾಸಗಳನ್ನೇರ್ಪಡಿಸುತ್ತಿತ್ತು; ಆಗಾಗ ಚರ್ಚೆ ಸಂಭಾಷಣೆಗಳಿಗಾಗಿ ಮಿತ್ರ ಗೋಷ್ಠಿಗಳನ್ನು ಏರ್ಪಡಿಸುತ್ತಿತ್ತು. ಈ ಸಭಾಕಾರ್ಯಗಳಲ್ಲಿ ರಾಮಚಂದ್ರರಾಯರ ಪಾಲಿಗೆ ಮುಖ್ಯ ಭಾಗ ಬರುತ್ತಿತ್ತು.

ದೇಶಾಭ್ಯುದಯ ಸಂಘವು ವಿಶೇಷವಾಗಿ ವಿದ್ಯೆ ಸಂಸ್ಕೃತಿ ಸಮಾಜಪರಿಷ್ಕಾರಗಳಲ್ಲಿ ಉದ್ಯುಕ್ತವಾಗಿ, ರಾಜಕೀಯಕ್ಕೆ ಹೆಚ್ಚಾಗಿ ಪ್ರವೇಶಮಾಡದೆ ಇದ್ದ ಸಂಸ್ಥೆ. ಅದಕ್ಕೆ ವಿದ್ಯಾ ಇಲಾಖೆಯ ಸಹಾಯ ಕೊಂಚ ಮಟ್ಟಿಗೆ ದೊರೆತಿತ್ತೆಂದು ನನ್ನ ತಿಳಿವಳಿಕೆ. ಅದಕ್ಕಿಂತ ಹೆಚ್ಚಾಗಿ ಆ ಸಂಸ್ಥೆಯನ್ನು ಪ್ರೋತ್ಸಾಹಿಸುತ್ತಿದ್ದವರು ದಿವಾನ್ ವಿ.ಪಿ. ಮಾಧವರಾಯರು, ಕೌನ್ಸಿಲರ್ ಕೆ.ಪಿ. ಪಟ್ಟಣ್ಣ ಚೆಟ್ಟಿಯವರು ಮೊದಲಾದವರು. ಇವರಿಬ್ಬರಿಗೂ ರಾಮಚಂದ್ರರಾಯರಲ್ಲಿ ತುಂಬ ಗೌರವವಿತ್ತು. ನನ್ನನ್ನು ಅವರಿಬ್ಬರಲ್ಲಿಗೂ ಕರೆದುಕೊಂಡು ಹೋಗಿ ಪರಿಚಯ ಮಾಡಿಸಿದವರು ರಾಮಚಂದ್ರರಾಯರು. ೧೯೧೦ರ ಸುಮಾರಿನಲ್ಲಿ ನಾನು ದಿವಾನ್ ರಂಗಾಚಾರ್ಲು ಅವರ ಜೀವನ ಚರಿತ್ರೆಯನ್ನು ಬರೆದಿದ್ದೆ. ರಾಮಚಂದ್ರರಾಯರವರಿಗೆ ಅದರಿಂದ ತುಂಬ ಸಂತೋಷ ಮತ್ತು ಹೆಮ್ಮೆ, ನನ್ನನ್ನು ಅವರು ಎಲ್ಲಿಯೂ ಇರಿಸರು, ಆ ಸಂಭ್ರಮದಲ್ಲಿ ಒಂದು ದಿನ ಬೆಳಿಗ್ಗೆ ನನ್ನನ್ನು ಪುಟ್ಟಣ್ಣ ಚೆಟ್ಟರಲ್ಲಿಗೆ ಕರೆದುಕೊಂಡು ಹೋಗಿ ಜಂಭದಿಂದ ಪ್ರಶಂಸೆ ಮಾಡಿದ್ದು ನನ್ನ ಜ್ಞಾಪಕದಲ್ಲಿ ಈಗ ನಡೆಯಿತೆಂಬಷ್ಟು ಸ್ಫುಟವಾಗಿ ನಿಂತಿದೆ. ರಾಮಚಂದ್ರರಾಯರು ಎಂಥ ನಿರ್ಮತ್ಸರರು ಮತ್ತು ಉದಾರಿಗಳು ಎಂಬುದಕ್ಕೆ ಆ ನನ್ನ ಅನುಭವ ನಿದರ್ಶನವಾಗಿದೆ.

ರಾಮಚಂದ್ರರಾಯರು ತಮ್ಮ ಪಾಂಡಿತ್ಯವನ್ನು ಲೋಕಜೀವನದಲ್ಲಿ ಬೆರಸಿದ್ದವರು. ಅವರ ನಾನಾ ವ್ಯಾಸಂಗಗಳಲ್ಲಿ ಸಂಗೀತವೂ ಸೇರಿತ್ತು. ಆಗ ಬೆಂಗಳೂರಿನಲ್ಲಿ ಗಾನ ವಿನೋದಸಭಾ ಎಂಬ ಒಂದು ಸಂಗೀತ ಸಂಸ್ಥೆಯಿತ್ತು. ಆ ಸಂಸ್ಥೆಯ ಸ್ಥಾಪಕ ಪ್ರಮುಖರಲ್ಲಿ ರಾಮಚಂದ್ರರಾಯರೂ ಒಬ್ಬರು. ಅವರಿಗೆ ಸಂಗೀತದಲ್ಲಿ ತುಂಬ ಅಭಿರುಚಿ.

ರಾಮಚಂದ್ರರಾಯರಿಗೆ ಇಂಗ್ಲೀಷ್ ಸಾಹಿತ್ಯದಲ್ಲಿ ಸೂಕ್ಷ್ಮವೇದಿಯಾದ ಅಭಿರುಚಿ. ಷೇಕ್ಸ್ಪಿಯರ್ ನಾಟಕವನ್ನೋದುವ ರೀತಿಯನ್ನೂ ಮಿಲ್ಟನ್ನಿನ ಕಾವ್ಯದ ಸೌಂದರ್ಯವನ್ನೂ ನನಗೆ ಮೊದಲು ತೋರಿಸಿಕೊಟ್ಟವರು ಅವರು. ಷೆಲ್ಲಿ ಕವಿಯ 'ಚೆಂಚೈ' (Cenci) ಮತ್ತು 'ಎಪಿಸೈಕಿಡಿಯಾನ್'

(Epipsychidion) ಕಾವ್ಯಗಳನ್ನು ಓದಬೇಕೆಂದು ಅವರು ನನ್ನನ್ನು ಪ್ರೇರೇಪಿಸಿದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ಅವರು ಒಳ್ಳೆಯ ಪುಸ್ತಕ ಭಂಡಾರವನ್ನಿಟ್ಟಿದ್ದರು. ನಾನು ಅದರಿಂದ ಬೂಕರ್ ಟಿ. ವಾಷಿಂಗ್ಟನ್ ಎಂಬ ನೀಗ್ರೋ ಪ್ರಮುಖನ 'Up from Slavery' ಗ್ರಂಥವನ್ನೂ ಗ್ರಾಂಟ್ ಆಲನ್ ಬರೆದ 'British Barbarians' ನಾವೆಲ್ಲನ್ನೂ ಇನ್ನೂ ಅನೇಕ ಪುಸ್ತಕಗಳನ್ನೂ ಅವರಿಂದ ಆಗಾಗ ಎರವಲು ತೆಗೆದುಕೊಂಡು ಓದಿದೆ. ನನ್ನ ಅನುಭವದಿಂದ ಹೇಳಬಹುದಾದರೆ ಅವರು ಉತ್ತಮ ದರ್ಜೆಯ ಸಾಹಿತ್ಯ ಸಮೀಕ್ಷಕರು.

ಆ ಕಾಲದಲ್ಲಿಯೂ ನಮ್ಮ ರಾಜಕೀಯದಲ್ಲಿ ಕಕ್ಷಿಗಳಿದ್ದುವು. ಆದರೆ ರಾಮಚಂದ್ರರಾಯರಿಗೆ ಎಲ್ಲ ಕಕ್ಷಿಗಳಲ್ಲಿಯೂ ಸಮಾನವಾಗಿ ಮನ್ನಣೆ ದೊರೆಯುತ್ತಿತ್ತು. ವಿ.ಪಿ. ಮಾಧವರಾಯರಿಗೆ ಅವರು ಹೇಗೆ ಪ್ರಿಯರಾಗಿದ್ದರೋ ಸರ್ ಪಿ. ಎನ್.ಕೃಷ್ಣಮೂರ್ತಿಯವರಿಗೂ ಅವರು ಹಾಗೆಯೇ ಇಷ್ಟರಾಗಿದ್ದರು. ಹೀಗೆ ಅವರಿಗೆ ಕಕ್ಷಿಭೇದವಿಲ್ಲದ ಗೌರವವನ್ನು ಸಂಪಾದಿಸಿಕೊಟ್ಟದ್ದು ಅವರ ವಿದ್ವತ್ತಿನ ಮತ್ತು ಸೌಜನ್ಯದ ಕೀರ್ತಿ.

ರಾಮಚಂದ್ರರಾಯರು ಬಡ ವಿದ್ಯಾರ್ಥಿಗಳ ಪ್ರಥಮ ಸ್ನೇಹಿತರು. ಮೈಸೂರಿನಲ್ಲಿ ವೆಂಕಟಕೃಷ್ಣಯ್ಯನವರು ಹೇಗೋ ಬೆಂಗಳೂರಿನಲ್ಲಿ ಕೆ. ರಾಮಚಂದ್ರರಾಯರು ಹಾಗೆ ವಿದ್ಯಾರ್ಥಿ ಪ್ರಿಯರಾಗಿದ್ದರು, ಬಡ ವಿದ್ಯಾರ್ಥಿಗಳ ಫೀಜಿಗಾಗಿ, ಪುಸ್ತಕಕ್ಕಾಗಿ, ಬಟ್ಟೆಗಾಗಿ, ವಾರಾನ್ನಕ್ಕಾಗಿ, ಫ್ರೀಷಿಪ್ಪಿಗಾಗಿ, ಸ್ಕಾಲರ್ಷಿಪ್ಪಿಗಾಗಿ ಅವರು ಮಾಡಿದ ಶಿಫಾರಸುಗಳಿಗೆ ಸಂಖ್ಯಾಮಿತಿಯಿರಲಿಲ್ಲ. ಕಾಗದಗಳನ್ನು ಬರೆದುಕೊಡುವುದರ ಜೊತೆಗೆ ತಾವೇ ಖುದ್ದಾಗಿ ಇಷ್ಟಮಿತ್ರರ ಮನೆಗಳಿಗೆ ಹೋಗಿ ಶಿಫಾರಸು ಹೇಳಿ ಬರುತ್ತಿದ್ದರು. ಎಷ್ಟೋ ಮಂದಿಗೆ ಪ್ರೈವೇಟ್ ಟ್ಯೂಷನ್ ಗೊತ್ತುಮಾಡಿಕೊಟ್ಟು ಅನ್ನಸಹಾಯ ಮಾಡಿದ್ದರು. ಅಂಥವರಲ್ಲಿ ನಾನೊಬ್ಬ.

ಅವರನ್ನು ಉಪಾಧ್ಯಾಯರಾಗಿ ನಿಯಮಿಸಿಕೊಂಡಿದ್ದ ಲಂಡನ್ ಮಿಷನ್ನಿನವರು ಅವರಲ್ಲಿ ಮನಸಾರ ಗೌರವವನ್ನೂ ಕೃತಜ್ಞತೆಯನ್ನೂ ತೋರಿಸುತ್ತಿದ್ದರು. ರಾಮಚಂದ್ರರಾಯರ ಬೋಧನಕ್ರಮವನ್ನು ಅವರ ವಿದ್ಯಾರ್ಥಿಗಳು ಬಹುವಾಗಿ ಕೊಂಡಾಡುತ್ತಾರೆ. ಪಾಠಕ್ಕೆ ಬೇಕಾದ ಸಿದ್ಧತೆಯನ್ನು ಮಾಡಿಕೊಳ್ಳದೆ ಅವರು ಕ್ಲಾಸಿಗೆ ಹೋದವರಲ್ಲ. ಮತ್ತು ವೇಳೆಯ ವಿಷಯದಲ್ಲಾಗಲಿ ಶಿಸ್ತಿನ ವಿಷಯದಲ್ಲಾಗಲಿ ಅವರು ನಿಯಮ ತಪ್ಪುತ್ತಿರಲಿಲ್ಲ. ತಮ್ಮ ಒಳ್ಳೆಯತನ ಒಳ್ಳೆಯ ಮಾತುಗಳಿಂದಲೇ ಅಸಭ್ಯರಾದ ಹುಡುಗರನ್ನು ಸಭ್ಯಮಾರ್ಗಕ್ಕೆ ತರುತ್ತಿದ್ದರಂತೆ.

ರೈಟ್ ಆನರಬಲ್ ವಿ.ಎಸ್. ಶ್ರೀನಿವಾಸಶಾಸ್ತ್ರಿಗಳು ರಾಮಚಂದ್ರರಾಯರಿಗೆ ಬಾಲ್ಯಸ್ನೇಹಿತರು. ಇಬ್ಬರೂ ಏಕಕಾಲದಲ್ಲಿ ಕುಂಭಕೋಣದಲ್ಲಿ ವಿದ್ಯೆ ಕಲಿಯುತ್ತಿದ್ದವರು. ಶಾಸ್ತ್ರಿಗಳವರು ಬೆಂಗಳೂರಿಗೆ ಬಂದಾಗ ರಾಮಚಂದ್ರರಾಯರನ್ನು ನೋಡದೆ ಹಿಂದಿರುಗಿದ್ದಿಲ್ಲ. ಅವರಿಬ್ಬರೂ ಸೇರಿ ಒಂದೆರಡು ಘಂಟೆಗಳಾದರೂ ಮಾತನಾಡಿದರೆಯೇ ಇಬ್ಬರಿಗೂ ತೃಪ್ತಿ.

ಬಹುಜನಪ್ರಿಯರಾಗಿ ದೊಡ್ಡ ಕಡೆಗಳಲ್ಲಿ ಪ್ರಭಾವಶಾಲಿಗಳಾಗಿದ್ದರೂ ರಾಮಚಂದ್ರರಾಯರು ಸ್ವಪ್ರಯೋಜನಕ್ಕಾಗಿ ಏನನ್ನೂ ಮಾಡಿಕೊಳ್ಳಲಿಲ್ಲ. ಮಧ್ಯಮ ದರ್ಜೆಯ ಬಡವರಾಗಿಯೇ ಬಾಳಿ, ಹಾಗೆಯೇ ತಮ್ಮ ಕಾಲವನ್ನು ಮುಗಿಸಿಕೊಂಡರು. ಆದರೆ ಬೆಂಗಳೂರಿನ ಸಾರ್ವಜನಿಕ ಜೀವನದ ಚರಿತ್ರೆಯನ್ನು ಅನ್ಯೂನವಾಗಿ ಬರೆಯ ಹೊರಡುವವರು ರಾಮಚಂದ್ರರಾಯರ ಹೆಸರನ್ನು ಮೆರುಗಕ್ಷರಗಳಿಂದ ಬರೆಯದೆ ಇರರು. ಎಪ್ಪತ್ತು ಎಂಭತ್ತು ವರ್ಷಗಳ ಹಿಂದೆ ಸಾರ್ವಜನಿಕ ಜೀವನ ಹೇಗಿತ್ತೋ ನನಗೆ ತಿಳಿಯಲವಕಾಶವಿಲ್ಲ. ಆದರೆ ನಲವತ್ತೈದು ಐವತ್ತು ವರ್ಷಗಳ ಹಿಂದೆ ನಮ್ಮಲ್ಲಿ ಸಾರ್ವಜನಿಕ ಜೀವನವಿತ್ತು; ಅದು ನಿರ್ಮಲವಾಗಿ, ಗಂಭೀರವಾಗಿ, ಫಲಕಾರಿಯಾಗಿತ್ತು; ಜನಹಿತಚಿಂತಕರು ಆಗಲೂ ನಮ್ಮಲ್ಲಿದ್ದರು; ಅವರು ಆಗ ಪಟ್ಟ ಶ್ರಮದ ಫಲವು ಇಂದಿನ ಸಾರ್ವಜನಿಕ ಜೀವನಕ್ಕೆ ತಳಪಾಯವಾಗಿದೆ-ಎಂಬುದಕ್ಕೆ ರಾಮಚಂದ್ರರಾಯರ ಪವಿತ್ರವೂ ಶುಭಕರವೂ ಆದ ಜೀವನವು ದೃಷ್ಟಾಂತವಾಗಿದೆ.

## ೨

# ಕೆ.ಎ. ಕೃಷ್ಣಸ್ವಾಮಿ ಅಯ್ಯರ್

ಶ್ರೀ ಕೆ. ರಾಮಚಂದ್ರರಾಯರ ಮಾತಿನಂತೆ ನಾನು ಶ್ರೀ ಕೆ.ಎ. ಕೃಷ್ಣಸ್ವಾಮಿ ಅಯ್ಯರ್ ಅವರಲ್ಲಿಗೆ ಹೋದೆ. ಅವರು ಆಗ ಬಸವನಗುಡಿಯ ೫ನೆಯ ಅಡ್ಡ ರಸ್ತೆಯಲ್ಲಿ (ಚಿದ್ವಿಲಾಸವೆಂಬ ಮನೆಯ ಹಿಂದುಗಡೆ) ಸ್ವಂತ ಮನೆಯಲ್ಲಿ ವಾಸವಾಗಿದ್ದರು. ನಾನು ಹೋಗಿದ್ದದ್ದು ಮಧ್ಯಾಹ್ನ ಮೂರು ಘಂಟೆಯ ಸುಮಾರಿಗೆ. ಕದ ತಟ್ಟಿದ ಕೂಡಲೆ ಅವರೇ ಬಾಗಿಲು ತೆಗೆದು ಒಳಕ್ಕೆ ಕರೆದರು. ಆ ಕೊಣೆಯಲ್ಲಿ ಸಾಮಾನಿನ ಆಡಂಬರವೇನೂ ಇರಲಿಲ್ಲ. ಒಂದು ಬೀರು ಪುಸ್ತಕ, ಎರಡು ಚಾಪೆ, ಒಂದೆರಡು ದಿಂಬು, ಒಂದು ಪಿಟೀಲು-ಇಷ್ಟು ನನಗೆ ಕಾಣಬಂದದ್ದು. ನಾನು ರಾಮಚಂದ್ರರಾಯರ ಕಡೆಯಿಂದ ಬಂದವನೆಂದು ತಿಳಿಸಿ ನನ್ನ ಪರಿಚಯವನ್ನು ಹೇಳಿಕೊಂಡೆ, ನನ್ನ ಸಮೀಪದ ಬಂಧುಗಳಲ್ಲೊಬ್ಬರು ಸಂಗೀತಪ್ರೀತಿಯ ಕಾರಣದಿಂದ ಕೃಷ್ಣಸ್ವಾಮಯ್ಯರಿಗೆ ಸ್ನೇಹಿತರು. ಅವರು ನನಗೆ ಅಯ್ಯರವರ ವಿಷಯವನ್ನು ತಿಳಿಸಿದ್ದರು. ನಾನು ನನ್ನ ಆ ಬಂಧುಗಳ ಹೆಸರನ್ನು ಹೇಳಿದ ಕೂಡಲೆ ಅಯ್ಯರವರಿಗೆ ಮುಖವರಳಿತು. ನನ್ನನ್ನು ಪ್ರೀತಿಯಿಂದ ಒಳಕ್ಕೆ ಕರೆದು ಕೂರಿಸಿಕೊಂಡು ನನ್ನ ಪೂರ್ವೋತ್ತರಗಳನ್ನು ವಿಚಾರಿಸಿದರು. ನಮ್ಮೂರು ಮುಳಬಾಗಲು ಎಂದಕೂಡಲೇ ಅವರು “ಅಲ್ಲಿ ಪುರೋಹಿತ ರಾಮಚಂದ್ರಾಚಾರ್ಯರು ನಿಮಗೆ ಗೊತ್ತಿದೆಯೆ?” ಎಂದು ಕೇಳಿದರು. ನಾನು, “ಅವರು ನನಗೆ ಬಹಳ ಚೆನ್ನಾಗಿ ಗೊತ್ತಿದೆ; ನಮ್ಮ ತಂದೆಗೆ ಅವರು ತುಂಬ ಸ್ನೇಹಿತರು; ವಾರಕ್ಕೆ ಎರಡು ಮೂರು ಸಲವಾದರೂ ನಮ್ಮ ಮನೆಗೆ ಬರುತ್ತಾರೆ; ಪಿಟೀಲು ಬಹಳ ಚೆನ್ನಾಗಿ ನುಡಿಸುತ್ತಾರೆ” ಎಂದು ಹೇಳಿದೆ. ಅದಕ್ಕುತ್ತರವಾಗಿ ಅವರು, “ರಾಮಚಂದ್ರಾಚಾರ್ಯರು ನನ್ನಂತೆಯೇ ಕಾವೇರಿಪಟ್ಟಣದವರು. ನಾವಿಬ್ಬರೂ ಬಾಲ್ಯಸ್ನೇಹಿತರು, ಜೊತೆಯಲ್ಲಿ ಪಿಟೀಲು ಅಭ್ಯಾಸಮಾಡಿದವರು. ಅವರು ಹೇಗಿದ್ದಾರೆ ?” ಎಂದು ಮೊದಲಾಗಿ ತಮ್ಮ ಸ್ನೇಹಿತರ ವಿಷಯವಾಗಿ ಕುಶಲ ಪ್ರಶ್ನೆ ಮಾಡಿದರು. ಹೀಗೆ ಕೆ. ರಾಮಚಂದ್ರರಾಯರು, ನನ್ನ ಒಬ್ಬ ಹಿರಿಯ ಬಂಧುಗಳು, ನಮ್ಮ ತಂದೆಯ ಒಬ್ಬ ಸ್ನೇಹಿತರು-ಈ ಮೂವರ ಹೆಸರುಗಳ ಪ್ರಭಾವದಿಂದ ನನಗೆ ಕೃಷ್ಣಸ್ವಾಮಿ ಅಯ್ಯರವರ ಅಭಿಮಾನ ದೊರಕಿತು.

ಬಳಿಕ ನಾನು ನನ್ನ ಉದ್ದೇಶವನ್ನು ಅರಿಕೆಮಾಡಿದೆ. ಅಯ್ಯರವರು ಕುತೂಹಲದಿಂದ ನನ್ನ ಇಂಗ್ಲೀಷ್ ಪದ್ಯದ ಕಂತೆಯನ್ನು ತೆಗೆದುಕೊಂಡು ಒಂದಾವರ್ತಿ ಉದ್ದಕ್ಕೂ ಓದಿದರು. ಅನಂತರ- "ಇದನ್ನು ತಿದ್ದಲು ನಾವಿಬ್ಬರೂ ಮೂರು ನಾಲ್ಕು ದಿನ ಸೇರಬೇಕು. ಮಧ್ಯಾಹ್ನ ಇಲ್ಲಿಗೆ ಬರಲು ಆಗುತ್ತದೆಯೆ?" ಎಂದು ಕೇಳಿದರು. ನಾನು ಕೃತಾರ್ಥನಾದೆನೆಂದುಕೊಂಡು, "ಆಹಾ! ಅವಶ್ಯವಾಗಿ ಬರುತ್ತೇನೆ. ತಮ್ಮ ಕೃಪೆಯೊಂದೇ ನನಗೆ ಬೇಕಾದ ಭಾಗ್ಯ" ಎಂದು ಹೇಳಿದೆ.

ತರುವಾಯ ಅವರು ನನ್ನ ಬರವಣಿಗೆಯನ್ನು ಒಂದು ಪಕ್ಕಕ್ಕಿಟ್ಟು "ನೀನು ಯಾವ ಯಾವ ಇಂಗ್ಲೀಷ್ ಕಾವ್ಯವನ್ನು ಓದಿದ್ದಿ? ಎಂದು ಕೇಳಿದರು. ನಾನು ಐದಾರು ಹೆಸರುಗಳನ್ನು ಹೇಳಲು ಅವರು, "ನೀನು ಬೈರನ್ (Byron) ಹೆಚ್ಚಾಗಿ ಓದಿಲ್ಲ" ಎಂದರು. ನಾನು ಹೌದು ಎಂದೆ. ಅವರು ಕೂಡಲೆ ಬೈರನ್ ಕಾವ್ಯ ಸಂಗ್ರಹವನ್ನು ತೆಗೆದು 'ಚೈಲ್ಡ್ ಹ್ಯಾರಲ್ಡ್ಸ್ ಪಿಲ್ಗ್ರಿಮೇಜ್' (Childe Harold's Pilgrimage) ಕಾವ್ಯವನ್ನು ಅಲ್ಲಲ್ಲಿ ಓದಿ ಹೇಳಲಾರಂಭಿಸಿದರು. "ಇಲ್ಲಿ ನೋಡು ಅಂತ್ಯಾಕ್ಷರ ಪ್ರಾಸ ಎಷ್ಟು ಸಹಜವಾಗಿ ಬರುತ್ತದೆ! ಇಲ್ಲಿ ನೋಡು ಪದಗಳ ಧೋರಣೆ ಹೇಗಿದೆ! ಇಲ್ಲಿ ನೋಡು ಸ್ವರದೊತ್ತಿನ (Accent) ಕಟ್ಟುಪಾಡಿಗಾಗಿ ಏನು ಚಮತ್ಕಾರ ಮಾಡಿದ್ದಾನೆ!" ಎಂದು ತೋರಿಸಿದರು. ಅನಂತರ 'ಡಾನ್ ಜುವಾನ್' (Don Juan) ಕಾವ್ಯದ ಕೆಲವು ಭಾಗಗಳನ್ನು ನನ್ನಿಂದ ಓದಿಸಿದರು. "ಪದ್ಯದಲ್ಲಿ ಇಂಥ ಜೋರು ಬರಬೇಕಾದರೆ ಬೈರನ್ನನ್ನು ನೀನು ಚೆನ್ನಾಗಿ ವ್ಯಾಸಂಗ ಮಾಡಬೇಕು" ಎಂದು ಹೇಳಿದರು.

ಮಾರನೆಯ ದಿನ ನಾನು ಅವರಲ್ಲಿಗೆ ಹೋದಾಗ ಪೋಪ್ (Pope), ಸದೆ (Southey), ಟೆನ್ನಿಸನ್ (Tennyson) -ಈ ಕವಿಯ ಕಾವ್ಯಗಳಿಂದ ಆರಿಸಿದ ಕೆಲವು ಭಾಗಗಳನ್ನು ಓದಿಸಿ ಇಂಗ್ಲೀಷ್ ಪದ್ಯರಚನೆಯ ಮರ್ಮಗಳನ್ನು ಎತ್ತಿ ತೋರಿಸಿದರು.

ಕೃಷ್ಣಸ್ವಾಮಯ್ಯರವರೂ ರಾಮಚಂದ್ರರಾಯರಂತೆ ಇಂಗ್ಲಿಷಿನಲ್ಲಿ ಕವನ ಮಾಡುತ್ತಿದ್ದವರು. ರಾಮಚಂದ್ರರಾಯರು 'ಅಕ್ರಾಸ್ಟಿಕ್' (Acrostic -ಅಧ್ಯಕ್ಷರ ಬಂಧ) ಮೊದಲಾದ ಚಿತ್ರ ಕವಿತ್ವಗಳನ್ನು ಮಾಡುತ್ತಿದ್ದರು. ಕೃಷ್ಣಸ್ವಾಮಿ ಅಯ್ಯರವರು ಹೆಚ್ಚಾಗಿ 'ಸಾನೆಟ್' (ಚತುರ್ದಶಪದಿ)ಗಳನ್ನು ಬರೆಯುತ್ತಿದ್ದರು. ರಾಯರ ಬರವಣಿಗೆಯಲ್ಲಿ ವರ್ಣನೆ ವಿಶೇಷಗುಣ; ಅಯ್ಯರವರಲ್ಲಿ ವಿಚಾರ ಗಾಢತೆ.

ಅಯ್ಯರವರ ಮಾತುಕತೆಗಳ ನಡುವೆ ನನ್ನ ಬರವಣಿಗೆಯ ತಿದ್ದಾಣಿಕೆಯೂ ನಡೆಯಿತು. ನನ್ನ ಅನೇಕ ಪಂಕ್ತಿಗಳನ್ನು ಪುನರ್ವಿಲೇಖನ ಮಾಡಿಸಿದರು. ಮೂರು ನಾಲ್ಕು ದಿನ ಈ ಪರಿಷ್ಕಾರ ಕಾರ್ಯ

ನಡೆದಮೇಲೆ- “ಈ ಪದ್ಯಗಳನ್ನು ಪ್ರಕಟಿಸಬಹುದು ಮಾತ್ರವಲ್ಲ ಪ್ರಕಟಿಸಬೇಕು. ಅದನ್ನು ಎಲ್ಲರೂ ಒಪ್ಪಿಕೊಂಡಾರು. ಯಾರಾದರೂ ಆಕ್ಷೇಪಿಸಿದರೆ ನಾನು ಪ್ರತಿ ಹೇಳುತ್ತೇನೆ” ಎಂದು ನನಗೆ ಪ್ರೋತ್ಸಾಹ ಭರವಸೆಗಳನ್ನು ಕೊಟ್ಟರು.

ಇದಾದಮೇಲೆ ಕೃಷ್ಣಸ್ವಾಮಯ್ಯರವರಲ್ಲಿಗೆ ಹೋಗಿ ಬರುವುದು ನನಗೆ ತುಂಬ ರೂಢಿಯಾಯಿತು. ನನಗೆ ಅಲ್ಪಸ್ವಲ್ಪ ಸಂಸ್ಕೃತದ ಪರಿಚಯವಿದ್ದದ್ದೂ ವೇದಾಂತವಿಚಾರದಲ್ಲಿ ಆಸಕ್ತಿ ಇದ್ದದ್ದೂ ಅವರಿಗೆ ಗೋತ್ತಾದ ಮೇಲೆ ನನ್ನ ವಿಷಯದಲ್ಲಿ ಅವರ ಮಮತೆ ಬೆಳೆಯಿತು.

ಕೃಷ್ಣಸ್ವಾಮಯ್ಯರವರು ಮನೆಯಲ್ಲಿ ನನಗೆ ಹೇಗೋ ಹೈಸ್ಕೂಲು ಕಾಲೇಜುಗಳಲ್ಲಿ ವಿದ್ಯಾರ್ಥಿಗಳಿಗೆ ಹಾಗೆ ಉತ್ಸಾಹಜನಕರಾದ ಸಾಹಿತ್ಯೋಪಾಧ್ಯಾಯರಾಗಿದ್ದರೆಂದು ನಾನು ಕೇಳಿದ್ದೇನೆ. ಕೊಂಚ ಕಾಲದ ಬಳಿಕ ಅವರು ವಿದ್ಯಾ ಇಲಾಖೆಗೆ ಬಂದು ಚಿಕ್ಕ ಬಳ್ಳಾಪುರ. ತುಮಕೂರು, ಚಿಕ್ಕಮಗಳೂರು ಮೊದಲಾದ ಅನೇಕ ಸ್ಥಳಗಳಲ್ಲಿ ಹೈಸ್ಕೂಲು ಹೆಡ್ಮಾಸ್ಟರಾಗಿದ್ದರು. ಆ ಹೈಸ್ಕೂಲುಗಳಲ್ಲಿಯೂ ಅವರು ಇಂಗ್ಲೀಷ್ ಸಾಹಿತ್ಯವನ್ನು ಕಲಿಸುತ್ತಿದ್ದರು. ಅದು ಮುಖ್ಯವಾಗಿ ಪ್ಯಾಸು ಮಾಡಿಸುವುದಕ್ಕೆಂದಲ್ಲ, ಸಾಹಿತ್ಯದಲ್ಲಿ ಅಭಿರುಚಿಯನ್ನುಂಟುಮಾಡಿಸುವುದಕ್ಕೆ ಕ್ಲಪ್ತವಾಗಿದ್ದ ಪಾಠದ ಪುಟವೆಷ್ಟೋ ಅಷ್ಟರಲ್ಲಿ ಅವರು ಗಮನವನ್ನು ನಿಲ್ಲಿಸುತ್ತಿದ್ದವರಲ್ಲ. ಅವರ ಸ್ವಾರಸ್ಯಾನುಭವದ ಉತ್ಸಾಹವು ಹತ್ತಾರು ಕಾವ್ಯಗಳನ್ನು ವಿದ್ಯಾರ್ಥಿಗಳ ಮುಂದೆ ತಂದು ಅವರ ಸಾಹಿತ್ಯದೃಷ್ಟಿಯನ್ನು ವಿಶಾಲಪಡಿಸುತ್ತಿತ್ತು.

ಕೃಷ್ಣಸ್ವಾಮಯ್ಯರವರು ಜನದ ಗುಂಪಿನಲ್ಲಿ ಮೆರೆಯಲು ಆಶೆಪಟ್ಟವರಲ್ಲ. ಅವರು ಬಹಿರಂಗ ವೇದಿಕೆಗಳಿಂದ ವಾಗ್ಸ್ಫುರ್ತಿ ಹರಿಯಿಸಿದವರಲ್ಲ. ಅವರ ಆಲೋಚನೆ ಸಣ್ಣ ಮಿತ್ರ ಗೋಷ್ಠಿಗಳಲ್ಲಿ. ಅವರಿದ್ದ ಕಡೆಗೆ ಊರಿನ ವಿಚಾರ ಕುತೂಹಲಿಗಳೂ ರಸಿಕರೂ ಸಭ್ಯರೂ ತಾವಾಗಿ ಬರುತ್ತಿದ್ದರು ಹೀಗೆ ಅವರು ಸಭ್ಯ ಜನರಿಗೆ ಆಕರ್ಷಕರಾಗಿದ್ದದ್ದು ಮೂರು ಗುಣಗಳಿಂದ. ಒಂದನೆಯದು, ಅವರ ತತ್ತ್ವಜಿಜ್ಞಾಸೆ; ಎರಡನೆಯದು, ಅವರ ಸಂಗೀತ ಪ್ರೇಮ; ಮೂರನೆಯದು, ಅವರ ಸರಸತೆ ಮತ್ತು ಸೌಜನ್ಯ.

ಕೃಷ್ಣಸ್ವಾಮಯ್ಯರವರಿಗೆ ವೇದಾಂತವಿಚಾರದಲ್ಲಿ ಶ್ರದ್ಧಾಸಕ್ತಿಗಳು ನೈಜವಾಗಿದ್ದವು. ೧೯೦೬-೭ರ ವೇಳೆಯಲ್ಲಿಯೇ ಅವರೂ ಅವರ ಸ್ನೇಹಿತರಾದ ಡಾ ॥ ಎಂ. ಶ್ರೀನಿವಾಸರಾಯರವರೂ ಮುನಿಸಿಪಲ್ ಪಾರ್ಕ್ ಬಳಿಯ ಹರಿಯಣ್ಣನವರ ಛತ್ರದಲ್ಲಿ ಭಾನು-ಭಾನುವಾರವೂ ವೇದಾಂತವ್ಯಾಸಂಗದ ಗೋಷ್ಠಿಗಳನ್ನು ನಡಸುತ್ತಿದ್ದರು. ಅದು ಸ್ವಾಮಿ ವಿವೇಕಾನಂದರು ಅಮೆರಿಕದಲ್ಲಿ ವಿಜಯಧ್ವಜವನ್ನೆತ್ತಿ

ವೇದಾಂತಘೋಷಣೆ ಮಾಡಿದ್ದ ಕಾಲ. ನಮ್ಮ ಇಂಗ್ಲೀಷ್ ವಿದ್ಯಾವಂತರಾದವರಿಗೆ ಸ್ವಮತವಿಷಯದಲ್ಲಿ ಬಂದಿದ್ದ ಅಲಕ್ಷ್ಯವು ಆಗ ಕೊಂಚ ಇಳಿಮುಖವಾಗಿತ್ತು. ಆ ಅವಕಾಶವನ್ನು ಸನಾತನ ಧರ್ಮದ ಪುನರುಜ್ಜೀವನಕ್ಕಾಗಿ ಉಪಯೋಗಪಡಿಸಿಕೊಳ್ಳಬೇಕೆಂದು ಬೆಂಗಳೂರಿನಲ್ಲಿ ಪ್ರಯಾಸ ಪಟ್ಟವರ ಪೈಕಿ ಕೃಷ್ಣಸ್ವಾಮಯ್ಯರವರೂ, ಡಾ ॥ ಶ್ರೀನಿವಾಸರಾಯರೂ ಮುಖ್ಯರು. ಅವರಿಬ್ಬರೂ ಸೇರಿ ಅದ್ವೈತ ವೇದಾಂತ ಸಾಹಿತ್ಯದಲ್ಲಿ ಪ್ರಮಾಣವೆಂದು ಸರ್ವತ್ರ ಅಂಗೀಕೃತವಾಗಿರುವ ಶ್ರೀ ವಿದ್ಯಾರಣ್ಯ ಕೃತ “ಪಂಚದಶೀ” ಗ್ರಂಥವನ್ನು ಇಂಗ್ಲಿಷಿಗೆ ಭಾಷಾಂತರಿಸಿ ಪ್ರಕಟಪಡಿಸಿದರು.

ಯೂರೋಪಿನ ತತ್ವಜಿಜ್ಞಾಸುಗಳೊಡನೆ ಕೃಷ್ಣಸ್ವಾಮಯ್ಯರವರು ಪತ್ರಮುಖೇನ ವಾಕ್ಯಾರ್ಥ ನಡಸುತ್ತಿದ್ದರು. ಜರ್ಮನಿಯ ಪ್ರಸಿದ್ಧ ವೇದಾಂತ ಲೇಖಕನಾದ ಪಾಲ್ ಡಾಯ್ಸನ್ (Paul Deussen) ಎಂಬ ಪ್ರಸಿದ್ಧ ವಿದ್ವಾಂಸನ ಗ್ರಂಥಗಳಲ್ಲಿಯ ಒಂದೆರಡು ಸಂದಿಗ್ಧಾಂಶತಿಗಳನ್ನು ತೆಗೆದುಕೊಂಡು ಕೃಷ್ಣಸ್ವಾಮಿ ಅಯ್ಯರವರು ಟೀಕೆಗಳನ್ನು ಬರೆದು ಆತನಿಗೆ ಕಳುಹಿಸಿದ್ದರು. ಆತನು ಅವರ ವಾದವು ಪ್ರಮಾಣವತ್ತಾಗಿದೆಯೆಂದೂ ಸಮಂಜಸವೆಂದೂ ಒಪ್ಪಿಕೊಂಡಿದ್ದನು. ಆ ವಾದದಲ್ಲಿ ಕೃಷ್ಣಸ್ವಾಮಯ್ಯರವರು ಮಾಂಡೂಕ್ಯೋಪನಿಷತ್ತಿನಲ್ಲಿಯ ಜಾಗ್ರತ್ ಸ್ವಪ್ನ ಸುಷುಪ್ತಿಗಳೆಂಬ ಅವಸ್ಥಾತ್ರಯ ವಿವೇಚನೆಯ ಮಾರ್ಗವನ್ನು ಸುಷ್ಠುವಾಗಿ ವಿವರಿಸಿದ್ದರು.

ಶಂಕರ ಮಠದ ಶ್ರೀ ವಿರೂಪಾಕ್ಷ ಶಾಸ್ತ್ರಿಗಳವರ ಸನ್ನಿಧಿಯಲ್ಲಿ ನಾನು ವ್ಯಾಸಂಗ ನಡೆಸುತ್ತಿದ್ದಾಗ ಕೃಷ್ಣಸ್ವಾಮಯ್ಯರವರನ್ನು ಆಗಾಗ ಕಾಣುತ್ತಿದ್ದೆ. ಅವರು ನನಗೆ ಹೊಸ ಹೊಸ ಪ್ರಶ್ನೆಗಳನ್ನು ಸೂಚನೆಮಾಡಿ ಗ್ರಂಥಕಾವ್ಯದಲ್ಲಿಯ ಸೂಕ್ಷ್ಮಾಂಶಗಳನ್ನು ಎತ್ತಿ ತೋರಿಸಿ ವಿಶದಪಡಿಸುತ್ತಿದ್ದರು. ಅವರ ವಿಚಾರಮಾರ್ಗ ಸ್ವತಂತ್ರವಾದದ್ದು. ಭಾಷ್ಯ ಹೀಗೆ ಹೇಳುತ್ತದೆ, ಅಥವಾ ಸಂಪ್ರದಾಯ ಹಾಗಿದೆ, ಅಥವಾ ನಮ್ಮ ಗುರುಗಳು ತಿಳಿಸಿದ ಪಾಠ ಹೀಗೆ-ಎಂದು ಹೇಳಿದ ಮಾತ್ರದಿಂದ ಅವರು ತೃಪ್ತರಾಗುತ್ತಿರಲಿಲ್ಲ. ನಿನ್ನ ಬುದ್ಧಿ ಏನು ಹೇಳುತ್ತದೆ ? ಎಂದು ಕೇಳುತ್ತಿದ್ದರು. ಭಾಷ್ಯ ಟೀಕೆಗಳಲ್ಲಿ ಕಾಣಬಾರದೆ, ಸಂಪ್ರದಾಯಗಳಿಂದ ವಿವರಣೆ ಪಡೆಯದೆ, ಗುರುಗಳ ಉಪನ್ಯಾಸದಲ್ಲಿ ಪ್ರಸ್ತಾವಕ್ಕೆ ಸಿಕ್ಕದೆ ಇರುವ ಪ್ರಶ್ನೆಗಳು ಕೃಷ್ಣಸ್ವಾಮಯ್ಯರವರ ಸ್ವತಂತ್ರ ವಿಚಾರಕ್ಕೆ ಹೊಳೆಯುತ್ತಿದ್ದವು. ಅವರ ನಿಲುಗಡೆ ಇದ್ದದ್ದು ಮುಖ್ಯವಾಗಿ ಗ್ರಂಥದಲ್ಲಲ್ಲ, ಅನುಭವದಲ್ಲಿ. ವೇದಾಂತಕ್ಕೆ ರುಜುವಾತನ್ನು ನಮ್ಮ ಸಾಮಾನ್ಯ ಅನುಭವದಲ್ಲಿ ಹುಡುಕುತ್ತಿದ್ದವರು ಅವರು.

ಹೀಗೆ ಬಹುಕಾಲದ ಚಿಂತನೆಯಿಂದಲೂ ಅನುಭವಪರಾಮರ್ಶೆಯಿಂದಲೂ ಕಾರ್ಯ ಕಾರಣ ಯುಕ್ತಿಯಿಂದಲೂ ಅವರು ಮಾಡಿಕೊಡ ಸಿದ್ಧಾಂತವನ್ನು ‘Vedanta or The Science of

Reality' ಎಂಬ ಇಂಗ್ಲೀಷ್ ಗ್ರಂಥದಲ್ಲಿ ಆಮೂಲಾಗ್ರವಾಗಿ ನಿರೂಪಿಸಿದ್ದಾರೆ. ವೇದಾಂತಪ್ರಕ್ರಿಯೆಯ ವಿಷಯದಲ್ಲಿ ಹುಟ್ಟಬಹುದಾದ ಆಕ್ಷೇಪಣೆಗಳಿಗೆ ಆ ಗ್ರಂಥದಲ್ಲಿ ಸಮಂಜಸವಾದ ಸಮಾಧಾನ ದೊರೆಯುತ್ತದೆ. ಅನೇಕ ವಿದ್ವತ್ ಸಂಸ್ಥೆಗಳು ಆ ಗ್ರಂಥಕ್ಕೆ ಮನ್ನಣೆ ಕೊಟ್ಟಿವೆ.

ನಮ್ಮ ದೇಶದಲ್ಲಿ ಸಾಮಾನ್ಯವಾಗಿ ತತ್ತ್ವಕುತೂಹಲಿಗಳು ನಾಲ್ವರ್ರೈವರಾದರೂ ಊರೂರಲ್ಲಿಯೂ ಇರುತ್ತಾರೆ-ಅಥವಾ ಇರುತ್ತಿದ್ದರು. ಕೃಷ್ಣಸ್ವಾಮಯ್ಯರವರಿದ್ದ ಕಡೆ ಅಂಥವರು ಅವರ ಸುತ್ತಮುತ್ತ ಸೇರುತ್ತಿದ್ದರು. ಪ್ರತಿಸಂಜೆಯೂ ಆ ಗೋಷ್ಠಿಯಲ್ಲಿ ಗೀತೆ, ಉಪನಿಷತ್ತು, ರಾಮಾಯಣ, ಭಾರತ ಈ ಮೊದಲಾದ ವಿಷಯಗಳನ್ನು ಕುರಿತು ಸಂಭಾಷಣೆ ನಡೆಯುತ್ತಿತ್ತು. ಕೃಷ್ಣಸ್ವಾಮಯ್ಯರವರ ಬಸವನಗುಡಿಯ ಮನೆಯಲ್ಲಿ ಒಂದು ಕಲ್ಲುಬೆಂಚಿನಮೇಲೆ ಅಂಥ ಗೋಷ್ಠಿ ನೆರೆಯುತ್ತಿತ್ತು. ಆ ಕಾರಣದಿಂದ ಆ ಬಂಡೆಗೆ ಬೆಳ್ಳಾವೆ ವೆಂಕಟನಾರಣಪ್ಪನವರು "ಫಿಲಾಸಫರ್ಸ್ ಸ್ಟೋನ್ (Philosopher's Stone) ಎಂದು ಹೆಸರಿಟ್ಟಿದ್ದರು. ಅದಕ್ಕೆ ಎರಡರ್ಥ : (೧) ತತ್ತ್ವಜ್ಞಾನಿಯ ಕಲ್ಲು, (೨) ಕೀಳು ಲೋಹವನ್ನು ಚಿನ್ನವಾಗಿ ಪರಿವರ್ತಿಸಬಲ್ಲ ಸ್ಪರ್ಶಶಿಲೆ.

ಕೃಷ್ಣಸ್ವಾಮಯ್ಯರವರ ಸಂಗೀತಪ್ರೇಮವೂ ಹುಟ್ಟುಗುಣವೇ. ಅವರ ಪಿಟೀಲು ಅವರ ಬಹಿಶ್ಚರಪ್ರಾಣವೆಂದು ಹೇಳಬಹುದು. ಅವರ ಸಂಗೀತಾಭ್ಯಾಸವು ಕೇವಲ ಆತ್ಮ ಸಂತೋಷಕ್ಕೋಸ್ಕರವಾದದ್ದು. ಕಸಬುದಾರರಂತೆ ಅವರು ಘಂಟೆಗಳ ಕಾಲ ಧಾರಾಕಾರವಾಗಿ ನುಡಿಸುತ್ತಿದ್ದವರಲ್ಲ. ಅವರದು ಸಭೆಗಳಿಗೂ ಕಛೇರಿಗಳಿಗೂ ರೂಢಿಯಾದ ವಾದನ ಕ್ರಮವಲ್ಲ. ಅಂಥ ಅಖಂಡವಾದನ ಶ್ರಮಕ್ಕೆ ಅವಶ್ಯವಾದ ದೇಹಪಟುತ್ವ ಅವರಿಗಿರಲಿಲ್ಲ. ಅವರದೇನಿದ್ದರೂ ರಸಘನಗಳಾದ ಭಾವಗಳನ್ನು ಮಾತ್ರ ಸವಿದು ತೃಪ್ತಿಪಡುವ ಸ್ವಭಾವ. ಪ್ರತಿಯೊಂದು ದೊಡ್ಡ ರಾಗದಲ್ಲಿಯೂ ಬಹು ಸ್ವಾರಸ್ಯಕರವಾದ ಸಂಚಾರಗಳು ಯಾವುವೋ ಅವನ್ನು ಮಾತ್ರ ನುಡಿಸಿಕೊಳ್ಳುತ್ತಿದ್ದರು.

ಇತರರ ಹಾಡಿಕೆಯಲ್ಲಿ ಸ್ವಾರಸ್ಯಾಂಶಗಳನ್ನು ಗ್ರಹಿಸಿ ಸಂತೋಷಪಡುವ ಔದಾರ್ಯ ಅವರಲ್ಲಿ ದೊಡ್ಡದಾಗಿತ್ತು. ಎಳೆಯ ಮಕ್ಕಳ ಹಾಡನ್ನು ಕೂಡ ಕೇಳಿ ಕೇಳಿ ಆನಂದಿಸುತ್ತಿದ್ದರು. ಘನವಿದ್ವಾಂಸರನ್ನಂತೂ ಮನಸಾರ ಗೌರವಿಸುತ್ತಿದ್ದರು.

ಬೆಂಗಳೂರಿನಲ್ಲಿ ಇಪ್ಪತ್ತು ವರ್ಷಗಳ ಹಿಂದೆ ಪ್ರಸಿದ್ಧ ಗಾಯಕ ವಿದ್ವಾಂಸರಾಗಿದ್ದ ಅನಂತಶಾಸ್ತ್ರಿಗಳು ಬಾಲ್ಯದಲ್ಲಿ ಸಾಮಾನ್ಯ ಪಾಠಶಾಲೆಯಲ್ಲಿ-ಬಹುಶಃ ಹೈಸ್ಕೂಲು ತರಗತಿಯಲ್ಲಿ-ಕಲಿಯುತ್ತಿದ್ದಾಗ ಕೃಷ್ಣಸ್ವಾಮಿ

ಅಯ್ಯರವರ ಶಿಷ್ಯರಾಗಿದ್ದರಂತೆ. ಶಾಸ್ತ್ರಿಗಳು ದೊಡ್ಡವರಾಗಿ ಹೆಸರುವಾಸಿಯಾದಮೇಲೆಯೂ ಕೃಷ್ಣಸ್ವಾಮಯ್ಯರವರಲ್ಲಿ ಗುರು ಭಕ್ತಿಯನ್ನು ತೋರಿಸುತ್ತಿದ್ದರು. ಅಯ್ಯರವರಿಗೆ ಶಾಸ್ತ್ರಿಗಳವರಲ್ಲಿ ಅತಿಶಯ ಮಮತೆ : ಏಕವಚನದಲ್ಲೇ ಸಂಬೋಧಿಸಿ ಮಾತನಾಡುತ್ತಿದ್ದರು. ಒಂದು ದಿನ ಸಂಜೆ ಕೃಷ್ಣಸ್ವಾಮಿ ಅಯ್ಯರವರು ಅವರ ಕೋಣೆಯಲ್ಲಿ ಕುಳಿತು ಪಿಟೀಲು ನುಡಿಸುತ್ತಿದ್ದಾಗ ಅನಂತಶಾಸ್ತ್ರಿಗಳು ಬಂದರು. ಅಯ್ಯರವರು- "ಒಳ್ಳೆಯ ಹೊತ್ತಿಗೆ ಬಂದೆಯಯ್ಯಾ, ಮನಸ್ಸು ಯಾಕೋ ಕೇದಾರಗೌಳದಮೇಲೆ ತಿರುಗಿದೆ" -ಎಂದರು. ಶಾಸ್ತ್ರಿಗಳು "ಅಪ್ಪಣೆಯಾದರೆ ಸಿದ್ಧ" ಎಂದರು. ಅಷ್ಟು ಹೊತ್ತಿಗೆ ಮನೆಯೊಳಗಿನಿಂದ ಸಂಧ್ಯಾವಂದನೆಗೆ ಹೊತ್ತಾಗಿದೆಯೆಂದು ಜ್ಞಾಪಕದ ಮಾತು ಬಂತು. ಕೂಡಲೆ ಅಲ್ಲಿದ್ದ ನಾಲ್ವರೈವರು ಎದ್ದು ಅವರ ಮಾತಿನಂತೆ ಅವರಲ್ಲಿಯೇ ಭೋಜನ ತೀರಿಸಿಕೊಂಡು ಕುಳಿತೆವು. ಸುಮಾರು ೮ ಘಂಟೆ ಇರಬಹುದು, ಕೇದಾರಗೌಳದ ಆಲಾಪನೆ, ತಾನವಿಸ್ತಾರ, ಕೀರ್ತನೆ-ಬಹುಶಃ "ಶ್ರೀ ನೀಲಕಠಂ" -ಸ್ವರ ಸಂಗತಿ ಇವು ಮುಗಿದು ನಾವು ಗಡಿಯಾರ ನೋಡುವ ವೇಳೆಗೆ ಸುಮಾರು ಹನ್ನೊಂದಾಗಿತ್ತು. ಆಗ- ಈಗ್ಗೆ(೧೯೫೩) ಸುಮಾರು ಮೂವತ್ತು ವರ್ಷಗಳ ಹಿಂದೆ-ನಾನು ಕೇಳಿದ ಆ ಕೇದಾರಗೌಳನಿನಾದವು ಈಗಲೂ ನನ್ನ ಕಿವಿಗಳಲ್ಲಿ ಅನುರಣಿತವಾಗುತ್ತಿರುವಂತಿದೆ. ಆ ಹೊತ್ತು ಅಯ್ಯರವರು ಶಾಸ್ತ್ರಿಗಳನ್ನು ತಬ್ಬಿಕೊಂಡು ಕೊಂಡಾಡಿ, "ಏನು ಮಾಡಲಯ್ಯ, ಇಷ್ಟು ಹೊತ್ತಿನಲ್ಲಿ ಒಂದು ಹೂವಿನ ಹಾರ ಕೂಡ ಸಿಕ್ಕುವುದಿಲ್ಲ" ಎಂದು ಪೇಚಾಡಿ ಮನೆಯೊಳಗೆ ದೇವತಾರ್ಪಣೆಯಾಗಿದ್ದ ಹೂವನ್ನು ತರಿಸಿ ಶಾಸ್ತ್ರಿಗಳಿಗೆ ಕೊಟ್ಟರು. ಅವರು "ನನಗೆ ಇದಕ್ಕಿಂತ ದೊಡ್ಡ ಬಹುಮಾನ ಯಾವುದೂ ಬೇಕಿಲ್ಲ" ಎಂದರು.

ಕೃಷ್ಣಸ್ವಾಮಯ್ಯರವರಿಗೆ ಇಂಗ್ಲೀಷ್ ಸಾಹಿತ್ಯದಲ್ಲಿದ್ದ ವಿಸ್ತಾರವಾದ ಪರಿಚಯವನ್ನೂ ಆ ಭಾಷೆಯ ಸೊಗಸಿನ ವಿಷಯದಲ್ಲಿದ್ದ ಸೂಕ್ಷ್ಮವೇದಿತೆಯನ್ನೂ ಆಗಲೇ ಸೂಚಿಸಿದೆ. ಸಂಸ್ಕೃತ ಸಾಹಿತ್ಯದಲ್ಲಿಯೂ ಅವರಿಗೆ ವಿಸ್ತಾರವಾದ ಪರಿಚಯವಿತ್ತು. ಕೃಷ್ಣಸ್ವಾಮಿ ಅಯ್ಯರ್ ಅವರಿಗೆ ಬಹು ಮೆಚ್ಚಿಕೆಯಾದ ಸಂಸ್ಕೃತ ವಿದ್ವಾಂಸರಲ್ಲಿ ಬ್ರಹ್ಮಶ್ರೀ ಮೋಟಗಾನಹಳ್ಳಿಯ ಶಂಕರಶಾಸ್ತ್ರಿಗಳವರು ಮುಖ್ಯರು. ಇವರು ಸಾಹಿತ್ಯದಲ್ಲಿಯೂ ವೇದಾಂತ ಶಾಸ್ತ್ರದಲ್ಲಿಯೂ ಹೆಚ್ಚು ಪರಿಶ್ರಮ ಮಾಡಿದ್ದವರು. ವೇದಾಂತ 'ಪಂಚದಶೀ' ಗ್ರಂಥವನ್ನು ಇಂಗ್ಲೀಷ್ ಭಾಷೆಗೆ ತರ್ಜುಮೆ ಮಾಡುವ ಕಷ್ಟ ಕಾರ್ಯದಲ್ಲಿ ಶಂಕರಶಾಸ್ತ್ರಿಗಳವರು ಕೃಷ್ಣಸ್ವಾಮಿ ಅಯ್ಯರವರಿಗೂ ಡಾ || ಶ್ರೀನಿವಾಸರಾಯರವರಿಗೂ ಮುಖ್ಯ ಸಹಾಯವಾಗಿದ್ದರು. ಶಂಕರಶಾಸ್ತ್ರಿಗಳು ಗತಾನುಗತಿಕವಲ್ಲದ ಸ್ವತಂತ್ರ ವಿಚಾರ ಬುದ್ಧಿಯುಳ್ಳವರೆಂದೂ, ಹೊಸ ಭಾವನೆ ಹೊಸ ಅಭಿಪ್ರಾಯಗಳನ್ನು ಪೂರ್ವಾಗ್ರಹವಿಲ್ಲದೆ ಲಾಲಿಸಿ ಪರಾಮರ್ಶಿಸತಕ್ಕವರೆಂದೂ ಅವರ ಬುದ್ಧಿಗುಣವನ್ನು ಕೃಷ್ಣಸ್ವಾಮಿ ಅಯ್ಯರವರು ಕೊಂಡಾಡುತ್ತಿದ್ದರು.

ಕೃಷ್ಣಸ್ವಾಮಿ ಅಯ್ಯರವರಿಗೆ ವೇದಾಂತ ವಿಚಾರದಲ್ಲಿ ಇಷ್ಟರಾಗಿದ್ದ ಇನ್ನೊಬ್ಬ ತಾತ್ತ್ವಿಕರು ಅನಂತಪ್ಪ ಎಂಬವರು. ಇವರು ಪಟ್ಟೇಗಾರ ಜಾತಿಯವರೆಂದು ಹೇಳುತ್ತಾರೆ. ಇವರಿಗಿದ್ದ ಅಂತರ್ಮುಖಿ ಪ್ರಜ್ಞೆಯನ್ನು ಅಯ್ಯರವರೂ, ಶಂಕರಶಾಸ್ತ್ರಿಗಳೂ ಸಹ ಆಗಾಗ್ಗೆ ಪ್ರಶಂಸೆ ಮಾಡುತ್ತಿದ್ದರು. ಅನಂತಸ್ವಾಮಿಗಳ ಮಠ ಸುಬೇದಾರ್ ಛತ್ರಂ ರಸ್ತೆಗೆ ಪೂರ್ವದ ಕಡೆ. ಗಾಂಧೀನಗರದ ವಾಯವ್ಯ ದಿಕ್ಕಿನಲ್ಲಿದೆ.

ತಮಿಳಿನಲ್ಲಿಯೂ ಸಹ ಕೃಷ್ಣಸ್ವಾಮಿ ಅಯ್ಯರವರಿಗೆ ನಿಷ್ಕೃಷ್ಟವಾದ ಪಾಂಡಿತ್ಯವಿತ್ತು. ಕನ್ನಡದಲ್ಲಿ ಅವರಿಗೆ ಅದೇ ತಾಯಿನುಡಿಯಾದವರಿಗೆ ಎಷ್ಟು ಪ್ರೇಮವುಂಟೋ ಅಷ್ಟು ಪ್ರೇಮವಿತ್ತು. ಅವರು ಕನ್ನಡದಲ್ಲಿ ಆಗಾಗ ಹಾಡು, ಕಥೆಗಳನ್ನು ರಚಿಸಿದ್ದರು. ದ್ವೈತಮತಸ್ಥರ-

ಶಿವ ನೀ ಹ್ಯಾಂಗಾದ್ಯೋ-ತಾಯಿ ಗಂಡ ।
ಶಿವ ನೀ ಹ್ಯಾಂಗಾದ್ಯೋ ॥
ಶಿವನೀನಾದರೆ ಶಿವನರ್ಧಾಂಗಿಯು ।
ನಿನಗೇನಾಗಬೇಕೋ ॥ ತಾ.-ಗ. ॥

ಎಂಬ ಹಾಡಿಗೆ ಉತ್ತರವಾಗಿ-

ಶಿವ ನೀ ಹ್ಯಾಂಗಲ್ಲೋ-ಮರುಳೇ
ಶಿವ ನೀ ಹ್ಯಾಂಗಲ್ಲೋ
ಶಿವನೆಲ್ಲವಾಗಿರೆ ಶಿವನರ್ಧಾಂಗಿಯು
ಶಿವನೇ ಅಲ್ಲವೇನೋ ॥ ಮರುಳೆ ॥

ಎಂದು ಮುಂತಾಗಿ ಅದ್ವೈತದ ಹಾಡು ಕಟ್ಟಿದ್ದರು. ಅದರ ಮಾತುಗಳನ್ನು ಇಲ್ಲಿ ಜ್ಞಾಪಕವಿರುವಂತೆ ಬರೆದಿದ್ದೇನೆ. ಅದನ್ನು ಸರಿಯಾಗಿ ಬರೆದಿರಿಸಿಕೊಳ್ಳಲಿಲ್ಲವೆಂದು ಈಗ ಪಶ್ಚಾತ್ತಾಪಪಡುತ್ತಿದ್ದೇನೆ.

ಕೃಷ್ಣಸ್ವಾಮಯ್ಯರವರು ಕನ್ನಡದಲ್ಲಿ ಕೆಲವು ಸಣ್ಣ ಸಣ್ಣ ಪ್ರಹಸನಗಳನ್ನು ಬರೆದಿದ್ದರು. ಅದರಲ್ಲಿ ಒಂದನ್ನು ಪ್ರಕಟಮಾಡುವ ಯೋಗ ನನ್ನ ಪಾಲಿಗೆ ಬಂದಿತ್ತು. ಆ ಸಣ್ಣ ಪ್ರಹಸನದಲ್ಲಿ ನಮ್ಮ ಹಳ್ಳಿಗರ ಜಗಳ, ಅವರು ವಕೀಲರ ಕೈಗೆ ಸಿಕ್ಕಿ ಪಡುವ ಪಾಡು-ಇವು ಹಾಸ್ಯವಿನೋದಗಳೊಡನೆ ಚಿತ್ರಿತವಾಗಿವೆ.

ಕೃಷ್ಣಸ್ವಾಮಯ್ಯರವರು ಹಳ್ಳಿಗಳ ಜಾತ್ರೆ ಪರಿಷೆಗಳಲ್ಲಿ ಕೋಲಾಟ ಕುಣಿತಗಳನ್ನು ನೋಡಿ ಸಂತೋಷಪಡುತ್ತಿದ್ದರು. ಅವರು ಈ ಕೆಳಗಿನ ಲಾವಣಿಯನ್ನು ಹೇಳುತ್ತಲಿದ್ದದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ಅದು ಬೆಳ್ಳಾವೆ ಜಾತ್ರೆಯ ಲಾವಣಿ :

ಮುಕ್ಕಣ್ಣನೆಲ್ಲರೂ ಕೊಂಡ್ಹಾಡಿರೋ-ಸರ- ।
ಣಿಕ್ಕಿ ಸೋಮೇಶನ್ನ ಕೊಂಡ್ಹಾಡಿರೋ ॥
ಮುಕ್ಕಣ್ಣ ಮಾರಣ್ಣ ಬುಕ್ಕಣ್ಣ ಬೀರಣ್ಣ ।
ಶಿಕ್ಷಣ್ಣ ಸಂಗಣ ಲಕ್ಷಣ್ಣ ಲಿಂಗಣ್ಣ ।
ಭೊಜ್ಜೆಯ ಯಿಘ್ನೇಶ ಸರಣೂ-ನಿನ್ನ ।
ಗೆಜ್ಜೆಯಕಾಲಿನ ಸದ್ದಿಗೆ ಸರಣೂ ॥
ಕಜ್ಜಾಯ ನೈವೇದ್ಯ ತರುವೇ-ನಮ್ಮ ।
ಹೆಜ್ಜೆಯ ಕೋಲಾಟವಾಡಿಸೊ ಗುರುವೇ ॥

ಇದನ್ನು ಹೇಳುವುದರಲ್ಲಿ ಹಳ್ಳಿಗರ ಉಚ್ಚಾರಣೆ, ಅವರ ಗಂಟಲ ಧಾಟಿ, ಮೆಲ್ಲಕ್ಷರವಿರುವ ಕಡೆ ಗಟ್ಟಿ ಅಕ್ಷರ ನುಡಿಯುವುದು ಮೊದಲಾದ ಸೊಟ್ಟೆಪಟ್ಟೆಗಳು-ಇವನ್ನೆಲ್ಲ ಅನುಕರಣೆ ಮಾಡಿ ನಗಿಸಿ, ಹಳ್ಳಿಯವರ ನೈಜವಾದ ದೈವಭಕ್ತಿಯನ್ನೂ ಮನಸ್ಸಿನ ಸರಳತೆಯನ್ನೂ ಮೆಚ್ಚಿಕೊಳ್ಳುತ್ತಿದ್ದರು.

ಕೃಷ್ಣಸ್ವಾಮಯ್ಯರವರ ಸಂಭಾಷಣೆ ಸರಸ ಹಾಸ್ಯಗಳಿಂದ ತುಂಬಿರುತ್ತಿತ್ತು. ಯಾವಾಗಲೂ ಅವರಿಗೆ ಸುತ್ತಮುತ್ತ ಸ್ನೇಹಿತರಿರಬೇಕು. ಅವರವರ ಕಷ್ಟಸುಖಗಳನ್ನು ವಿಚಾರಿಸಬೇಕು. ತಿಳಿವಳಿಕೆಯ ಮಾತನ್ನಾಡಿ ಕುಗ್ಗಿದವರಿಗೆ ಉತ್ಸಾಹವನ್ನೂ ಉಬ್ಬಿದವರಿಗೆ ವಿವೇಕವನ್ನೂ ನೀಡಬೇಕು. ಸದ್ವಿಷಯದಲ್ಲಿ ಕಾಲಕ್ಷೇಪ ಮಾಡಬೇಕು. ಆದರೆ ಯಾವ ಪ್ರಸಂಗದಲ್ಲಿಯೂ ಹರ್ಷವನ್ನು ತೊರೆಯಬಾರದು. ಇದು ಅವರ ಮನೋವೃತ್ತಿ.

ಕೃಷ್ಣಸ್ವಾಮಯ್ಯರವರ ಜೀವನ ಎಲ್ಲ ದೃಷ್ಟಿಗಳಿಂದಲೂ ನಿರ್ಮಲವಾದದ್ದು ಮತ್ತು ಶಾಂತಿಮಯವಾದದ್ದು. ಪೂರ್ವಾಚಾರಗಳನ್ನು ಅವರು ಸಾಧ್ಯವಾದಷ್ಟು ಇರಿಸಿಕೊಂಡಿದ್ದರು. ಸಂಧ್ಯಾದಿ ವಿಹಿತ ಕರ್ಮಗಳಲ್ಲಿ ತಪ್ಪಿದವರಲ್ಲ. ಅತಿಥಿ ಸತ್ಕಾರ ನಿರತರಾಗಿದ್ದರು. ಅವರು ಸಂಸಾರದ ನೋವು ನಿಷ್ಠುರಗಳನ್ನು ಪೂರಾ ಅನುಭವಿಸಿದ್ದರು. ನೊಂದವರ ವಿಷಯದಲ್ಲಿ ಅವರಿಗೆ ಸಹಾನುಭೂತಿ ನೈಜವಾಗಿ ಬಂದಿತ್ತು. ಇಷ್ಟಿದ್ದರೂ

ಅವರ ಅಂತರಾತ್ಮವು ಸರ್ವದಾ ಪರತತ್ತ್ವನಿಷ್ಠವಾಗಿದ್ದದ್ದರಿಂದ ಅವರ ಮನಸ್ಸೂ ಮಾತೂ ನಡವಳಿಕೆಯೂ ಪ್ರಸನ್ನವಾಗಿರುತ್ತಿದ್ದವು. ಅವರು ಈ ಕೆಳಗಿನ ಶ್ಲೋಕವನ್ನು ಧ್ಯೇಯವಚನವೆಂದು ಪದೇಪದೇ ಹೇಳಿಕೊಳ್ಳುತ್ತಿದ್ದರು :

ದೇಹಾಭಿಮಾನೇ ಗಳಿತೇ
ವಿಜ್ಞಾತೇ ಪರಮಾತ್ಮನಿ ।
ಯತ್ರ ಯತ್ರ ಮನೋ ಯಾತಿ
ತತ್ರ ತತ್ರ ಸಮಾಧಯಃ ॥

ಅವರ ಸಮೀಪದಲ್ಲಿ ಒಂದೆರಡು ಘಳಿಗೆ ಇದ್ದವರ್ಯಾರೂ ಆ ಸರಸ ಸೌಜನ್ಯದ-ಆ ಜ್ಞಾನಮಯ ಶಾಂತಿಯ-ಅನುಭವವನ್ನು ಮರೆಯಲಾರರು.

೩

# ಎಂ.ಜಿ. ವರದಾಚಾರ್ಯರು

ಬೆಂಗಳೂರಿನಲ್ಲಿ ಇಂಗ್ಲೀಷ್ ಕವಿತ್ವದ ಯೋಗ್ಯತೆಯನ್ನು ಗೊತ್ತಾಗಿ ಹೇಳಬಲ್ಲವರೆಂದು ನನ್ನ ಸ್ನೇಹಿತರು ಶಿಫಾರಸು ಮಾಡಿದ್ದ ಮೂವರಲ್ಲಿ ಮೂರನೆಯವರು ಶ್ರೀ ಎಂ.ಜಿ. ವರದಾಚಾರ್ಯರೆಂಬುದನ್ನು ಮೊದಲೇ ಹೇಳಿದ್ದೇನೆ.

ಶ್ರೀಮಾನ್ ವರದಾಚಾರ್ಯರು ನಮ್ಮನ್ನು ಬಿಟ್ಟುಹೋಗಿ (೧೯೧೮-೧೯) ಇಂದಿಗೆ ಸುಮಾರು ೩೪ ವರ್ಷಗಳಾಗಿವೆ. ಆದರೂ ಅವರ ಹೆಸರು ಜ್ಞಾಪಕಕ್ಕೆ ಬಂದೊಡನೆ ಗಂಟಲು ಕಟ್ಟುತ್ತದೆ, ಉಸಿರು ಭಾರವಾಗುತ್ತದೆ, ಕಣ್ಣಿನಲ್ಲಿ ಹನಿಗೂಡುತ್ತದೆ. ಅಂಥ ರಸಪೂರ್ಣ ವ್ಯಕ್ತಿ ಆತ.

ನಾನು ಮೊದಲು ಆತನ ಮನೆಗೆ ಹೋದಾಗ ಆತ ಒಂದು ಸಲ ಬಿ.ಎಲ್., ಪರೀಕ್ಷೆಯಲ್ಲಿ ಜಯ ಕಾಣದೆ ಪುನಃ ಆ ಪರೀಕ್ಷೆಗೆ ಓದುತ್ತಿದ್ದರು. ಅವರು ವಾಸವಾಗಿದ್ದದ್ದು ಚಾಮರಾಜಪೇಟೆಯ ಅಪ್ಪಾಜಪ್ಪನವರ ಅಗ್ರಹಾರದ ಪೂರ್ವ ಶ್ರೇಣಿಯ ದಕ್ಷಿಣದ ಕಡೆಯ ಕೊನೆಯ ಮನೆ. ಅದು ಈಗ ಪೂರ್ತಿ ರೂಪ ಬದಲಾಯಿಸಿದೆ. ನಾನು ಅಲ್ಲಿಗೆ ಹೋದಾಗ ಅವರು ಕೆಂಪು ರೇಷ್ಮೆಯ ಮಗುಟ ಉಟ್ಟುಕೊಂಡಿದ್ದರು. ಅದೇ ವಸ್ತ್ರದ ಅರ್ಧವನ್ನು ಮುಂಡು ಸುತ್ತಿ, ಇನ್ನೊಂದರ್ಧವನ್ನು ಮೇಲೆ ಹೊದ್ದಿದ್ದರು. ಅಪರಾಹ್ಣ ಮೂರು ಘಂಟೆಯಲ್ಲಿ ಇನ್ನೂ ಅಂಥ ಉಡುಪಿನಲ್ಲಿದ್ದದ್ದು ನೋಡಿ ನನಗೆ ಕೊಂಚ ಆಶ್ಚರ್ಯವಾಯಿತು. ಬಹುಶಃ ಅಂದು ಊಟಕ್ಕೆ ಯಾವುದೋ ಕಾರಣದಿಂದ ಹೊತ್ತಾಗಿರಬಹುದೆಂದು ಊಹಿಸಿಕೊಂಡೆ. ಅದು ನಿರಾಧಾರವಾದ ಊಹೆಯೆಂದು ಕೆಲವು ದಿನಗಳ ಮೇಲೆ ಗೊತ್ತಾಯಿತು. ಆ ದಿನ ಅವರು ಮಾಮೂಲು ಹೊತ್ತಿಗೇ ಊಟ ಮಾಡಿದರು. ಆದರೆ ಮನಸ್ಸು ಯಾವುದೋ ಹವ್ಯಾಸದಲ್ಲಿ ಮಗ್ನವಾಗಿದ್ದದ್ದರಿಂದ ಮಡಿಯಿಂದ ಬೇರೆ ಬಟ್ಟೆಗೆ ಬದಲಾಯಿಸುವ ಅವಸರ ತೋರಲಿಲ್ಲ. ಇದ್ದಂತೆಯೇ ಇದ್ದು ಬಿಟ್ಟರು.

ವರದಾಚಾರ್ಯರು ನಾನು ಬಂದದ್ದನ್ನು ಒಳಗಿನಿಂದಲೇ ಕಂಡು ಪ್ರಫುಲ್ಲ ಮುಖದಿಂದ ಹೊರಬಾಗಿಲವರೆಗೆ ಬಂದು ಒಳಕ್ಕೆ ಕರೆದುಕೊಂಡು ಹೋಗಿ ನಡುಮನೆಯಲ್ಲಿ ಕುಳ್ಳಿರಿಸಿಕೊಂಡರು. ಅಲ್ಲಿ ನಾಲ್ಕು ಪಕ್ಕದ ಗೋಡೆಗಳ ಮೇಲೂ ಒಳ್ಳೊಳ್ಳೆಯ ಪಟಗಳೂ ಫೋಟೋಗ್ರಾಫುಗಳೂ ಇದ್ದವು. ನಡುವೆ

ಮೇಜಿನ ಮೇಲೆ ಎತ್ತರವಾದ ಪೀಠದಲ್ಲಿ ರೇಷ್ಮೆಯ ವಸ್ತ್ರದ ಮೇಲೆ ಶ್ರೀ ರಾಮಕೃಷ್ಣ ಪರಮಹಂಸರ ಮತ್ತು ಸ್ವಾಮಿ ವಿವೇಕಾನಂದರ ಚಿತ್ರಪಟಗಳು ಪುಷ್ಪಹಾರಗಳಿಂದ ಅಲಂಕೃತವಾಗಿ ಎದ್ದು ಕಾಣುತ್ತಿದ್ದವು. ನನ್ನ ಕಣ್ಣನ್ನು ಮೊದಲು ಮತ್ತು ಪುನಃ ಪುನಃ ಆಕರ್ಷಿಸಿದ್ದು ಈ ದೃಶ್ಯ. ನಾನೂ ಅವರೂ ಒಂದೇ ಗುಡಿಯಲ್ಲಿ ಪೂಜಿಸುತ್ತಿದ್ದವರೆಂದು ಕೂಡಲೆ ನನಗೆ ಭರವಸೆಯುಂಟಾಯಿತು.

ನನ್ನ ಪ್ರವರವನ್ನೂ ಪ್ರಸಕ್ತ ಕಾರ್ಯವನ್ನೂ ಹೇಳಿಕೊಂಡೆ. ಅವರು ನಗುತ್ತ- "ನಾನೂ ಅಂಥ ಅಪರಾಧ ಮಾಡುವವನೇ" -ಎಂದು ಹೇಳಿ, ನನ್ನ ಕಡತವನ್ನು ನೋಡಬಯಸಿದರು. ಆ ವೇಳೆಗೆ ಅದು ಕೃಷ್ಣಸ್ವಾಮಯ್ಯರವರ ಕೈಯಿಂದ ಪರಿಷ್ಕೃತವಾಗಿತ್ತು. ವರದಾಚಾರ್ಯರಿಗೆ ಅದರಲ್ಲಿ ಓದಿನ ಧಾಟಿಗೆ ಅಡ್ಡಿ ತರಬಲ್ಲಂಥ ತೊಡಕು ಯಾವುದೂ ತೋರಿದಂತೆ ನನಗೆ ತೋರಲಿಲ್ಲ. ಅವರು ನಗುನಗುತ್ತ ಮೊದಲಿನಿಂದ ಕಡೆಯವರೆಗೂ ಅದನ್ನೋದಿ ಭೇಷ್ ಎಂದರು. "ನಾನೂ ಅಭೇದಾನಂದರನ್ನು ಸ್ವಾಗತಿಸಲು ನಾಲ್ಕು ಪಂಕ್ತಿ ಬರೆಯಬೇಕೆಂದಿದ್ದೆ. ಅದಕ್ಕಾಗಿ ನಾನು ಇಟ್ಟುಕೊಂಡಿದ್ದ ಭಾವನೆಗಳನ್ನು ನೀವು ಇದರಲ್ಲಿ ತಂದೇಬಿಟ್ಟಿದ್ದೀರಿ" ಎಂದು ಹೇಳಿದರು. ಅದು ಅವರ ಔದಾರ್ಯದ ಗುರುತು. ಅವರೇ ಬೇರೆಯಾಗಿ ನಾಲ್ಕು ಹಸನಾದ ಪದ್ಯಗಳನ್ನು ಬರೆದಿದ್ದರೆಂದೂ ಅವು ಅವರ ಸ್ವತಂತ್ರ ಮಾರ್ಗದಲ್ಲಿದ್ದುವೆಂದೂ ನನ್ನ ಈಗಿನ ಜ್ಞಾಪಕ.

ಆಗ ಶ್ರೀ ರಾಮಕೃಷ್ಣ ಮಠವು ಅಪ್ಪಾಜಪ್ಪನವರ ಅಗ್ರಹಾರದ ಪೂರ್ವ ಶ್ರೇಣಿಯ ಉತ್ತರದ ಕಡೆ- ಚಾಮರಾಜಪೇಟೆಯ ೧ ನೆಯ ರಸ್ತೆಗೆ ಬಾಗಿಲಿರುವ-ಮೊದಲನೆಯ ಕಟ್ಟಡದಲ್ಲಿತ್ತು. ಸ್ವಾಮಿ ಆತ್ಮಾನಂದರೆಂಬ ಸಾಧುಗಳು-ವೃದ್ಧರೂ ಉಪಶಾಂತರೂ ಆದವರು-ಮಠದ ಯಜಮಾನರಾಗಿದ್ದರು. ಎಂ.ಜಿ.ವರದಾಚಾರ್ಯರು ಅಲ್ಲಿಗೆ ದಿನಕ್ಕೊಂದು ಸಾರಿ ತಪ್ಪದೆ ಬರುತ್ತಿದ್ದರು. ನಾನೂ ಅವರೂ ಅಲ್ಲಿ ಎಷ್ಟೋ ಸಲ ಕಲೆತು ಮಾತುಕಥೆಯಾಡಿದ್ದೇವೆ. ಸ್ವಾಮಿಗಳಿಗೆ ವರದಾಚಾರ್ಯರ ಮೇಲೆ ತುಂಬ ಪ್ರೀತಿ. ಆ ವೇಳೆಗೇ ವರದಾಚಾರ್ಯರು ಬಹು ಜನರ ಅಭಿಮಾನಕ್ಕೆ ಪಾತ್ರರಾಗಿದ್ದರು ಅವರಿನ್ನೂ ವಿದ್ಯಾರ್ಥಿದಶೆಯಲ್ಲಿದ್ದರೂ ಹಿರಿಯರು ಅವರ ವಿಷಯದಲ್ಲಿ ಗೌರವ ತೋರುತ್ತಿದ್ದರು.

ವರದಾಚಾರ್ಯರು ಇಂಗ್ಲಿಷಿನಲ್ಲಿ ಸೊಗಸಾಗಿ ಪದ್ಯರಚನೆ ಮಾಡಬಲ್ಲವರೆಂದು ಆಗ ಬೆಂಗಳೂರಿನ ವಿದ್ವದ್ಗೋಷ್ಠಿಗಳಲ್ಲಿ ಪ್ರಸಿದ್ಧವಾಗಿತ್ತು. ೧೯೦೮-೯ರ ಸುಮಾರಿನಲ್ಲಿ ಅವರು ಲಾಲ್-ಬಾಲ್-ಪಾಲ್ (Lal-Bal-Pal) ಎಂಬ ಶೀರ್ಷಿಕೆಯಲ್ಲಿ ಲಾಲಾ ಲಜಪತರಾಯ್, ಬಾಲಗಂಗಾಧರ ತಿಲಕ್, ಬಿಪಿನ್ ಚಂದ್ರಪಾಲ್-ಈ ಮೂವರು ಭಾರತ ವೀರರಿಗೆ ಬ್ರಿಟಿಷ್ ಸರಕಾರ ವಿಧಿಸಿದ್ದ ದಂಡನೆಯನ್ನು ಕುರಿತು

ಪ್ರತಿಭಟನ ಪದ್ಯಾವಳಿಯನ್ನು ಪ್ರಕಟಿಸಿದ್ದರು. ಆ ಪದ್ಯಗಳನ್ನು ಬಹುಮಂದಿ ಕಂಠಪಾಠ ಮಾಡಿ ಹೇಳುತ್ತಿದ್ದರು. ಅವರ ಇನ್ನೂ ಹಲವು ಇಂಗ್ಲೀಷ್ ಪದ್ಯಗಳನ್ನು ನಾನು ಓದಿದ್ದೇನೆ. ಅವರು ಗೋಖಲೆಯವರ ಮೇಲೆ ರಚಿಸಿದ ಜ್ಞಾಪಕಪದ್ಯಗಳನ್ನು ನಾನು ಪ್ರಕಟಮಾಡಿದ್ದೇನೆ. ಅವರ ಎಷ್ಟೋ ಇಂಗ್ಲೀಷ್ ಪದ್ಯಗಳು ಮುದ್ರಣ ಯೋಗಕ್ಕಾಗಿ ಕಾದುಕೊಂಡು ಅವರ ನೋಟ್ ಬುಕ್ಕಿನಲ್ಲಿದ್ದದ್ದನ್ನು ನೋಡಿದ್ದೇನೆ. ಅಚ್ಚಾಗಿದ್ದವುಗಳನ್ನೂ ಇನ್ನೂ ಹಸ್ತಲಿಪಿಯಲ್ಲಿಯೇ ಇದ್ದವುಗಳನ್ನೂ ಒಟ್ಟಿಗೆ ಸಂಗ್ರಹಮಾಡಿ ಒಂದು ಸಣ್ಣ ಪುಸ್ತಕವಾಗಿ ಪ್ರಕಟಿಸಬೇಕೆಂಬ ಆಲೋಚನೆ ವರದಾಚಾರ್ಯರ ಬಂಧುಮಿತ್ರರಲ್ಲಿ ಕೆಲವು ಕಾಲ ಇತ್ತು. ಅದು ರೂಪುಗೊಳ್ಳದೆ ಹೋದದ್ದಕ್ಕೆ ಕಾರಣಗಳನ್ನು ಹೇಳಬಹುದು. ಅದರಿಂದ ಫಲವಿಲ್ಲ. ಲೋಕ ಎಷ್ಟೆಷ್ಟೋ ಒಳ್ಳೆಯ ಪದಾರ್ಥಗಳನ್ನು ಕಳೆದುಕೊಂಡಿವೆ. ಅವುಗಳ ಪೈಕಿ ವರದಾಚಾರ್ಯರ ಇಂಗ್ಲೀಷ್ ಕವಿತಾಗ್ರಂಥವೂ ಒಂದು.

ಎಂ.ಜಿ. ವರದಾಚಾರ್ಯರು ಶ್ರೀರಂಗಪಟ್ಟಣದವರು. ಅವರ ಅಜ್ಜಂದಿರು ಕವಿ ವರದಾಚಾರ್ಯರು ಮೈಸೂರು ರಾಜಾಸ್ಥಾನದಲ್ಲಿ ಪ್ರಮುಖರಾಗಿದ್ದ ವಿದ್ವಾಂಸರು. ವರದಾಚಾರ್ಯರ ಸೋದರಮಾವಂದಿರು ಬೆಂಗಳೂರಿನಲ್ಲಿ ನೇತ್ರ ವೈದ್ಯಶಾಲೆಯನ್ನು ಪ್ರಾರಂಭಿಸಿದ ಡಾ ॥ ಬಿ. ರಾಮಸ್ವಾಮಿ ಅಯ್ಯಂಗಾರ್ಯರು. ವರದಾಚಾರ್ಯರ ಜ್ಯೇಷ್ಠ ಸಹೋದರಿ ಶ್ರೀಮತಿ ಶ್ರೀರಂಗಮ್ಮನವರು, ಬಿ.ಎ., ಪಟ್ಟ ಸಂಪಾದಿಸಿದ ಮೈಸೂರು ಮಹಿಳಾ ಮಂಡಲಿಯಲ್ಲಿ ಮೊದಲನೆಯೊಬ್ಬರು. ಅವರು ವಿದ್ಯಾ ಇಲಾಖೆಯಲ್ಲಿ ವಿಶೇಷ ಮನ್ನಣೆಗಳಿಸಿ ಭಗವದನುಗ್ರಹದಿಂದ ಈಗ ಮಲ್ಲೇಶ್ವರದಲ್ಲಿ ಕೀರ್ತಿವಂತರಾಗಿದ್ದಾರೆ.

ವರದಾಚಾರ್ಯರು ಸ್ನೇಹಗೋಷ್ಠೀಪ್ರಿಯರು. ಸಾಮಾನ್ಯವಾಗಿ ಪ್ರತಿ ಸಂಜೆಯೂ ಡಾ ॥ ರಾಮಸ್ವಾಮಿ ಅಯ್ಯಂಗಾರ್ಯರವರ ಮನೆಯಲ್ಲಿ ಸೇರುತ್ತಿದ್ದ ಮಿತ್ರ ಸಂಭಾಷಣೆಯಲ್ಲಿ ವರದಾಚಾರ್ಯರು ಇರುತ್ತಿದ್ದರು. ರಾಮಸ್ವಾಮಿ ಅಯ್ಯಂಗಾರ್ಯರವರ ಭಾರ್ಯೆಯೂ ಮತ್ತೊಬ್ಬ ಸ್ತ್ರೀಬಂಧುವೂ ಬಂಗಾಳ ದೇಶದವರು ಮತ್ತು ಬ್ರಹ್ಮ ಸಮಾಜದವರು. ಆ ಗೋಷ್ಠಿಯಲ್ಲಿ ಮತತತ್ತ್ವಗಳೂ ಸಾಹಿತ್ಯ ವಿಚಾರಗಳೂ ಚಿತ್ರಕಲಾ ತತ್ತ್ವಗಳೂ ಸಾಮಾಜಿಕ ಪ್ರಶ್ನೆಗಳೂ ಎಲ್ಲ ಸಾರ್ವಜನಿಕ ವಿಚಾರಗಳೂ ಚರ್ಚೆಗೆ ಬರುತ್ತಿದ್ದವು. ವರದಾಚಾರ್ಯರು ಆ ಚರ್ಚೆಗಳಲ್ಲಿ ಭಾಗವಹಿಸಿ ಒಳ್ಳೆಯ ಸಂಭಾಷಿಯೆನಿಸಿಕೊಂಡಿದ್ದರು.

ವರದಾಚಾರ್ಯರು ಬಿ.ಎಲ್., ಪಟ್ಟ ಪಡೆದು ಅಡ್ವೊಕೇಟ್ ಉದ್ಯೋಗವನ್ನು ಕೈಗೊಂಡಮೇಲೆ ಸೋದರಮಾವಂದಿರ ಮನೆಯ ಗೋಷ್ಠಿಗಳಲ್ಲಿ ಸೇರಲು ಹಿಂದಿನಂತೆ ಪುರಸತ್ತಾಗುತ್ತಿರಲಿಲ್ಲ. ಕಸಬಿನ ಜವಾಬ್ದಾರಿ ಅವರಿಗೆ ಬಹುಬೇಗ ಬೆಳೆಯುತ್ತಾ ಬಂತು.

ವರದಾಚಾರ್ಯರು ವಕೀಲಿ ವೃತ್ತಿಯನ್ನು ಪ್ರಾರಂಭಮಾಡಿದ್ದು ಪ್ರಸಿದ್ಧರಾಗಿದ್ದ ಶ್ರೀ ಎಲ್. ಶ್ರೀನಿವಾಸಯ್ಯಂಗಾರ್ಯರ ಆಫೀಸಿನಲ್ಲಿ. ಕೆಲವು ವರ್ಷ ಹಿಂದೆಯೇ ಶ್ರೀ ಸಿ.ಎಸ್.ದೊರೆಸ್ವಾಮಿ ಅಯ್ಯರವರು ಆ ಆಫೀಸನ್ನು ಸೇರಿದ್ದರು. ದೊರೆಸ್ವಾಮಿ ಅಯ್ಯರವರು ಕಡೆಗೆ ಮೈಸೂರು ಹೈಕೋರ್ಟಿನ ಮುಖ್ಯ ನ್ಯಾಯಾಧಿಕಾರಿಗಳಾಗಿದ್ದದ್ದು ಈಗ ಸಾಮಾನ್ಯವಾಗಿ ಎಲ್ಲರಿಗೂ ಜ್ಞಾಪಕವಿರಬಹುದು. ೧೯೧೪-೧೫ರ ಸುಮಾರಿನಲ್ಲಿ ದೊರೆಸ್ವಾಮಿ ಅಯ್ಯರವರೂ ವರದಾಚಾರ್ಯರೂ ಸೇರಿ ಸ್ವತಂತ್ರವಾಗಿ ಬೇರೆ ಆಫೀಸನ್ನು ಹೂಡಿದರು. ಅಂದಿನಿಂದ ಅವರಿಬ್ಬರ ಅದಾಯವೂ ಯಶಸ್ಸೂ ದಿನೇ ದಿನೇ ಬೆಳೆದವು. ಆಯುಸ್ಸು ಇದ್ದಿದ್ದರೆ ವರದಾಚಾರ್ಯರೂ ಹೈಕೋರ್ಟು ಪದವಿ ಹತ್ತಿರಬಹುದಾಗಿತ್ತೆಂದು ಊಹಿಸುವುದು ಹುಚ್ಚು ಊಹೆಯೆಂದು ಅವರನ್ನು ಬಲ್ಲವರು ಯಾರೂ ಹೇಳಲಾರರು; ಅಥವಾ ಅವರು ಸಾರ್ವಜನಿಕ ಜೀವನದಲ್ಲಿ ಅಗ್ರಪಂಕ್ತಿಗೆ ಹತ್ತಿ ಪ್ರಜಾಲಭ್ಯವಾದ ಸ್ಥಾನಗಳಲ್ಲಿ ಅತ್ಯುನ್ನತವಾದದ್ದನ್ನು ಪಡೆಯಬಹುದಾಗಿತ್ತೆಂದಾದರೂ ಹೇಳಬಹುದು. ೧೯೧೭-೧೮ರ ವೇಳೆಗೆ ಬೆಂಗಳೂರಿನಲ್ಲಿಯ ಪ್ರಮುಖ ಲಾಯರ್ ಆಫೀಸುಗಳು-ತಿಂಗಳು ತಿಂಗಳೂ ಸಾವಿರಗಟ್ಟಲೆ ವರಮಾನವಿದ್ದವುಗಳೂ-ನಾಲ್ಕೈದರಲ್ಲಿ ವರದಾಚಾರ್ಯರದೂ ಒಂದಾಗಿತ್ತು.

ಆದರೆ ವರದಾಚಾರ್ಯರ ಕಸಬುದಾರಿಯನ್ನು ಕುರಿತು ಮಾತು ಇಲ್ಲಿ ಪ್ರಾಸಂಗಿಕವಾಗಿ ಬಂದದ್ದು. ನಾನು ಹೇಳಬೇಕಾದ ಮಾತು ಅವರ ವಕೀಲಿಯ ನಿಪುಣತೆಯನ್ನಾಗಲಿ ವರಮಾನವನ್ನಾಗಲಿ ಕುರಿತದ್ದಲ್ಲ. ನನಗೆ ಅವರನ್ನು ಪ್ರಿಯರನ್ನಾಗಿ ಮಾಡಿದ ಗುಣಗಳು ಅವರ ಸಾಹಿತ್ಯ ರಸಿಕತೆ ಮತ್ತು ಅವರ ಸಾರ್ವಜನಿಕ ವಿಚಾರಾಸಕ್ತಿ.

ವರದಾಚಾರ್ಯರು ಪ್ರಭಾವಶಾಲಿಯಾದ ವಾಗ್ಮಿ. ಅವರ ಆಕಾರವೂ ಮುಖ ಭಾವವೂ ವಿಶೇಷ ವ್ಯಕ್ತಿಪ್ರಭಾವವನ್ನು ಸೂಚಿಸಬಲ್ಲದ್ದು. ಅವರ ಕಂಠ ಧ್ವನಿ ಸ್ನಿಗ್ಧ ಗಂಭೀರವಾದದ್ದು. ಯಾವಾಗಲೂ ತುಟಿಗಳ ಸುತ್ತಮುತ್ತ ಲಘುಹಾಸ್ಯದ ಕಳೆ ಅಡ್ಡಾಡುತ್ತಿತ್ತು. ಕಣ್ಣುಗಳು ತೇಜಸ್ವಿಯಾಗಿ ಮಾತಿನ ಸಂದರ್ಭದ ರಸಕ್ಕೆ ತಕ್ಕ ಹೊಳಪನ್ನು ಬೀರುತ್ತಿದ್ದವು. ಮಾತಾದರೋ ಧಾರಾಕಾರವಾಗಿ ಬರುತ್ತಿತ್ತು. ಬಾಯಿ ತುಂಬ ಹೊರಟು, ಕಿವಿ ತುಂಬ ಕೇಳಬಂದು, ಮನಸ್ಸು ತುಂಬ ಅರ್ಥಕೊಡುವ ಶಬ್ದಗಳನ್ನು ಆರಿಸಿ ಜೋಡಿಸುವುದರಲ್ಲಿ ವರದಾಚಾರ್ಯರಿಗೆ ಚಮತ್ಕಾರ ನೈಜವಾಗಿ ಬಂದಿತ್ತು. ಸಭಾವೇದಿಕೆಯಿಂದ ಗಂಭೀರ ವಿಷಯವನ್ನು ಕುರಿತು ಉಪನ್ಯಾಸ ಮಾಡುತ್ತಿದ್ದರೂ ಸರಿ, ವಿನೋದಗೋಷ್ಠಿಯಲ್ಲಿ ನಾಲ್ವರು ಮಿತ್ರರೊಡನೆ

ಆಪ್ತಸಂಭಾಷಣೆ ಮಾಡುತ್ತಿದ್ದರೂ ಸರಿ, ಎಲ್ಲ ಕಡೆಯೂ ಒಂದೇ ರೀತಿಯ ವಾಕ್ಯ ಸೌಷ್ಠವ, ಒಂದೇ ತೆರದ ಲಲಿತ ಹಾಸ್ಯ, ಒಂದೇ ಬಗೆಯ ವಿಚಾರ ಗಾಂಭೀರ್ಯ.

ಒಂದಾವರ್ತಿ ಪ್ರಖ್ಯಾತ ಮಹಾವಿದ್ವಾಂಸರೂ, ಲೇಖಕರೂ, ವಾಗ್ಮಿಗಳೂ ಆದ ರಮೇಶ ಚಂದ್ರ ದತ್ತರವರು ಬೆಂಗಳೂರಿಗೆ ಬಂದಿದ್ದರು. ಅವರ ಉಪನ್ಯಾಸವನ್ನು ಕೇಳಬೇಕೆಂದು ಬಹುಮಂದಿ ಕುತೂಹಲಪಟ್ಟು ಒಂದು ನಿಯೋಗ (Deputation) ವನ್ನು ಅವರಲ್ಲಿಗೆ ಕಳಿಸಿದ್ದರು. ಅವರಿಗೆ ದತ್ತರವರು ತಮ್ಮ ಅನಾರೋಗ್ಯವನ್ನು ತಿಳಿಸಿ ಕ್ಷಮೆಬೇಡಿದರು. ನಿಯೋಗದವರು ಅಲ್ಲಿಗೆ ಬಿಡದೆ, ತಾವು ಬೇರೆ ಉಪನ್ಯಾಸಕರನ್ನು ಗೊತ್ತು ಮಾಡುವುದಾಗಿಯೂ ದತ್ತರು ಆಗ ಅಧ್ಯಕ್ಷರಾಗಬೇಕೆಂದೂ ಬೇಡಿದರು. ಅದಕ್ಕೆ ದತ್ತರು ಒಪ್ಪಿದರು. ಅದರಂತೆ ಸಭೆ ಸೇರಿತು. ಆ ದಿನ ಉಪನ್ಯಾಸ ಕೊಡಲಿದ್ದವರು ಒಬ್ಬ ಪ್ರಸಿದ್ಧರಾದ ಚರಿತ್ರೆಯ ವಿದ್ವಾಂಸರು. ಅವರೇನೋ ತಮ್ಮ ಉಪನ್ಯಾಸ ವಿಷಯದಲ್ಲಿ ತುಂಬ ಪರಿಶ್ರಮಮಾಡಿ ಉತ್ಸಾಹದಿಂದ ತುಂಬಿದ್ದವರು. ಆದರೆ ಆ ಅತ್ಯುತ್ಸಾಹದ ಫಲಿತಾಂಶ ಸಭೆಗೆ ಬೇಸರ. ಅವರು ಕದಂಬರ, ಪಲ್ಲವರ, ಚೋಳರ ರಾಜರುಗಳು, ಅವರ ತಿಥಿ ವಾರಗಳು, ಅವರ ಹೆಂಡಿರುಗಳು, ಅವರ ರಾಜಧಾನಿಗಳು-ಇವುಗಳನ್ನು ಕುರಿತ ಶಾಸನಗಳ ತೇದಿಗಳು-ಇತ್ಯಾದಿಗಳನ್ನು ಚರ್ಚಿಸುತ್ತ ಒಂದೂವರೆ ಘಂಟೆ ಕಳೆದರು. ಅನಂತರ ದತ್ತರು ಎದ್ದು ಐದು ನಿಮಿಷದೊಳಗಾಗಿ ಉಪನ್ಯಾಸಕರಿಗೆ ಉಪಚಾರ ಹೇಳಿ ಮುಗಿಸಿದರು. ಸಭಿಕರಿಗೆ ತೃಪ್ತಿಯಾಗಲಿಲ್ಲ. ಮಾರನೆಯ ದಿನ ದತ್ತರು ಮೈಸೂರಿಗೆ ಪ್ರಯಾಣ ಬೆಳಸಿದರು. ನಾಲ್ಕೈದು ದಿನಗಳಾದ ಬಳಿಕ ಅವರು ಬೆಂಗಳೂರಿಗೆ ಹಿಂದಿರುಗಿದಾಗ ನಮ್ಮ ನಿಯೋಗದವರು ಪುನಃ ಅವರಲ್ಲಿ ಹೋಗಿ, ಜನಕ್ಕೆ ಆಗಿದ್ದ ಆಶಾಭಂಗವನ್ನು ಅರಿಕೆಮಾಡಿ, ಮತ್ತೊಮ್ಮೆ ದತ್ತರವರು ಸಭಾಧ್ಯಕ್ಷರಾಗಬೇಕೆಂದೂ ಈ ಸಾರಿ ಒಬ್ಬ ತರುಣ ವಕೀಲರು ಉಪನ್ಯಾಸ ಮಾಡತಕ್ಕವರೆಂದೂ, ಅವರು ಅರ್ಧ ಘಂಟೆಯೊಳಗಾಗಿ ಮುಗಿಸುವರೆಂದೂ ಒಡಂಬಡಿಸುವ ಮಾತನ್ನಾಡಿದರು. ದತ್ತರು ಒಪ್ಪಿದರು. ಮಾರನೆಯ ದಿನ ಸಂಜೆ ಸಭೆ ಸೇರಿತು. ಎಂ.ಜಿ. ವರದಾಚಾರ್ಯರು ಉಪನ್ಯಾಸಕರು. ವಿಷಯ 'ನಮ್ಮ ಆರ್ಥಿಕ ಪ್ರಶ್ನೆ.' ಉಪನ್ಯಾಸಕ್ಕೆ ಹಿಡಿದ ಕಾಲ ೧೫ ನಿಮಿಷಗಳೊಳಗಾಗಿ. ಅದರ ಸಾರಾಂಶ ಹೀಗೆ- "ನಮ್ಮ ಅತಿಥಿಗಳಾದ ಶ್ರೀಮಾನ್ ದತ್ತರವರು ಅನಾರೋಗ್ಯದಿಂದ ಬೆಂಗಳೂರಿಗೆ ಬಂದರು. ಆರೋಗ್ಯವನ್ನು ಕೊಡುವ ಶಕ್ತಿ ಬೆಂಗಳೂರಿನ ವಾಯುಗುಣದಲ್ಲಿರುತ್ತದೆಂಬುದು ಅವರಿಗೆ ತಿಳಿದಿರಬಹುದು. ಆದರೆ ಬೆಂಗಳೂರಿನ ಜನರು ಜ್ಞಾನದ ಹಸಿವಿನಿಂದ ಸೊರಗಿದ್ದಾರೆ, ಈ ಹಸಿವನ್ನು ಹೋಗಲಾಡಿಸುವ ಶಕ್ತಿ ದತ್ತರವರಲ್ಲಿದೆ. ಬೆಂಗಳೂರಿನಿಂದ ಆರೋಗ್ಯವನ್ನು ಪಡೆದು ಬೆಂಗಳೂರಿಗೆ ಜ್ಞಾನದಾನ ಮಾಡುವುದು ಒಂದು ಬಗೆಯ ವಿನಿಮಯ ವ್ಯಾಪಾರ (Exchange) ಅಲ್ಲವೆ? ನಮಗೆ ಜ್ಞಾನ ಬೇಕಾಗಿರುವುದು

ಮುಖ್ಯವಾಗಿ ದೇಶದ ಕೈಗಾರಿಕೆ ಕಾರ್ಖಾನೆ ವ್ಯಾಪಾರಗಳ ವಿಷಯದಲ್ಲಿ ಮತ್ತು ವಿದ್ಯಾವಂತ ಯುವಕರ ನಿರುದ್ಯೋಗದ ವಿಷಯದಲ್ಲಿ. ಈ ವಿಷಯಗಳನ್ನು ಕುರಿತು ದತ್ತರವರು ಪ್ರೌಢ ಪ್ರಬಂಧಗಳನ್ನು ಬರೆದಿದ್ದಾರೆ. ಆದದ್ದರಿಂದ ನಮ್ಮ ಜ್ಞಾನದಾಹವನ್ನು ತೀರಿಸುವುದು ಇವರಿಗೆ ಸುಲಭಸಾಧ್ಯವಾಗಿದೆ.” ಇಷ್ಟನ್ನು ಹೇಳುವಷ್ಟರಲ್ಲಿ ವರದಾಚಾರ್ಯರು ಸಭೆಯನ್ನು ನಾಲ್ಕೈದು ಸಲ ನಗಿಸಿದ್ದರು; ನಾಲ್ಕೈದು ಸಲ ಚಪ್ಪಾಳೆ ತಟ್ಟಿಸಿದ್ದರು. ದತ್ತರ ಮುಖ ಅರಳಿ ಅಗಲವಾಗಿತ್ತು. ಅಂಥಾದ್ದು ಆಚಾರ್ಯರ ಮಾತಿನ ಪೌಂಛಾವಣೆ. ಹತ್ತು ಹನ್ನೆರಡು ನಿಮಿಷದ ಒಳಗಾಗಿ ವರದಾಚಾರ್ಯರು ಭಾಷಣ ಮುಗಿಸಿ ತಮ್ಮ ಜಾಗಕ್ಕೆ ಬಂದು ಕುಳಿತು ಬಿಟ್ಟರು. ಆಮೇಲೆ ದತ್ತರು ವರದಾಚಾರ್ಯರನ್ನು ಮೆಚ್ಚಿಕೊಂಡ ರೀತಿಯೇ ಒಂದು ದೊಡ್ಡ ಸೊಗಸು. ದತ್ತರು ಸುಮಾರು ಒಂದು ಘಂಟೆ ಕಾಲ ಮಾತನಾಡಿ ಸಭಿಕರನ್ನು ಆನಂದಪಡಿಸಿದರು. ಸಭೆ ಮುಗಿಯುವಾಗ ಆ ಎರಡು ಉಪನ್ಯಾಸಗಳಲ್ಲಿ ಯಾವುದನ್ನು ಹೆಚ್ಚು ಕೊಂಡಾಡಬೇಕೆಂದು ಸಭಿಕರು ತಮ್ಮತಮ್ಮಲ್ಲಿ ಚರ್ಚೆ ಮಾಡಿಕೊಳ್ಳುತ್ತಿದ್ದರು.

ವರದಾಚಾರ್ಯರ ಉಪನ್ಯಾಸವೆಂದರೆ ಜನ ತಂಡೋಪತಂಡವಾಗಿ ಸೇರುತ್ತಿದ್ದರು. ಎಂಥ ನೀರಸ ಪ್ರಸಂಗದಲ್ಲಿಯೂ ಒಂದಿಷ್ಟು ಗಂಭೀರ ಹಾಸ್ಯವನ್ನು ತುಂಬುವ ಶಕ್ತಿ ವರದಾಚಾರ್ಯರ ವೈಶಿಷ್ಟ್ಯ. ಯಾವ ವಿಷಯವನ್ನು ಹೇಳಿದರೂ ಅವರು ಸ್ವಾರಸ್ಯವಾಗಿ ಹೇಳಬೇಕು. ಕಥೆ ಹೇಳಿದರೆ ಚಿತ್ರಗಳು ಕಣ್ಣುಮುಂದೆ ಎದ್ದು ನಡೆಯುತ್ತಿರಬೇಕು. ಅವರ ಧ್ವನಿಯಲ್ಲಿಯೇ ಒಂದು ವಿಶೇಷವಾದ ಆಕರ್ಷಣೆ ಇತ್ತು.

ಆ ಕಾಲದಲ್ಲಿ (೧೯೧೨-೧೬) ನಡೆಯುತ್ತಿದ್ದ ‘ಕರ್ಣಾಟಕ’ ವೆಂಬ ಇಂಗ್ಲೀಷ್ ಭಾಷೆಯ ವಾರಾರ್ಧ ಪತ್ರಿಕೆಗೆ ವರದಾಚಾರ್ಯರು ಆಗಾಗ ಲೇಖನಗಳನ್ನು ಬರೆಯುತ್ತಿದ್ದರು. ಅದರಲ್ಲಿ ಅಂದಿನ ಎಷ್ಟೋ ಮಂದಿ ಪ್ರಮುಖರ ವ್ಯಂಗ್ಯ ವಿಡಂಬನೆಗಳು ಬರುತ್ತಿದ್ದುವು. ಅದರಿಂದ ವಾಚಕರಲ್ಲಿ ಒಬ್ಬರಿಬ್ಬರು ರೇಗುವಂತೆಯೂ ನೂರಾರು ಮಂದಿ ನಗುವಂತೆಯೂ ಆಗುತ್ತಿತ್ತು. ಸರಕಾರದ ದೊಡ್ಡ ದೊಡ್ಡ ಅಧಿಕಾರಸ್ಥರಿಗೆ ಆ ಪತ್ರಿಕೆಯ ಮೇಲೆ ಒಂದು ಕಣ್ಣಿತ್ತು. ಒಂದಾನೊಂದು ಕ್ಲಬ್ಬಿನಲ್ಲಿ ಮಧುಪರ್ಕದ ಏರ್ಪಾಟಿದ್ದದ್ದನ್ನು ಕುರಿತು ಆ ಪತ್ರಿಕೆ ಆಗಾಗ ಟೀಕಿಸಿ ಹಾಸ್ಯಮಾಡುತ್ತಿತ್ತು. ಮಧುಸೇವಕರಿಗೆ ಇದು ಕಂಟಕಪ್ರಾಯವಾಗಿದ್ದದ್ದು ಸ್ವಾಭಾವಿಕ ತಾನೆ? ಆ ಕ್ಲಬ್ಬಿನಲ್ಲಿ ವರದಾಚಾರ್ಯರೂ ಸದಸ್ಯರಾಗಿದ್ದರು. ಒಂದು ಸಾರಿ ಆ ಕ್ಲಬ್ಬಿನ ವಾರ್ಷಿಕೋತ್ಸವವು ವಿಜೃಂಭಣೆಯಿಂದ ಸಾಗಿತು. ರಾತ್ರಿ ಭೋಜನ, ಅದರಲ್ಲಿ ಬಗೆ ಬಗೆಯ ತರಕಾರಿಗಳು, ಭಕ್ಷ್ಯಭೋಜ್ಯಗಳು, ರಂಗು ರಂಗಿನ ಪಾನಕಗಳು-ಇವೆಲ್ಲ ಬೇಕಾದವರಿಗೆ ಬೇಕಾದಂತೆ ಸಿದ್ಧವಾಗಿತ್ತು. ಭೋಜನಾನಂತರ ಉಪನ್ಯಾಸಗಳಿಗೆ ಆರಂಭವಾಯಿತು. ವರದಾಚಾರ್ಯರು

ಮೇಲೆ ಹೇಳಿದ ಪತ್ರಿಕೆಯ ಸ್ನೇಹಿತರೆಂಬುದನ್ನು ಬಲ್ಲವರೊಬ್ಬರು ಆಗ ವರದಾಚಾರ್ಯರ ಹೆಸರನ್ನು ಕೂಗಿ 'ಕರ್ಣಾಟಕ' ಕ್ಕೆ ಜವಾಬು ಕೊಡಬೇಕೆಂದು ಸೂಚಿಸಿದರು. ವರದಾಚಾರ್ಯರು ಸಂತೋಷದಿಂದ ಎದ್ದುನಿಂತು ಇಂಗ್ಲಿಷಿನಲ್ಲಿ ಮಾಡಿದ ಭಾಷಣ ಹೀಗೆ:

ಮೊದಲು ಕೆಲವು ಪೀಠಿಕಾವಚನಗಳನ್ನು ಹೇಳಿ, ಬಳಿಕ "As for the rising and potent organ of..." ಇಂತೆಂದು ಪ್ರಸ್ತಾವಿಸಿ, "ಆ ಪತ್ರಿಕೆಯ ಮುಖ್ಯೋದ್ದೇಶವು ಈಗ ಇಲ್ಲಿ ಎಷ್ಟು ಚೆನ್ನಾಗಿ ನೆರವೇರಿದೆ ಎಂಬುದು ಎಲ್ಲರಿಗೂ ಪ್ರತ್ಯಕ್ಷವಾಗಿದೆ. ಪೂರ್ವದೇಶ ಪಶ್ಚಿಮದೇಶಗಳ ಸಂಸ್ಕೃತಿಗಳನ್ನು ಸಮ್ಮೇಳನ ಮಾಡಿಸುವುದು ಆವಶ್ಯಕವೆಂದು ಆ ಪತ್ರಿಕೆ ಪದೇ ಪದೇ ಸಾರಿದೆ. ಈಗ ಇಲ್ಲಿ ನೋಡಿ. ನಮ್ಮ ಸದಸ್ಯರನೇಕರು ಆ ಉದ್ದೇಶವನ್ನು ಎಷ್ಟು ದೂರ ನೆರವೇರಿಸಿದ್ದಾರೆಂದರೆ, ಅವರ ಸ್ಥಿತಿಯೇ ಅದಕ್ಕೆ ನಿದರ್ಶನವಾಗಿದೆ. ಪೂರ್ವವಾವುದೋ ಪಶ್ಚಿಮವಾವುದೋ ಆ ಭೇದವೇ ತಿಳಿಯದವರಾಗಿದ್ದಾರೆ ಅವರು. ಅಷ್ಟೇ ಅಲ್ಲ, ಈ ಮೇಲ್ಮೇಲಿನ ಸಂಸ್ಕೃತಿ ಸಾಲದೆಂದು ಅನೇಕರು ಮೇಜು ಕುರ್ಚಿಗಳ ಕೆಳಗಡೆಗೂ ಹೋಗುತ್ತಿದ್ದಾರೆ. ಇನ್ನೂ ಒಂದು ವಿಶೇಷ, ಇಲ್ಲಿ ನಾವು ಅಳಿಸಿಹಾಕಿರುವುದು, ದಿಗ್ಭೇದಗಳನ್ನು ಮಾತ್ರವೇ ಅಲ್ಲ. ಸಜೀವಕ್ಕೂ ನಿರ್ಜೀವಕ್ಕೂ ಅಭೇದವನ್ನು ಕಲ್ಪಿಸಿದ್ದೇವೆ. ಇಂಥಾದ್ದನ್ನು ನೋಡಿದರೆ ಯಾವ ಸಂಸ್ಕೃತಿಪ್ರೇಮಿ ತಾನೆ ನಮ್ಮ ಸಂಸ್ಥೆಯ ಮಹಿಮೆಯನ್ನು ಮೆಚ್ಚಿಕೊಳ್ಳಲಾರ?"

ಇದೇ ಶೈಲಿಯಲ್ಲಿ ಇನ್ನೈದು ನಿಮಿಷ ಮಾತನಾಡಿದರು. ಆ ಸಭಿಕರಲ್ಲಿ ನಕ್ಕು ನಕ್ಕು ಹೊಟ್ಟೆ ಹಿಸುಕಿಕೊಳ್ಳದವರು ಒಬ್ಬರೂ ಇರಲಿಲ್ಲ. ಆಮೇಲೆ ಒಂದು ತಿಂಗಳು ಆ ಗೋಷ್ಠಿಗಳಲ್ಲಿ ಎಲ್ಲಿ ಹೋದರೂ ಅದೇ ಮಾತಾಗಿತ್ತು.

ಒಂದು ಸಲ ಅವರ ಕಕ್ಷಿಗಾರರು ಶ್ರೀ ಹುಚ್ಚುವೀರೇಗೌಡರೆಂಬವರು ಅವರಲ್ಲಿಗೆ ಬಂದಿದ್ದರು. ಯಾವುದೋ ಮೊಕದ್ದಮೆಯಲ್ಲಿ ವಿರೋಧ ಪಕ್ಷದವರು ಏನೇನೋ ಕೃತ್ರಿಮ ನಡಸಿ ಕಾಲವಿಳಂಬಮಾಡುತ್ತಿದ್ದರೆಂದು ಗೌಡರಿಗೆ ತುಂಬ ಕೋಪ ಬಂದಿತ್ತು. ವರದಾಚಾರ್ಯರು ಮಹಡಿಯಿಂದಿಳಿದು ಬಂದು ಗೌಡರನ್ನು ಕಂಡಕೂಡಲೆ ಗೌಡರು ನಮಸ್ಕಾರಮಾಡಿ, "ಸ್ವಾಮಿ, ಅವನು ಬಲೆ ಕೆಟ್ಟವನು. ಸುಮ್ಮಗೆ ದಿನ ತಳ್ಳತವನೆ. ಅವನಿಗೇನಾದರೂ ಮಾಡಬೇಕಲ್ಲ! ತಮ್ಮ ಕೈಲಾಗದಿದ್ರೆ ಏಳ್ರಿ, ನಾನೇ ಮಾಡಿಬಿಡ್ತೇನಿ ತಕ್ಕದ್ದ. ನಾನೂ ಬಲೂ ಕೆಟ್ಟವನು" ಎಂದು ಗರ್ಜಿಸಿದರು. ವರದಾಚಾರ್ಯರು ನಗುನಗುತ್ತ "ಗೌಡರೆ, ಆ ಮಾತು ಹೇಳಬೇಕೆ ? ನೀವು ಮೊದಲೇ ಗೌಡರು. ಅದರ ಮೇಲೆ ವೀರೇಗೌಡರು. ಅದೂ ಸಾಲದು ಅಂತ ಹುಚ್ಚು ವೀರೇಗೌಡರು! ನಿಮ್ಮ ಮುಖದ ಮೇಲಿನ ಗಲ್ಲುಮೀಶೆ ಕುಣಿಯೋದು ನೋಡಿದರೆ ಹೆಸರು ಕೂಡ

ಕೇಳಬೇಕಾಗಿಲ್ಲ" ಎಂದರು. ಆಗ ಗೌಡರು "ಹೋ" ಎಂದು ನಕ್ಕದ್ದನ್ನು ರೇಖಾಚಿತ್ರದಿಂದ ತೋರಿಸುವುದು ಸಾಧ್ಯವಿರಬಹುದು, ಮಾತಿಗೆ ಅದು ಸಾಧ್ಯವಾಗದು.

ವರದಾಚಾರ್ಯರ ಹಾಸ್ಯದಿಂದ ತಪ್ಪಿಸಿಕೊಂಡವರು ಅವರ ಸ್ನೇಹಿತರಲ್ಲಿ ಒಬ್ಬರೂ ಇರಲಿಲ್ಲ. ನಾವು ಈಗಲೂ ಆ ಲೀಲೆಯನ್ನು ಜ್ಞಾಪಕಕ್ಕೆ ತಂದುಕೊಳ್ಳುತ್ತೇವೆ. ಒಬ್ಬೊಬ್ಬರನ್ನು ಒಂದೊಂದು ಬಗೆಯಾಗಿ ಲೇವಡಿ ಎಬ್ಬಿಸುತ್ತಿದ್ದರು. ಅದಕ್ಕೆ ಬಲಿಯಾದವರು ವರದಾಚಾರ್ಯರನ್ನು ಮತ್ತಷ್ಟು ಪ್ರೀತಿಸುತ್ತಿದ್ದರು. ಮತ್ತು ವರದಾಚಾರ್ಯರೂ ಇತರರ ಹಾಸ್ಯಕ್ಕೆ ನಗುಮುಖದಿಂದ ಬಲಿಬೀಳುತ್ತಿದ್ದರು.

ಜೀವನವೃತ್ತಿಯೂ ಐಶ್ವರ್ಯ ಯಶಸ್ಸುಗಳ ಮಾರ್ಗವೂ ವಕೀಲಿಗಿರಿಯಾಗಿದ್ದರೂ ವರದಾಚಾರ್ಯರ ಮನಸ್ಸು ಇದ್ದದ್ದು ಸಾಹಿತ್ಯದಲ್ಲಿ. ನಾವಿಬ್ಬರೂ ಚಾಮರಾಜಪೇಟೆಯ ೪ನೆಯ ರಸ್ತೆಯಲ್ಲಿ ಎದುರು ಬದುರು ಮನೆಗಳಲ್ಲಿದ್ದಾಗ ಎಷ್ಟೋ ಸಲ ಅವರೂ ನಾನೂ ಇನ್ನೂ ಒಬ್ಬರಿಬ್ಬರೂ ರಾತ್ರಿ ೧೧-೧೨ ಘಂಟೆಯವರೆಗೂ ಕವಿಕಾವ್ಯಪ್ರಶಂಸೆಯಲ್ಲಿ ಕಾಲ ಕಳೆಯುತ್ತಿದ್ದೆವು. ಅಷ್ಟು ಹೊತ್ತಿನಲ್ಲಿ ಅವರ- "ಇನ್ನು ನನಗೆ ಹೊತ್ತಾಯಿತು. ನಾಳೆ ಕೋರ್ಟಿನಲ್ಲಿ ಹೆಚ್ಚುಕೆಲಸವಿದೆ. ಒಂದು ಭಾರಿ ಮೊಕದ್ದಮೆಯಲ್ಲಿ ನಾನು ಈಗ ಸ್ಟೇಟ್ಮೆಂಟ್ (ಹೇಳಿಕೆ) ತಯಾರು ಮಾಡಬೇಕಾಗಿದೆ" ಎಂದು ಹೇಳಿದ್ದೂ; ಆಗ ನಾವು ಅಲ್ಲಿಂದ ತೆರಳಿದ್ದೂ; ಮಾರನೆ ದಿನ ಬೆಳಿಗ್ಗೆ ನಾನು ಅವರ ಮನೆಗೆ ಹೋದಾಗ ಅವರ ಮೇಜಿನಮೇಲೆ ಯಾವುದೋ ಇಂಗ್ಲೀಷ್ ಕಾವ್ಯ-ಟೆನಿಸನ್ನನ 'ಇನ್ ಮೆಮೋರಿಯಂ', ಬೈರನ್ನನ 'ಡಾನ್ ಜುವಾನ್', ಬ್ರೌನಿಂಗಿನ 'ಪಿಪ್ಪ ಪಾಸೆಸ್', ಷೇಕ್ಸ್ಪಿಯರಿನ 'ಸಾನೆಟ್ಟು' ಇಂಥ ಪುಸ್ತಕ ಯಾವುದೋ ಒಂದು-ತೆರೆದಿದ್ದದ್ದೂ; ನಾನು, "ಇದೇನು? ರಾತ್ರಿ ಸ್ಟೇಟ್ಮೆಂಟ್ ಬರೆಯುತ್ತಿದ್ದಿರಾ, ಓದುತ್ತಿದ್ದಿರಾ?" ಎಂದು ಕೇಳಿದಾಗ ಅವರು ನಕ್ಕು "ಸ್ಟೇಟ್ಮೆಂಟ್ ಹಾಳಾಗಿಹೋಯಿತು! ಇವರ ಮುಂದೆ ಯಾವ ಸ್ಟೇಟ್ಮೆಂಟ್ ಏನು?" ಎಂದು ಹೇಳಿ, ಕಾವ್ಯ ವ್ಯಾಸಂಗಕ್ಕೆ ತಮಗೆ ಬಿಡುವು ಸಾಲದೆಂದು ನಿಟ್ಟುಸಿರುಬಿಟ್ಟದ್ದೂ ಹತ್ತಾರು ಸಲ ನನಗೆ ಆಗಿರುವ ಅನುಭವ.

ವರದಾಚಾರ್ಯರು ಸೂಕ್ಷ್ಮವೇದಿಯಾದ ಕಾವ್ಯವಿಮರ್ಶಕರು. ಅವರು ಸಾಹಿತ್ಯದಲ್ಲಿ ಎಂ.ಎ., ಪರೀಕ್ಷೆಗೆ ಕೂಡಬೇಕೆಂದು ಸಂಕಲ್ಪಮಾಡಿ ಅದಕ್ಕಾಗಿ ಬ್ರೌನಿಂಗ್ ಕವಿಯ (ಬಹುಶಃ) Paracelsus ಮೇಲೆ (ಅಥವಾ ಅದು Rabbi Ben Ezra ವೋ ಈಗ ಮರೆತುಹೋಗಿದೆ) ವಿಮರ್ಶನ ಪ್ರಬಂಧ ಬರೆದಿದ್ದರು. ಅದು ಎಲ್ಲಿಯಾದರೂ ದೊರೆಯುವುದಾಗಿದ್ದಲ್ಲಿ ಈ ಹೊತ್ತಿಗೂ ಪ್ರಕಟನಾರ್ಹವಾದದ್ದೆಂದು ನನ್ನ ನಿಶ್ಚಿತವಾದ ಅಭಿಪ್ರಾಯ.

ವರದಾಚಾರ್ಯರ ಸಾಹಿತ್ಯಪ್ರೀತಿಗಿಂತ ಕಡಮೆಯದೇನೂ ಅಲ್ಲದ್ದು ಅವರ ಭೂತದಯೆ ಜೀವಕಾರುಣ್ಯಗಳು. ಮಾಗಡಿ ರಸ್ತೆಯಲ್ಲಿರುವ ಕುಷ್ಠದ ಮತ್ತು ಇತರ ಅನಿವಾರಣೀಯ ರೋಗಗಳ ಆಸ್ಪತ್ರೆಯಲ್ಲಿರುವ ರೋಗಿಗಳಿಗೂ ಇತರ ಬಡಬಗ್ಗರಿಗೂ ಪ್ರತಿ ದೀಪಾವಳಿಗೂ ಒಂದು ಸಣ್ಣ ಔತಣ ನಡಸಬೇಕೆಂದು ಆಲೋಚನೆ ಮೊದಲು ಬಂದದ್ದು ಅವರಿಗೆ. ಅವರು ಒಂದೆರಡು ವರ್ಷ ಅದನ್ನು ಗುಪ್ತವಾಗಿ ಸ್ವಂತ ಖರ್ಚಿನಿಂದ ನಡಸಿದ್ದರು. ಅನಂತರ ಬೆಂಗಳೂರಿನ ಹೆಲ್ತ್ ಆಫೀಸರಾಗಿದ್ದ ಡಾ || ಆರ್. ಸುಬ್ಬರಾಯರು ಆ ಏರ್ಪಾಟನ್ನು ಬೆಳಸಿದರು. ಎರಡು ಮೂರು ವರ್ಷಗಳಾದ ಬಳಿಕ ವರದಾಚಾರ್ಯರೂ ಅವರ ಸ್ನೇಹಿತರು ನಾಲ್ವರೈವರೂ ಒಟ್ಟುಗೂಡಿ ಆ ಸೇವಾ ಕಾರ್ಯವನ್ನು ತಮ್ಮೊಟ್ಟಿನ ಮೂಲಕ ಕೈಕೊಂಡರು. ಯುಗಾದಿಯ ದಿವಸವೂ ದೀವಳಿಗೆಯ ದಿವಸವೂ ಅಲ್ಲಿಯ ರೋಗಿಗಳು ಮೊದಲಾದವರಿಗೆ ಸಿಹಿತಿಂಡಿ ಹಣ್ಣುಗಳನ್ನೂ ಊದುಕಡ್ಡಿ ಮೊದಲಾದ ಪರಿಮಳದ್ರವ್ಯಗಳನ್ನೂ ಹಂಚುವುದು, ಗಂಡಸರಿಗೆ ಪಂಚೆ ಬನೀನುಗಳನ್ನೂ, ಹೆಂಗಸರಿಗೆ ಸೀರೆ ಕುಪ್ಪಸಗಳನ್ನೂ ಹಂಚುವುದು, ಕೊಂಚ ಹೊತ್ತು ಸಂಗೀತ ಭಜನೆ ನಡಸುವುದು-ಇವು ಆ ಏರ್ಪಾಟಿನ ಅಂಶಗಳು. ಇದಕ್ಕೆ ಬೇಕಾದ ಧನಸಹಾಯವನ್ನು ಒದಗಿಸುತ್ತಿದ್ದವರಲ್ಲಿ ವರದಾಚಾರ್ಯರು ಮುಖ್ಯರು. ಅವರಂತೆಯೇ ಕೆಲಮಂದಿ ವರ್ತಕರೂ-ಮಂಡಿ ಹಿರಣ್ಣಯ್ಯರವರು, ಸಜ್ಜನರಾಯರು, ಆದೆಪ್ಪನವರು, ವೆಂಕಟಮುನಯ್ಯ ಶೆಟ್ಟರು, ಸುಬ್ಬಯ್ಯ ಶೆಟ್ಟರು, ಲಕ್ಷ್ಮಯ್ಯ ಶೆಟ್ಟರು ಮುಂತಾದ ಪೇಟೆಯ ಪ್ರಮುಖರು-ಕೊಡುತ್ತಿದ್ದ ಸಹಾಯವನ್ನು ಸ್ಮರಿಸುವುದು ಇಲ್ಲಿ ಕರ್ತವ್ಯವಾಗಿದೆ. ವರದಾಚಾರ್ಯರೂ ಕೆಲಮಂದಿ ಮಿತ್ರರೂ ಸೇರಿ ಒಂದೆರಡು ಸಂಘಗಳನ್ನೂ, ವಾಚನ ಮಂದಿರಗಳನ್ನೂ, ಪಾಠ ಶಾಲೆಗಳನ್ನೂ, ಒಂದು ವ್ಯಾಸಂಗ ಗೋಷ್ಠಿಯನ್ನೂ ಸಹ ನಾಲ್ಕಾರು ವರ್ಷ ನಡಸಿದರು. ಇಂಥ ಎಲ್ಲ ಸಮಾರಂಭಗಳಿಗೂ ಅವರು ಕೊಟ್ಟ ಬೆಂಬಲ ನಮಗೆ ದೊಡ್ಡದಾಗಿತ್ತು. ಯಾವ ಧರ್ಮಕಾರ್ಯವೇ ಆಗಲಿ, ಯಾವ ಸಮಾಜಸೇವೆಯೇ ಆಗಲಿ, ಯಾವ ಸಾರ್ವಜನಿಕ ಸಂಸ್ಥೆಯೇ ಆಗಲಿ, ವರದಾಚಾರ್ಯರ ಸಹಾಯಕ್ಕೆಂದು ಹೋಗಿ ಬರಿಗೈಯಾಗಿ ಹಿಂದಿರುಗಿದ್ದಿಲ್ಲ.

ವರದಾಚಾರ್ಯರಿಗೆ ಕ್ರಿಕೆಟ್, ಫುಟ್ಬಾಲ್ ಮೊದಲಾದ ಆಟಗಳಲ್ಲಿ ತುಂಬ ಆಸಕ್ತಿ. ಹಾಗೆಯೇ ಇಸ್ಪೀಟ್, ಚದುರಂಗಗಳಲ್ಲಿಯೂ. ಆದರೆ ಅವರು ಯಾವಾಗಲೂ ಗೆಲ್ಲುತ್ತಿದ್ದವರೇನೂ ಅಲ್ಲ. ಅವರಿಗೆ ಆಟ ಮುಖ್ಯವೇ ಹೊರತು ಗೆಲವು ಸೋಲುಗಳಲ್ಲ.

ನಾವಿಬ್ಬರೂ ಕೆಲವು ವರ್ಷ ಚಾಮರಾಜಪೇಟೆಯ ೨-೪ನೆಯ ಬೀದಿಗಳಲ್ಲಿ ವಾಸವಾಗಿದ್ದೆವು. ಒಂದು ಸಾರಿ ದಸರಾ ಕಾಲದಲ್ಲಿ ನಾವಿಬ್ಬರೂ ಒಂದೇ ರಾತ್ರಿ ಮೈಸೂರಿಗೆ ಪ್ರಯಾಣ ಮಾಡಬೇಕಾಗಿ ಬಂತು. ಅವರು ನನಗೆ ಹೇಳಿದರು- "ಗಾಡಿ ಕಳುಹಿಸುತ್ತೇನೆ. ನಿನ್ನ ಸಾಮಾನುಗಳನ್ನು ಹಾಕಿಕೊಂಡು ನೀನು ಇಲ್ಲಿಗೆ ಬಾ. ನನ್ನ ಸಾಮಾನುಗಳನ್ನು ಇಲ್ಲಿ ಭರ್ತಿಮಾಡಿಕೊಂಡು ರೈಲಿಗೆ ಹೋಗೋಣ" ಎಂದು. ಅದರಂತೆ ಮಾಡಿ ನಾನು ಅವರ ಮನೆಗೆ ಬಂದಾಗ ಅವರು ತಮ್ಮ ಸಾಮಾನುಗಳನ್ನು ಪ್ಯಾಕ್ ಮಾಡುತ್ತಿದ್ದರು. ರುಮಾಲುಗಳನ್ನು ಸಂದೂಕಿನಿಂದ ತೆಗೆದರು. ಒಂದಾಯಿತು, ಎರಡಾಯಿತು ಮೂರನೆಯದು ಬುಟ್ಟಾದಾರಿ-ಅದಾಯಿತು, ನಾಲ್ಕನೆಯದು ಮಾವಿನಕಾಯಿ ಚಿತ್ರದ ಜರಿಯುಳ್ಳ ಪೇಟ, ಅದೂ ಆಯಿತು. ಹೀಗೆ ನಾಲ್ಕೈದು ಪೇಟಾಗಳು, ಆಮೇಲೆ ಷರ್ಟುಗಳು ಐದು ಜೊತೆ, ವೆಸ್ಟ್ ಕೋಟುಗಳು ಐದಾರು, ಸೂಟುಗಳು ಐದಾರು, ವಾಕಿಂಗ್ ಸ್ಟಿಕ್ಕುಗಳು-ಕೋಲಿನ ಹಿಡಿಕೆಯನ್ನು ನೋಡಿ, "ಇದು ದಂತದ್ದು, ಇದು ಇರಲಿ, ಇದು ಶ್ರೀಗಂಧದ್ದು, ಇದೂ ಇರಲಿ, ಇದು ಇಂಗ್ಲೀಷ್ ಸ್ಟಿಕ್, ಇದೂ ಚೆನ್ನಾಗಿರುತ್ತೆ" ಹೀಗೆ ಹೇಳುತ್ತ ೪-೫ ಕೋಲುಗಳು, ಕ್ರಿಕೆಟ್ ಬ್ಯಾಟುಗಳು, ಕಾಲು ಕವಚಗಳು, ಟೆನ್ನಿಸ್ ಬ್ಯಾಟುಗಳು-ಇವನ್ನೆಲ್ಲ ಭರ್ತಿ ಮಾಡಿದರು. ಐದು ಟ್ರಂಕುಗಳು, ಒಂದು ಹೋಲ್ಡಾಲ್, ಒಂದು ಸೂಟ್ ಕೇಸ್-ಇಷ್ಟು ಸಾಮಾನಾಯಿತು. "ನಿನ್ನ ಸಾಮಾನೆಷ್ಟಿದೆ?" ಎಂದು ನನ್ನನ್ನು ಕೇಳಿದರು. ನಾನು ಅವರನ್ನು ಹೊರಕ್ಕೆ ಕರೆದುಕೊಂಡು ಬಂದು ತೋರಿಸಿದೆ-ಅಲ್ಲಿದ್ದದ್ದು ಒಂದು ಹಾಸಿಗೆಯ ಸುರುಳಿ. ಆಗ ಅವರು. "ಏನಯ್ಯ ಇದರಲ್ಲಿಯೂ ಅದ್ವೈತವೆ? ಪ್ರಯಾಣಕ್ಕೂ ಏಕಮೇವಾದ್ವಿತೀಯಂ ಮಾಡಿಕೊಂಡಿದ್ದೀಯಲ್ಲ!" ಎಂದರು. ನಾನು "ಅಲ್ಲಿ ನೀವಿರುವುದು ಎರಡು ಮೂರು ದಿವಸ. ನೀವು ಕೊಂಡಿರುವುದು ಒಂದು ತಿಂಗಳಿನ ಸಾಮಾನನ್ನು" ಎಂದೆ. ಅವರು, "ಏನಯ್ಯ, ನನ್ನ ವಿವೇಕವಿರುವುದು ವಿರಕ್ತಿಯಲ್ಲಿ. ಆದರೆ ನನ್ನ ಸ್ವಭಾವ ಇರುವುದು ಸಂಸಾರದಲ್ಲಿ" ಎಂದು ವಿವರಣೆ ಹೇಳಿದರು.

ಅದು ನಿಜವಾದ ಮಾತು. ವರದಾಚಾರ್ಯರಿಗೆ ಜೀವನದಲ್ಲಿ ಒಂದು ಉತ್ಸಾಹವನ್ನೂ ಧೈರ್ಯವನ್ನೂ ಉಂಟುಮಾಡಿದ್ದದ್ದು ಅವರ ರಾಮಕೃಷ್ಣ ಭಕ್ತಿ. ಚಾಮರಾಜಪೇಟೆಯಲ್ಲಿ ಪ್ಲೇಗ್ ಸೋಂಕು ಹರಡಿದ್ದ ಕಾರಣದಿಂದಲೋ ಬೇರೆ ಕಾರಣದಿಂದಲೋ ಅವರು ವಾಸದ ಮನೆ ಬಿಡಬೇಕಾಗಿ ಬಂದು ಹಂಗಾಮಿಯಾಗಿ ತಾವೊಬ್ಬರೇ ಸ್ನೇಹಿತರ ಮನೆಯಲ್ಲೋ ಬಾಡಿಗೆ ಕೋಣೆಯಲ್ಲೊ ಇರಬೇಕಾದ ಸಂದರ್ಭದಲ್ಲಿ ಸಹ ರಾಮಕೃಷ್ಣ ವಿವೇಕಾನಂದರುಗಳ ಪಟಗಳನ್ನು ಬಳಿ ಇರಿಸಿಕೊಳ್ಳದೆ, ಅವಕ್ಕೆ ಬೆಳಿಗ್ಗೆ ಸಂಜೆ ನಮಸ್ಕಾರ ಮಾಡದೆ ಇದ್ದವರಲ್ಲ. ರಾಮಕೃಷ್ಣ ವಿವೇಕಾನಂದರುಗಳ ಜಯಂತಿಗಳಲ್ಲೂ ಪುಣ್ಯದಿನಗಳಲ್ಲೂ ಅವರು ಶ್ರೀ ರಾಮಕೃಷ್ಣಾಶ್ರಮಕ್ಕೆ ಹೋಗಿ ಸೇವೆ ಸಲ್ಲಿಸಿ ಪ್ರಸಾದ ಸ್ವಿಕರಿಸಿ ಬರುತ್ತಿದ್ದರು.

ರಾಮಕೃಷ್ಣ ಪರಮಹಂಸರನ್ನು ಕುರಿತು ಯಾವಾಗ ಬೇಕೆಂದರೂ ಉಪನ್ಯಾಸ ಮಾಡಲು ಸಿದ್ಧರಾಗುತ್ತಿದ್ದರು. ಆ ಉಪನ್ಯಾಸದಲ್ಲಿ ಅವರು ಪರಮಹಂಸರ ಒಂದಾನೊಂದು ಉಕ್ತಿಯನ್ನು ಪದೇ ಪದೇ ಉದಾಹರಿಸುತ್ತಿದ್ದರು. ಆ ಉಕ್ತಿ ಕಾಮಿನೀ ಕಾಂಚನ ವರ್ಜನೆಯನ್ನು ಕುರಿತದ್ದು. ಅದರ ವಿಷಯದಲ್ಲಿ ವರದಾಚಾರ್ಯರಿಗೂ ನನಗೂ ನಾಲ್ಕಾರು ಸಲ ಸ್ನೇಹರೀತಿಯಲ್ಲಿ ತಕರಾರು ನಡೆದಿತ್ತು. "ಅಂಥ ಉಪದೇಶವನ್ನು ಕೊಡಬೇಕಾದವರು ನಿಮ್ಮಂಥ ತರುಣ ವಕೀಲರಲ್ಲ" ಎಂಬುದು ನನ್ನ ವಾದ. ಅದಕ್ಕೆ ಅವರ ಪ್ರತ್ಯುತ್ತರ- "ನಾನು ಒಳ್ಳೆಯದೆಂದು ತಿಳಿದುಕೊಂಡಿರುವುದನ್ನು ಬಾಯಿಂದಲಾದರೂ ಹೇಳಬೇಡವೆ? ಹತ್ತಾರು ಸಲ ಹೇಳುವುದರಿಂದಲಾದರೂ ಅದೇ ಅಭ್ಯಾಸಕ್ಕೆ ಬರಲಾರದೆ?" ನನ್ನ ಅಭಿಪ್ರಾಯ ನನ್ನದಾಗಿಯೇ ಉಳಿಯಿತು.

ವರದಾಚಾರ್ಯರು ವಿಸ್ತಾರವಾದ ಗ್ರಂಥಭಂಡಾರವನ್ನು ಸೇರಿಸಿದ್ದರು. ಕವಿತೆ, ನಾಟಕ, ಕಥೆ, ಚರಿತ್ರೆ, ವಿಶ್ವಕೋಶ, ವೇದಾಂತ-ಈ ಎಲ್ಲ ವಿಷಯಗಳಲ್ಲೂ ಹೆಸರುವಾಸಿಯಾದ ಪುಸ್ತಕಗಳು ಅಲ್ಲಿದ್ದವು. ಚೆನ್ನಾಗಿ ಅಚ್ಚಾಗಿ, ಕಣ್ಣಿಗೆ ಸೊಗಸಾಗಿರುವ ಪುಸ್ತಕವನ್ನು ಕಂಡರೆ ಅವರಿಗೆ ಬಲು ಆಸೆ. ತಮ್ಮ ಬಳಿ ಇದ್ದ ಪುಸ್ತಕವೇ ಬೇರೆ ಮುದ್ರಣದಲ್ಲಿ ಒಂದು ಹೊಸ ಅಲಂಕಾರವನ್ನು ತಾಳಿ ಸುಂದರವಾಗಿ ಬಂದರೆ ಎಷ್ಟು ಬೆಲೆಯಾದರೂ ಕೊಟ್ಟು ಅದನ್ನು ಕೊಂಡುಕೊಳ್ಳುತ್ತಿದ್ದರು.

ಕಲಾಕೃತಿಗಳ ವಿಷಯದಲ್ಲಿಯೂ ಹಾಗೆಯೇ. ಒಳ್ಳೆಯ ಚಿತ್ರಪಟವೆಂದರೆ ಅವರಿಗೆ ಅದೊಂದು ರತ್ನ. ಹೇಗಾದರೂ ಅದನ್ನು ಸಂಪಾದಿಸಿಕೊಳ್ಳಲು ಯತ್ನಿಸುತ್ತಿದ್ದರು. ಥೊರ್ ವಾಲ್ಡ್ ಸನ್ (Thorwaldsen) ಎಂಬ ಪ್ರಸಿದ್ಧ ಡೇನ್ ವಿಗ್ರಹಶಿಲ್ಪಿ ಮಾಡಿದ್ದ ಯೇಸುಕ್ರಿಸ್ತ ವಿಗ್ರಹದ ಪ್ರತಿಕೃತಿಯೊಂದನ್ನು ವರದಾಚಾರ್ಯರು ಕೊಂಡುಕೊಂಡದ್ದೂ ಅದರ ವಿಶೇಷ ಗುಣಾಂಶವನ್ನು ಉತ್ಸಾಹದಿಂದ ವಿವರಿಸಿ ತೋರಿಸಿದ್ದೂ ನನಗೆ ಚೆನ್ನಾಗಿ ಜ್ಞಾಪಕವಿದೆ. ಅವರ ನಡುಮನೆ ಕೋಣೆಗಳ ತುಂಬ ಅಲ್ಲಲ್ಲಿ ದಂತದ ವಿಗ್ರಹಗಳೂ ಶ್ರೀಗಂಧದ ಪ್ರತಿಮೆಗಳೂ ಬೆಳ್ಳಿಯ ಕೆತ್ತನೆ ಕೆಲಸದ ವಸ್ತುಗಳೂ ಗಾಜಿನ ಬೀರುಗಳಲ್ಲಿ ಸೊಗಯಿಸುತ್ತಿದ್ದವು. ಇಂಥ ಕಲಾವಸ್ತುಗಳೇ ಆಗಿನ ಬೆಲೆಯಂತೆ ೭-೮ ಸಾವಿರ ರೂಪಾಯಿ ಬೆಲೆ ಬಾಳುವವು ಇದ್ದವೆಂದು ನನ್ನ ಅಂದಾಜು.

ವರದಾಚಾರ್ಯರಿಗೆ ಸಂಗೀತದಲ್ಲಿಯೂ ತುಂಬ ಅಭಿಮಾನ. ಅನೇಕ ಮಂದಿ ಸಂಗೀತಗಾರರನ್ನು ಮನೆಯಲ್ಲಿಟ್ಟುಕೊಂಡು ಪೋಷಿಸಿದ್ದನ್ನು ನಾನು ಬಲ್ಲೆ. ನಾಟಕ ವಿಷಯದಲ್ಲಂತೂ ಅವರಿಗೆ ಅಪಾರವಾದ ಉತ್ಸಾಹ. ಅವರು ಅಮೆಚೂರ್ ನಾಟಕ ಮಂಡಲಿಯ ಪ್ರಮುಖರಲ್ಲೊಬ್ಬರು. ಬಳ್ಳಾರಿಯ ಪ್ರಸಿದ್ಧ

ನಟಶಿರೋಮಣಿ ರಾಘವಾಚಾರ್ಯರು ಅವರಿಗೆ ತುಂಬ ಸ್ನೇಹಿತರು. ವರದಾಚಾರ್ಯರು ನಾಟಕದಲ್ಲಿ ವೇಷಧರಿಸಿ ರಂಗಕ್ಕೆ ಬಂದು ಜನರನ್ನು ಸಂತೋಷಪಡಿಸಿದ್ದನ್ನು ನಾನು ಎರಡು ಮೂರು ಸಾರಿ ನೋಡಿದ್ದೇನೆ.

ದೇಹವ್ಯಾಯಾಮದ ವಿಷಯದಲ್ಲಿಯೂ ಅವರ ಆಸಕ್ತಿ ಅತಿಶಯವಾಗಿತ್ತು. ಲೇಡೀಸ್ಯಾಂಡೋ ಎಂದು ಹೆಸರುಪಡೆದಾಕೆ ಸಾಮುಗಾತಿಯೊಬ್ಬಳು ಮಾಡಿದ ಬಲಪ್ರದರ್ಶನಗಳನ್ನು ಅವರು ನೋಡಿ ಮೆಚ್ಚಿಕೊಂಡು ಆದರಿಸಿದ್ದನ್ನು ಅವರ ಸ್ನೇಹಿತರೆಲ್ಲರೂ ಬಲ್ಲರು.

ಯಾವ ಬಗೆಯ ಸೌಂದರ್ಯವನ್ನು ಕಂಡರೂ-ಸಂಗೀತದಲ್ಲಾಗಲಿ, ಶಿಲ್ಪದಲ್ಲಾಗಲಿ, ಚಿತ್ರದಲ್ಲಾಗಲಿ, ಸಾಹಿತ್ಯದಲ್ಲಾಗಲಿ, ಗುಣಾತಿಶಯದಲ್ಲಾಗಲಿ, ವಿದ್ಯೆ ಚಮತ್ಕಾರಗಳಲ್ಲಾಗಲಿ, ಎಲ್ಲೇ ಆಗಲಿ-ಸೌಂದರ್ಯಕ್ಕೆ ಅವರ ಮನಸ್ಸು ಬೇಗ ವಶವಾಗುತ್ತಿತ್ತು. ಅದಕ್ಕಾಗಿ ಎಷ್ಟು ಬೆಲೆಯನ್ನಾದರೂ ಸಂತೋಷದಿಂದ ಕೊಡುತ್ತಿದ್ದರು.

ವರದಾಚಾರ್ಯರ ಮೊದಲನೆಯ ಭಾರ್ಯೆ ತೀರಿಹೋದಮೇಲೆ ಅವರ ಗೃಹಜೀವನ ಅಷ್ಟೇನೂ ಸಂತೋಷಮಯವಾಗಿರಲಿಲ್ಲ.ಇನ್ಫ್ಲುಯೆಂಜಾ ಉಪದ್ರವವು ಅವರ ಮೃತ್ಯುವಿಗೆ ನಿಮಿತ್ತವಾಯಿತು. ಆ ದಿವಸ ಸೇರಿದ್ದ ಗುಂಪು ರಾಷ್ಟ್ರವೀರನೊಬ್ಬನ ಮರಣಕ್ಕಾಗಿ ಶೋಕಿಸಲು ಸೇರಿದ ಗುಂಪಿನಂತೆ ಇತ್ತು. ವರದಾಚಾರ್ಯರನ್ನು ಬಲ್ಲವರೆಲ್ಲರಿಗೂ ಅದು ಹೃದಯಾಂತರಾಳದ ಶೋಕ, ಮತ್ತು ಎಂದೆಂದಿಗೂ ತೀರದ ಶೋಕ. ದುಃಖವು ಪ್ರೀತಿಗೆ ವಿಧಿಯು ಕೊಡುವ ಪ್ರತಿಧ್ವನಿ. ಅಂಥ ಪ್ರೀತಿಯನ್ನು ಸಂಪಾದಿಸಿಕೊಳ್ಳಬಲ್ಲುದಾಗಿದ್ದದ್ದು ಅವರ ಜೀವನ. ದುಃಖದ ಗರ್ಭದೊಳಗೆ ಅಡಗಿರುವ ಆ ಜೀವನಸ್ಮೃತಿ ನಮಗೆ ಪ್ರಿಯವೂ ಪವಿತ್ರವೂ ಆಗಿರುತ್ತದೆ.



# ಎಸ್. ಜಿ. ನರಸಿಂಹಾಚಾರ್ಯರು

ನನ್ನ ಇಂಗ್ಲೀಷ್ ಹುಚ್ಚು ಸ್ತಿಮಿತಕ್ಕೆ ಬಂದು ಕೆಲವು ದಿನವಾದ ಮೇಲೆ ಕನ್ನಡ ಹುಚ್ಚು ಮೊದಲಾಯಿತು. ಆಗ ನನ್ನ ವಯಸ್ಸಿನವರಿಗೆ ಪ್ರಪಂಚದಲ್ಲಿ ಬದುಕಿದ್ದವರ ಹೆಸರುಗಳಲ್ಲಿ ದೊಡ್ಡ ಹೆಸರೆಂದರೆ ಬಾಲ ಗಂಗಾಧರ ತಿಲಕರದು. ವೀರರೆಂದರೆ ತಿಲಕರೇ ವೀರರು. ಅವರ ಪಕ್ಕದಲ್ಲಿ ಎಂಥವರನ್ನು ನಿಲ್ಲಿಸಿದರೂ ಆ ಇನ್ನೊಬ್ಬರು ಕುಳ್ಳರೇ. ತಿಲಕರೇ ಪುರುಷಸಿಂಹ. ಇದು ನಮ್ಮ ಅಂದಿನ ಭಾವನೆ. ಅದು ಸರಿಯಾದದ್ದೆಂದೇ ತೋರುತ್ತದೆ. ತಿಲಕರು ಪೂನಾ ಪಟ್ಟಣದಲ್ಲಿ ಗಣೇಶೋತ್ಸವವನ್ನು ಪ್ರಾರಂಭ ಮಾಡಿ, ಮಹಾರಾಷ್ಟ್ರ ದೇಶದಲ್ಲೆಲ್ಲ ಆ ಉತ್ಸವ ವ್ಯಾಪಿಸುವಂತೆ ಪ್ರೇರಣೆ ಕೊಟ್ಟು, ಅದರ ಮೂಲ ಜನಜಾಗೃತಿಯನ್ನುಂಟುಮಾಡಿ, ಜನಪದ ಭಾವನೆಗೆ ರೂಪು ಕೊಟ್ಟ ಸಂಗತಿ ನನಗೆ ತಿಳಿದಿತ್ತು. ಅದರಂತೆ ಕರ್ಣಾಟಕದಲ್ಲೂ ನಾವು ಏಕೆ ಮಾಡಬಾರದು-ಎಂಬ ಪ್ರಶ್ನೆ ನನ್ನ ಮನಸ್ಸಿಗೆ ತೋರಿ, ಅದಕ್ಕುತ್ತರವಾಗಿ ಮಹಾಜನರಲ್ಲಿ ಒಂದು ವಿಜ್ಞಾಪನೆ ಮಾಡಬೇಕೆಂದು ಆಲೋಚನೆ ಬಂತು. ಅದರಂತೆ ಒಂದು ಪ್ರಸಿದ್ಧ ಪತ್ರಿಕೆಯನ್ನು ಬರೆದೆ. ಅದರಲ್ಲಿ ಗಣೇಶ ಕಥೆ, ಆ ರೂಪದ ಗೂಢತತ್ತ್ವ ಮತ್ತು ಆ ದೈವದ ಜನಪದಾದರ್ಶತೆ ಇವೇ ಮೊದಲಾದ ಅಂಶಗಳನ್ನು ನನಗೆ ಆಗ್ಗೆ ತೋರಿದ ಮಟ್ಟಿಗೆ ನಿರೂಪಿಸಿದ್ದೆ. ಆ ಬರವಣಿಗೆಯನ್ನು ಪ್ರಕಟನೆಗೆ ಅರ್ಹವಾದದ್ದೆಂದು ಹೇಳಬೇಕಾದವರು ಯಾರು? ಆ ವೇಳೆಗೆ ನಾನು ಶ್ರೀಮಾನ್ ಎಸ್.ಜಿ.ನರಸಿಂಹಾಚಾರ್ಯರ ಹೆಸರನ್ನು ಚೆನ್ನಾಗಿ ಗುರುತಿಸಿಕೊಂಡಿದ್ದೆ. ನಾನು ಸ್ಕೂಲಿನಲ್ಲಿ ಓದುತ್ತಿದ್ದಾಗ ಅವರ 'ದಿಲೀಪ ಚರಿತೆ', 'ಅಜನೃಪ ಚರಿತೆ' ಗಳನ್ನು ಓದಿದ್ದೆ; ಅವರು ಸಂಪಾದಿಸಿದ್ದ (ಮ್ಯಾಕ್ಮಿಲನ್ ಕಂಪೆನಿಯ) ಕನ್ನಡ ವಾಚನ ಪುಸ್ತಕಗಳಲ್ಲಿ (Readers) ಎರಡನ್ನು ಪಾಠ ಹೇಳಿದ್ದೆ; ಮತ್ತು ಅವರ ಸಹ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ 'ಕರ್ಣಾಟಕ ಕಾವ್ಯ ಮಂಜರಿ' ಯ ಕೆಲವು ಸಂಚಿಕೆಗಳನ್ನು ನೋಡಿದ್ದೆ. ಹೀಗೆ ಅವರ ಕನ್ನಡ ಗದ್ಯ ಪದ್ಯ ರಚನೆಯ ಮೂಲಕ ನನಗೆ ಅವರ ವಿಷಯದಲ್ಲಿ ಗೌರವಬುದ್ಧಿಯೂ ಮೆಚ್ಚಿಕೆಯೂ ದೃಢಪಟ್ಟಿದ್ದವು. ಈ ಕಾರಣದಿಂದ ನಾನು ಅವರಿಗೆ ನನ್ನ ಬರವಣಿಗೆಯನ್ನು ತೋರಿಸಬೇಕೆಂದು ನಿಶ್ಚಯಿಸಿಕೊಂಡೆ.

ಅವರು ವಾಸವಾಗಿದ್ದದ್ದು ಹಾಸ್ಪಿಟಲ್ ಲೇನ್ ಎಂಬ ಬೀದಿಯ ಉತ್ತರ ಪಾರ್ಶ್ವಶ್ರೇಣಿಯ ನಡುವೆ ಒಂದು ಮನೆಯಲ್ಲಿ. ಆ ಬೀದಿ ಉಪ್ಪಾರಪೇಟೆ (ಬಳೇಪೇಟೆ) ನರಸಿಂಹಸ್ವಾಮಿಯ ಗುಡಿಯಿಂದ ಪೂರ್ವಕ್ಕೆ

ಹೊರಟು (ಹಿಂದಿನ ಹುಚ್ಚಾಸ್ಪತ್ರೆಯ) ಈಗಿನ ಮೈಸೂರು ಬ್ಯಾಂಕಿನ ಪಕ್ಕದಲ್ಲಿ ದೊಡ್ಡಪೇಟೆಯನ್ನು ಸೇರುತ್ತದೆ. ನಾನು ಹೋದಾಗ ಅವರೊಡನೆ ಅವರ ಸ್ನೇಹಿತರಾದ ಶ್ರೀ ಜಿ.ಜಿ. ನರಸಿಂಹಾಚಾರ್ಯರು ಇದ್ದರು. ಜಿ.ಜಿ. ನರಸಿಂಹಾಚಾರ್ಯರೂ ಸಹ ಒಬ್ಬ ಗಣ್ಯವ್ಯಕ್ತಿ. ಅವರು ಸ್ವಾಮಿವಿವೇಕಾನಂದರ ಮಾಹಾತ್ಮ್ಯಕ್ಕೆ ಮನಸೋತು, ಅವರಿಗೆ ಸಾಕ್ಷಾತ್ ಶಿಷ್ಯರಾಗಿ, ಅವರೊಡನೆ ಕೊಂಚಕಾಲ ದೇಶಸಂಚಾರ ಮಾಡಿದ್ದ ಮಹನೀಯರು. ಅವರಿಗಿದ್ದ ಉದ್ಯೋಗ ದೊಡ್ಡದೇನೂ ಅಲ್ಲ. ಅವರು ಡಿಸ್ಟ್ರಿಕ್ಟ್ ಆಫೀಸಿನಲ್ಲಿ ಒಬ್ಬ ಗುಮಾಸ್ತರಾಗಿದ್ದರೆಂದು ತೋರುತ್ತದೆ. ಆದರೆ ಅವರಿಗಿದ್ದ ವೇದಾಂತ ಸಾಹಿತ್ಯಜ್ಞಾನ ವಿಸ್ತಾರವಾದದ್ದು ಮತ್ತು ಅವರ ಸ್ವದೇಶಾಭಿಮಾನ ವೀರ್ಯವತ್ತಾದದ್ದು. ಅವರ ಆಕಾರವೂ ಉನ್ನತವಾಗಿ ಗಂಭೀರವಾಗಿ ಪ್ರಸನ್ನವಾಗಿತ್ತು. ಈ ಜಿ.ಜಿ.ಯವರ ಮಾತಿಗೆ ಇನ್ನೊಂದು ಸಾರಿ ಬರೋಣ.

ಎಸ್.ಜಿ. ನರಸಿಂಹಾಚಾರ್ಯರು ಆಕಾರದಲ್ಲಿ ದೊಡ್ಡಾಳಲ್ಲ, ಸಾಮಾನ್ಯ ಗಾತ್ರ, ತೆಳುವೆಂದೇ ಹೇಳಬಹುದು. ನೋಡಿದ ಕೂಡಲೆ ಥಟ್ಟನೆ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಬಲ್ಲ ರೂಪಪ್ರಭಾವ ಅವರಿಗಿರಲಿಲ್ಲ. ನನ್ನ ಉದ್ದೇಶವನ್ನು ನಾನು ಹೇಳಿದ ಕೂಡಲೆ ಅವರು- "ನೀವು ಓದುವಿರಾ? ನಾವು ಕೇಳುತ್ತೇವೆ" ಎಂದರು. ನಾನು ನನ್ನ ಪ್ರಬಂಧವನ್ನು ಓದಿ ಮುಗಿಸಿದ ಮೇಲೆ ತಾವೇ ಅದನ್ನು ಕೈಗೆ ತೆಗೆದುಕೊಂಡು ಇನ್ನೊಂದು ಸಾರಿ ಓದಿದರು. ಆಮೇಲೆ-

ಎಸ್.ಜಿ.: "ಆಧುನಿಕ" ಎಂಬ ಮಾತನ್ನು ಉಪಯೋಗಿಸಿದ್ದೀರಲ್ಲ, ಹಾಗೆಂದರೇನು?

ನಾನು: "ಈಚೀಚಿನ" ಎಂದು.

ಎಸ್.ಜಿ. : ಈಚೀಚಿನ ಎಂದೇ ಏಕೆ ಬರೆಯಬಾರದು? ನನ್ನ ಸ್ನೇಹಿತರು ಮಹಾರಾಷ್ಟ್ರದವರು ಒಬ್ಬರಿದ್ದಾರೆ. ಅವರು ಸಂಸ್ಕೃತ ಬಲ್ಲವರು. ಅವರು ಈ "ಆಧುನಿಕ" ಎಂಬ ಪದವನ್ನು ಒಂದು ಕಡೆ ನೋಡಿದಾಗ ಅದಕ್ಕೆ ಅರ್ಥವೇನು ಎಂದು ನನ್ನನ್ನು ಕೇಳಿದರು. ನಾನು ಆಶ್ಚರ್ಯಪಟ್ಟೆ. ಸಂಸ್ಕೃತದ "ಅಧುನಾ" ಎಂಬುದರ ವಿಶೇಷಣ ರೂಪ ಅಲ್ಲವೆ "ಆಧುನಿಕ" ಎಂಬುದು? ಸಂಸ್ಕೃತ ಬಲ್ಲವರಿಗೇ ಅದು ಇಷ್ಟು ಕಷ್ಟವಾಗಿರುವಾಗ ಸಂಸ್ಕೃತ ತಿಳಿಯದ ನಮ್ಮ ಸಾಮಾನ್ಯ ಜನಕ್ಕೆ ಈ ಮಾತು ಹೇಗೆ ಅರ್ಥವಾಗಬೇಕು.

ಕೆನ್ನೆಗೆ ಬಿದ್ದ ಏಟು ನನಗೆ ನ್ಯಾಯವಾಗಿ ಸಂದದ್ದು. ತಿಂದು ಒರಸಿಕೊಂಡೆ. ಅಂಥ ಪೆಟ್ಟುಗಳನ್ನೂ ಇನ್ನೂ ನಾಲ್ಕಾರು ಸಲ ತಿಂದಿದ್ದೇನೆ.

ಹೀಗೆ ಪ್ರಾರಂಭವಾದ ಪರಿಚಯ ಕೆಲವು ದಿವಸಗಳಲ್ಲಿ ಪಕ್ವವಾಯಿತು. ಆಗ ಚಾಮರಾಜಪೇಟೆಯ ಮೊದಲನೆಯ ರಸ್ತೆಯಲ್ಲಿದ್ದ ಶ್ರೀ ರಾಮಕೃಷ್ಣ ಮಠಕ್ಕೆ ಎಸ್.ಜಿ.ನರಸಿಂಹಾಚಾರ್ಯರೂ, ಜಿ.ಜಿ. ಯವರೂ ವಾರಕ್ಕೆ ಎರಡು ಮೂರು ಸಲವಾದರೂ ಬರುತ್ತಿದ್ದರು. ಅಲ್ಲಿ ಎಸ್.ಜಿ. ಯವರ ಮಾತುಕತೆ ಕೇಳುವ ಭಾಗ್ಯ ನನಗೆ ಲಭಿಸಿತು. ಆ ಮಾತಿನ ವಿಷಯಗಳು ಕಾವ್ಯಲಕ್ಷಣ, ಕವಿ ಕಥೆ, ದೇಶಚರಿತ್ರೆ, ಮತತತ್ತ್ವ, ಸಮಾಜಶುದ್ಧಿ ಇತ್ಯಾದಿ.

ಭಾಷಾಶೈಲಿಯಲ್ಲಿ ಸರಳತೆ ಎಸ್.ಜಿ. ಯವರಿಗೆ ಪ್ರಿಯವಾದ ಗುಣ ಎಂಬುದನ್ನು ಅವರು ನನಗೆ ಕಲಿಸಿದ ಪಾಠದಿಂದ ಊಹಿಸಿಕೊಳ್ಳಬಹುದು. ನಡವಳಿಕೆಯಲ್ಲಿಯೂ ಅವರು ಹಾಗೆಯೇ ಸರಳರು.

ಒಂದಾನೊಂದು ದಿನ ಸಂಜೆ ನಮ್ಮ ಸಮಾಜದ ಗಣ್ಯ ಪುರುಷರು ಕಾಲಹರಣ ಮಾಡುವ ರೀತಿ ಪ್ರಸ್ತಾಪಕ್ಕೆ ಬಂತು. ಆಗ ಎಸ್.ಜಿ. ಅವರು ಹೀಗೆಂದರು- ‘‘ಇಂಗ್ಲೀಷ್ ವಿದ್ಯೆ ಕಲಿತು ದೊಡ್ಡದೊಡ್ಡ ಹುದ್ದೆಗಳಲ್ಲಿದ್ದು ಪೆನ್ಷನ್ ಸಂಪಾದಿಸಿದವರೂ ವಕೀಲರಾಗಿ ಐಶ್ವರ್ಯ ಸಂಪಾದಿಸಿದವರೂ ಮುಪ್ಪಿನಲ್ಲಿ...ಇನ್ಸ್ಟಿಟ್ಯೂಟ್ ಮೊದಲಾದ ವಿನೋದ ಸ್ಥಾನಗಳಿಗೆ ಹೋಗಿ ಸಂಜೆಯನ್ನೂ ರಾತ್ರಿಯನ್ನೂ ಅಲ್ಲಿ ಹಾಳುಮಾಡುತ್ತಾರೆ! ಅವರಿಗೆ ವಿನೋದವೆಂದರೆ ಇಸ್ಪೀಟ್ ಕಲಹ. ಆನಂದವೆಂದರೆ ಮಧುಸೇವನೆಯ ಮತ್ತು. ಹೀಗೆ ವಿಶ್ರಾಂತಿ ಕಾಲವನ್ನೂ ವ್ಯರ್ಥಮಾಡಿಕೊಂಡು ಪಶುವೃತ್ತಿಯಲ್ಲಿ ಬದುಕನ್ನೂ ಮುಗಿಸಿಕೊಳ್ಳುತ್ತಾರೆ. ಅಂಥವರು ಚೆನ್ನಾಗಿ ಬದುಕಲು ಮನಸ್ಸು ಮಾಡಿದರೆ ಅವರಿಂದ ಎಷ್ಟೋ ಸಮಾಜ ಸೇವೆ ನಡೆಯಬಹುದು! ಅವರ ಸುತ್ತಮುತ್ತ ಎಷ್ಟೋ ಸತ್ಪರಿಣಾಮ ಉಂಟಾಗಬಹುದು!

‘‘ದೊಡ್ಡ ವಿಷಯಕ್ಕೆ ಮನಸ್ಸು ಕೊಡುವ ಅಭ್ಯಾಸವನ್ನು ಚಿಕ್ಕಂದಿನಿಂದ ಮಾಡಿಕೊಳ್ಳಬೇಕು. ಪ್ರಕೃತಿ ಎಲ್ಲೆಲ್ಲೂ ಒಂದೊಂದು ಪುಸ್ತಕವನ್ನು ತೆರೆದಿಟ್ಟಿದ್ದಾಳೆ. ನಮ್ಮಲ್ಲಿರಬೇಕಾದ್ದು ತೆರೆದ ಕಣ್ಣು. ಈ ಪೆನ್ಷನ್ದಾರರೂ ಪುಷ್ಟರಾದ ವಕೀಲರೂ ಆಕಾಶದ ಕಡೆ ನೋಡಬಾರದೆ? ನಕ್ಷತ್ರ ಗ್ರಹಗಳ ಗಾತ್ರಗಳನ್ನೂ ವರ್ಣಗಳನ್ನೂ ಅವುಗಳ ಸಂಚಾರ ಮಾರ್ಗಗಳನ್ನೂ ತಿಳಿದುಕೊಳ್ಳಬಾರದೆ? ಎಂಥ ಅದ್ಭುತವಾದ ಶಾಸ್ತ್ರ ಖಗೋಳ ವಿಜ್ಞಾನ!

‘‘ವಿಜ್ಞಾನಶಾಸ್ತ್ರಗಳು ಬುದ್ಧಿಯ ಶ್ರಮವನ್ನು ಬೇಡುತ್ತವೆ. ಅವರು ಅಷ್ಟು ಶ್ರಮ ಪಡಲಾರರೇನೋ! ಅದು ಹೋಗಲಿ. ಚೆನ್ನಾಗಿ ಅಡಿಗೆ ಮಾಡುವುದನ್ನಾದರೂ ಕಲಿತು ಹತ್ತು ಜನ ಇಷ್ಟ ಮಿತ್ರರಿಗೆ-ಆಗಾಗ ಔತಣ ಮಾಡಬಾರದೆ? [ಎಸ್.ಜಿ.ಅವರ] ತಂದೆ ಸೊಗಸಾಗಿ ಅಡಿಗೆ ಮಾಡುತ್ತಿದ್ದರು. ಆಗಾಗ ಅವರ

ಸ್ನೇಹಿತರನ್ನು ಸೇರಿಸಿಕೊಂಡು ವನಭೋಜನ ಏರ್ಪಡಿಸಬೇಕು. ಬೇಕಾದ ತಿಂಡಿ ಮಾಡಿ, ಪಾಕ ಪರಿತವಣೆಯಿಂದ ಸಂತೋಷಪಡಿಸುತ್ತಿದ್ದರು. ಅದು ಎಂಥ ನಿರ್ಮಲವಾದ ಮತ್ತು ಗಾಢವಾದ ಸಂತೋಷ! ಇಂಥ ಸಂತೋಷಗಳು ಹೆಚ್ಚು ವೆಚ್ಚವಿಲ್ಲದೆ ದೊರೆಯುವುದು ಸಾಧ್ಯವಾಗಿರುವಾಗ ನಮ್ಮ ಹಿರಿಯ ಜನ ಅದನ್ನು ಬಿಟ್ಟು ಕುಡಿತದಲ್ಲಿ ಕಾಲಹರಣ ಮಾಡುತ್ತಾರಲ್ಲ!"

ಈ ರೀತಿಯಾಗಿ ಒಂದು ಹತ್ತು ನಿಮಿಷ ಎಸ್.ಜಿ. ನರಸಿಂಹಾಚಾರ್ಯರು ಮಾತನಾಡಿದರು. ಅವರ ಅಂತರಂಗ ಎಷ್ಟು ಶುಚಿಯಾದದ್ದು ಎಂಬುದು ಇದರಿಂದ ಗೊತ್ತಾಗುತ್ತದೆ.

ಎಸ್.ಜಿ.ನರಸಿಂಹಾಚಾರ್ಯರ ಬಾಲ್ಯದಲ್ಲಿಯೇ ಅವರ ತಂದೆ ಅಳಸಿಂಗರಾಚಾರ್ಯರು ತೀರಿಕೊಂಡರು. ಅವರು ಶ್ರೀರಂಗಪಟ್ಟಣದ ನರಸಿಂಹಸ್ವಾಮಿ ದೇವಸ್ಥಾನದಲ್ಲಿ ಕೈಂಕರ್ಯ ಮಾಡುತ್ತಿದ್ದರು. ಅವರು ಸಾಹಿತ್ಯ ಪಂಡಿತರು. ಹಿರಿಯ ವೈದ್ಯರು. ಭಸ್ಮಗಳನ್ನೂ ಕುಪ್ಪಿಗೆ ಮಾತ್ರೆಗಳನ್ನೂ ಮಾಡಿ ಅನೇಕ ರೋಗಿಗಳಿಗೆ ವಾಸಿಮಾಡುತ್ತಿದ್ದರು. ಅಡಿಗೆ ಕೆಲಸದಲ್ಲಿ ನಿಸ್ಸೀಮರು. ಅವರ ಮನೆ ದೊಡ್ಡ ಛತ್ರ. ಬಂದವರಿಗೆ ಮಲಗುವುದಕ್ಕೆ ಕೂಡ ಚಾಪೆಗಳೂ, ಪಾರಿವಾಣದ ತಲೆದಿಂಬುಗಳೂ ಯಾವಾಗಲೂ ಸಿದ್ಧ.

ಎಸ್.ಜಿ.ನರಸಿಂಹಾಚಾರ್ಯರು ಪಂಡಿತರೂ ಹೌದು, ರಸಿಕರೂ ಹೌದು. ಆದರೆ ಅವರ ಸಹವಾಸದಲ್ಲಿದ್ದವರಿಗೆ ವಿಶೇಷವಾಗಿ ಕಾಣಬರುತ್ತಿದ್ದದ್ದು ಅವರ ಸರಸತೆ. ಅವರ ಪಾಂಡಿತ್ಯವೇನಿದ್ದರೂ ಪ್ರೌಢ ಗ್ರಂಥಗಳನ್ನು ಪರೀಕ್ಷಿಸುವುದರಲ್ಲಿಯೂ ಪರಿಷ್ಕಾರಗೊಳಿಸುವುದರಲ್ಲಿಯೂ ವಿನಿಯುಕ್ತವಾಗುತ್ತಿತ್ತು.

'ಕರ್ನಾಟಕ ಕವಿಚರಿತ್ರೆ' ಯ ಮೊದಲನೆಯ ಸಂಪುಟದ ರಚನೆಯಲ್ಲಿ ಆರ್.ನರಸಿಂಹಾಚಾರ್ಯರೂ, ಎಸ್.ಜಿ.ನರಸಿಂಹಾಚಾರ್ಯರೂ ಸಮಸಮವಾಗಿ ಸಹಕರಿಸಿದ್ದರು. ಎಸ್.ಜಿ.ನರಸಿಂಹಾಚಾರ್ಯರ ಕೈವಾಡವು ಆ ಗ್ರಂಥದಲ್ಲಿ ಪೂರ್ವಕವಿಗಳನ್ನು ಕುರಿತ ಯೋಗ್ಯತಾ ಸೂಚಕ ವಾಕ್ಯಗಳಲ್ಲಿ ಕಾಣಬರುತ್ತದೆ. ಎರಡು ಮೂರು ಆರಿಸಿದ ಮಾತುಗಳಲ್ಲಿ ಕವಿಯ ವಿಶೇಷ ಗುಣವನ್ನು ಎತ್ತಿ ತೋರಿಸುವ ಸೂಕ್ಷ್ಮಗ್ರಹಣ ಕುಶಲತೆ ಎಸ್.ಜಿ.ಅವರದು. ಅವರ ಮಾತುಗಳು ತೂಗಿಸಿ ತೂಗಿಸಿ ಆರಿಸಿದಂಥವು. ಆರ್.ನರಸಿಂಹಾಚಾರ್ಯರದು ವಿಸ್ತಾರವಾದ ವಿದ್ವತ್ತು; ಅದ್ಭುತವಾದ ನಾನಾ ಗ್ರಂಥ ಪರಿಚಯ; ಅವರು ಸಂಸ್ಕೃತ ಕನ್ನಡ ತಮಿಳು ತೆಲುಗುಗಳನ್ನು ಆಳವಾಗಿ ಶೋಧಿಸಿ ನೋಡಿದ್ದವರು. ಎಸ್.ಜಿ.ನರಸಿಂಹಾಚಾರ್ಯರದಾದರೋ ರಸೈಕದೃಷ್ಟಿ.

ಎಸ್.ಜಿ. ನರಸಿಂಹಾಚಾರ್ಯರೂ ನಾಟಕದ ವರದಾಚಾರ್ಯರೂ ಆಪ್ತಸ್ನೇಹಿತರು. ವರದಾಚಾರ್ಯರಿಗೆ ಹತ್ತಾರು ಕಂದಪದ್ಯಗಳನ್ನೂ ಹಾಡುಗಳನ್ನೂ ಎಸ್.ಜಿ.ಅವರು ರಚನೆಮಾಡಿಕೊಟ್ಟಿದ್ದರು. ಕೆಲಮಂದಿ ಸ್ನೇಹಿತರ ಬೇಡಿಕೆಯಂತೆ ಎಸ್.ಜಿ.ಯವರು ಒಂದು ಕಾಮನ ಹಬ್ಬದ ಹಾಡನ್ನು ಕಟ್ಟಿದ್ದರು. ಅದನ್ನು ಹಾಡಿದ್ದನ್ನು ನಾನು ಕೇಳಿದ್ದೇನೆ. ಅದರಲ್ಲಿ ಅಶ್ಲೀಲಾಂಶವೇನೂ ಇಲ್ಲದೆ ಕಥಾಮಾಧುರ್ಯ ತುಂಬಿತ್ತು. ಮಾತುಗಳು ಸುಕುಮಾರವಾದವುಗಳಾಗಿ ರಸಗರ್ಭಿತಗಳಾಗಿದ್ದುವು. ಅದು ಒಂದು ಅಪೂರ್ವ ಛಂದಸ್ಸಿನಲ್ಲಿದ್ದಂತೆ ನನಗೆ ತೋರಿತು. ಅದರದು ಮಂದಗತಿಯ ಧಾಟಿ.ನಾನು ಅದರ ಕೆಲಕೆಲವು ಪಾದಗಳನ್ನು ಕೇಳಿದ್ದೇನೆಯೇ ಹೊರತು ಸಂಪೂರ್ಣವಾಗಿ ಕೇಳಿಲ್ಲ. ಆ ಹಾಡು ಅಚ್ಚಾಗಿಲ್ಲ. ಆ ಹಾಡನ್ನು ಬಲ್ಲವರು ಯಾರಾದರೂ ಇದ್ದಲ್ಲಿ ಅವರು ಅದನ್ನು ಬರೆದುಕೊಟ್ಟರೆ ಅದರಿಂದ ನಮ್ಮ ಸಾಹಿತ್ಯಕ್ಕೆ ಉಪಕಾರವಾದೀತು. ಬಿ.ವೆಂಕಟಾಚಾರ್ಯರು ಬಂಕಿಮ ಚಂದ್ರರ ಬಂಗಾಳಿಯಿಂದ 'ವಿಷವೃಕ್ಷ' ಎಂಬ ಪ್ರಸಿದ್ಧ ಕಾದಂಬರಿಯನ್ನು ಕನ್ನಡಿಸಿದ್ದಾರಷ್ಟೆ? ಅದರಲ್ಲಿ ಬರುವ "ಶರಣು ಕಮಲೆಯ ಚರಣಕೆ" ಎಂಬ ಹಾಸ್ಯದ ಹಾಡು ಎಸ್.ಜಿ.ನರಸಿಂಹಾಚಾರ್ಯರ ಕೃತಿ ಎಂದು ನಾನು ಕೇಳಿದ್ದೇನೆ.

ಎಸ್.ಜಿ. ನರಸಿಂಹಾಚಾರ್ಯರ ಗ್ರಂಥಗಳು ಈಗ ಓದುಗರಿಗೆ ದೊರೆಯುತ್ತಿಲ್ಲ. ಅವರ ಬರವಣಿಗೆಯಲ್ಲಿ ಅಚ್ಚಾಗಿರುವಷ್ಟು ಭಾಗವನ್ನು ಸಂಗ್ರಹ ಮಾಡಿ ಪ್ರಕಟಿಸಿದರೆ ಸುಮಾರು ೩೦೦-೪೦೦ ಪುಟಗಳಷ್ಟಾಗಬಹುದು. ಅಷ್ಟನ್ನಾದರೂ ಪ್ರಕಟಗೊಳಿಸಿದರೆ ಅದು ಒಂದು ಸಾಹಿತ್ಯ ರತ್ನವೆಂದು ಅಂಗೀಕೃತವಾಗುವುದೆಂದು ನನಗೆ ನಂಬಿಕೆಯುಂಟು.

ಮೂವತ್ತು ನಲವತ್ತು ವರ್ಷಗಳ ಹಿಂದೆ ಪ್ರಚಾರದಲ್ಲಿದ್ದ 'ಪದ್ಯಸಾರ' ಎಂಬ ಗ್ರಂಥವನ್ನು ಸಂಕಲನ ಮಾಡಿದ್ದವರೂ ಸಹ ಎಸ್.ಜಿ.ನರಸಿಂಹಾಚಾರ್ಯರೆಂದು ನಾನು ಕೇಳಿದ್ದೇನೆ. ನಮ್ಮ ಪುರಾತನ ಕಾವ್ಯಗಳ ಸಾರಭಾಗಗಳನ್ನು ಅಂಥ ಸೂಕ್ಷ್ಮವೇದಿತೆಯಿಂದ ವಿಮರ್ಶನೆಮಾಡಿ ಆರಿಸಬಲ್ಲವರು ಬೇರೆ ಯಾರಿದ್ದಾರು? ಆ ಪದ್ಯಗಳಲ್ಲಿಯ ಸ್ವಾರಸ್ಯ ಎಸ್.ಜಿ.ನರಸಿಂಹಾಚಾರ್ಯರ ಸೂಕ್ಷ್ಮಾಭಿರುಚಿಗೆ ನಿದರ್ಶನವಾಗಿದೆ.

ಕನ್ನಡದ ಜೀರ್ಣೋದ್ಧಾರ ಪ್ರಸ್ತಾವದಲ್ಲಿ 'ಕರ್ಣಾಟಕ ಕಾವ್ಯಮಂಜರಿ', 'ಕರ್ಣಾಟಕ ಕಾವ್ಯ ಕಲಾನಿಧಿ' -ಈ ಎರಡು ಮಾಸ ಪುಸ್ತಕಗಳು ಮಾಡಿದ ಸೇವೆಯನ್ನು ಸ್ಮರಿಸದಿರುವುದು ಕೃತಘ್ನತೆಯಾಗುತ್ತದೆ. ಆ ಪತ್ರಿಕೆಗಳನ್ನು ನಡಸುತ್ತಿದ್ದವರು ಶ್ರೀ ಎಂ.ಎ.ರಾಮಾನುಜಯ್ಯಂಗಾರ್ಯರು ಮತ್ತು ಎಸ್.ಜಿ.ನರಸಿಂಹಾಚಾರ್ಯರು-ಇಬ್ಬರೂ ಸೇರಿ. ರಾಮಾನುಜಯ್ಯಂಗಾರ್ಯರದು ನಿಶಿತ ಪಾಂಡಿತ್ಯ.

ಅವರೂ ಸೂಕ್ಷ್ಮದೃಷ್ಟಿಯ ವಿಮರ್ಶಕರು. ಅವರೂ ಸಂಪ್ರದಾಯನಿಷ್ಠರು ಮತ್ತು ಭಗವದ್ಭಕ್ತರು; ನಡೆನುಡಿಗಳಲ್ಲಿ ಕಟ್ಟುನಿಟ್ಟುಳ್ಳವರು; ಗಂಭೀರ ಸ್ವಭಾವದವರು.

'ಕಾವ್ಯ ಮಂಜರಿ' ಯು ಪ್ರಾಚೀನ ಕಾವ್ಯಗಳನ್ನು ಭಾಗಭಾಗವಾಗಿ ಪ್ರಕಟಮಾಡುತ್ತಿತ್ತು. ಅದಕ್ಕಾಗಿ ಗ್ರಂಥಗಳ ತಾಳಪತ್ರ ಪ್ರತಿಗಳನ್ನೂ ಇತರ ಪುರಾತನಲಿಪಿಗಳನ್ನೂ ಪತ್ತೆ ಮಾಡಿ ತಂದುಕೊಳ್ಳುವ ಪ್ರಯಾಸವೂ, ಅವುಗಳನ್ನು ಶೋಧಿಸಿ, ಲುಪ್ತವಾಗಿ ಹೋಗಿದ್ದ ಭಾಗಗಳನ್ನು ಊಹೆಯಿಂದ ಕೂಡಿದಮಟ್ಟಿಗೆ ಸೂಚಿಸಿ, ಅಕ್ಷರಸ್ಖಾಲಿತ್ಯಗಳನ್ನು ಕಂಡುಹಿಡಿದು ಪರಿಷ್ಕಾರಗೊಳಿಸಿ ಮುದ್ರಣಕ್ಕೆ ಸಿದ್ಧಪಡಿಸುವ ಪ್ರಯಾಸವೂ ಎಂಥವೆಂಬುದು ಅಂಥ ಕೆಲಸದ ಅನುಭವವುಳ್ಳವರಿಗೇ ತಿಳಿಯಲಾಗತಕ್ಕದ್ದು. ಅದು ವರ್ಣಿಸಲಾಗದ ಶ್ರಮ; ನಿದ್ದೆ ಕೆಡಿಸಿ, ಊಟಬೇಡವೆನಿಸಿ, ತಲೆನೋವು ತರುವಂಥ ಶ್ರಮ. ಅದನ್ನು ಇಷ್ಟದಿಂದ ಪಟ್ಟ ಮೊದಲನೆಯ ಕನ್ನಡದ ಉಪಕಾರಿಗಳು ರಾಮಾನುಜಯ್ಯಂಗಾರ್ಯರು ಮತ್ತು ಎಸ್.ಜಿ.ನರಸಿಂಹಾಚಾರ್ಯರು.

'ಕಾವ್ಯಕಲಾನಿಧಿ' ಯಲ್ಲಿಯೂ ಪ್ರಾಚೀನಗ್ರಂಥಗಳು ಪ್ರಕಟವಾಗುತ್ತಿದ್ದವು. 'ಕರ್ನಾಟಕ ಗ್ರಂಥಮಾಲೆ' ಯಲ್ಲಿ "ಆಧುನಿಕ" (ಎಸ್. ಜಿ. ಅವರು ನನ್ನನ್ನು ಕ್ಷಮಿಸಲಿ!) ವಚನ ಪ್ರಬಂಧಗಳೂ ಪದ್ಯ ಪ್ರಬಂಧಗಳೂ ಬರುತ್ತಿದ್ದವು. ರಾಮಾನುಜಯ್ಯಂಗಾರ್ಯರ ಕವಿ ಸಮಯೋಪನ್ಯಾಸಗಳು ಮೊದಲು ಪ್ರಕಟವಾದದ್ದು ಈ ಪತ್ರಿಕೆಯಲ್ಲಿಯೇ ಇರಬಹುದೆಂದು ನನ್ನ ಜ್ಞಾಪಕ. ರಾಮಾನುಜಯ್ಯಂಗಾರ್ಯರ ವಾಕ್ಯಶೈಲಿ ಅಚ್ಚುಕಟ್ಟಾದದ್ದು. ವಿಷಯವನ್ನು ನಿಷ್ಕೃಷ್ಟ ರೀತಿಯಲ್ಲಿ ಪ್ರತಿಪಾದಿಸುವ ಜ್ಞಾನಸಂಪತ್ತೂ ವಾಕ್ಸಾಮರ್ಥ್ಯವೂ ಅವರ ಪಾಲಿಗೆ ಬಂದಿದ್ದವು. 'ಮಂಜರಿ', 'ಕಲಾನಿಧಿ' ಗಳೆರಡರ ಸಂಪಾದನೆಯಲ್ಲಿಯೂ ಎಸ್.ಜಿ.ನರಸಿಂಹಾಚಾರ್ಯರ ಕೈ ಕೆಲಸ ಶೋಭಾಕರವಾಗಿತ್ತು. ಅವರ ಸಹಾಯವಿಲ್ಲದಿದ್ದಲ್ಲಿ ಆ ಕೆಲಸ ಅಷ್ಟು ಚೆನ್ನಾಗಿ ಸಾಗುತ್ತಿರಲಿಲ್ಲವೆಂಬುದು ಅವರ ಸಹೋದ್ಯೋಗಿಗಳ ಅಭಿಪ್ರಾಯ.

ಎಸ್.ಜಿ. ನರಸಿಂಹಾಚಾರ್ಯರು ದೊಡ್ಡ ಹುದ್ದೆಗೆ ಹತ್ತಿದ್ದವರಲ್ಲ. ಸರಕಾರದ ವಿದ್ಯಾ ಇಲಾಖೆಯಲ್ಲಿ ಟ್ರಾನ್ಸ್ಲೇಟರ್ (ಭಾಷಾಂತರಕಾರ) ಆಗಿದ್ದವರು. ಆ ಕೆಲಸಕ್ಕೆ ಈಗ Secrctary, Textbook Committee ಎಂದು ಹೆಸರಾಗಿದೆ. ಆ ಹುದ್ದೆಯ ಸಂಬಳ ಆಗ ಸುಮಾರು ೧೫೦ರ ಮಟ್ಟದಲ್ಲಿದ್ದಿರಬಹುದು. ಆದರೆ ಅದು ಸಣ್ಣದೆಂದು ಅವರು ಭಾವಿಸಿದ್ದಂತೆ ಎಂದೂ ತೋರಲಿಲ್ಲ. ಸರ್ವದಾ ಸಂತೋಷ ಶಾಂತಿಗಳಿಂದ ತುಂಬಿ ನಡೆದುಕೊಳ್ಳುತ್ತಿದ್ದರು. ಹೊರಕ್ಕೆ ನಿರಾಡಂಬರವಾದ

ಜೀವನ; ಒಳಗೆ ಸರಸ್ವತೀ ಸೌಭಾಗ್ಯ ತೃಪ್ತಿ. ಕೆಲಸದಿಂದ ನಿವೃತ್ತರಾಗಬೇಕಾದ ವಯಸ್ಸಿಗೆ ಬಹಳ ಮುಂಚೆಯೇ, ಕೇವಲ ೪೩ನೆಯ ವಯಸ್ಸಿನಲ್ಲೇ, ಅವರ ಆಯುಸ್ಸು ಮುಗಿಯಿತು (ಡಿಸೆಂಬರ್ ೧೯೦೭).

ಎಸ್.ಜಿ. ನರಸಿಂಹಾಚಾರ್ಯರ ಮಗ ರಂಗಸ್ವಾಮಿ ಎಂಬಾತ ಇದ್ದರು. ಅವರೂ ಬಿ.ಎ., ಪಟ್ಟ ಪಡೆದು ಸೆಕ್ರೆಟೇರಿಯಟಿನಲ್ಲಿ ಉದ್ಯೋಗದಲ್ಲಿದ್ದರು. ತಂದೆಯಂತೆ ಸೌಮ್ಯ ಸ್ವಭಾವದವರು ಮತ್ತು ಸರಸ ಕಾವ್ಯ ಪ್ರಿಯರು. ಅವರೂ ಚಿಕ್ಕ ವಯಸ್ಸಿನಲ್ಲಿಯೇ ತೀರಿಕೊಂಡರು.

ಎಸ್.ಜಿ. ನರಸಿಂಹಾಚಾರ್ಯರ ತಮ್ಮಂದಿರು ಶ್ರೀ.ಎಸ್.ಜಿ. ಗೋವಿಂದ ರಾಜಯ್ಯಂಗಾರ್ಯರು ಈಗ್ಗೆ (೧೯೫೩) ಹತ್ತು ವರ್ಷಗಳ ಹಿಂದಿನವರೆಗೂ ಇದ್ದರು. ಇವರ ತಾಯಿ ಸೀತಮ್ಮನವರ ಪೋಷಣೆಯಲ್ಲಿ ಪ್ರವರ್ಧಮಾನಕ್ಕೆ ಬಂದರು. ಭಸ್ಮಗಳು ಕುಪ್ಪಿಗೆ ಮಾತ್ರೆಗಳು ಇವುಗಳ ತಯಾರಿಕೆಯಲ್ಲಿ ಒತ್ತಾಸೆ ಮಾಡುತ್ತಿದ್ದದ್ದರಿಂದ ತಾಯಿಯ ಎರಡು ಕಣ್ಣುಗಳೂ ಹೋದವು. ಕುರುಡು ತಾಯಿಯೇ ಅಡಿಗೆ ಮಾಡುತ್ತಿದ್ದರು. ಅದಕ್ಕಿಂತ ಆಶ್ಚರ್ಯ ಎಲೆ ಹಚ್ಚುತ್ತಿದ್ದರು. ಎಸ್.ಜಿ.ಜಿ.ಕಂಟೋನ್ಮೆಂಟಿನ ರೆಸಿಡೆನ್ಸಿಯಲ್ಲಿ ಗುಮಾಸ್ತರಾಗಿದ್ದರು. ಆದರೆ ಸಾಹಿತ್ಯವ್ಯಾಸಂಗದಲ್ಲಿ ಅಣ್ಣಂದಿರ ಅನುಯಾಯಿಗಳು. ಅವರಿಗೆ ಪದ್ಯರಚನೆಯ ಶಕ್ತಿ ಸಹಜವಾಗಿ ಬಂದಿತ್ತು, 'ತಾಮಸ ಪ್ರಭು ಚರಿತಂ', 'ಗೋದಾಸ್ತವ', 'ಪ್ರೋಷಿತ ಪ್ರಿಯ ಸಮಾಗಮಂ' (The Hermit ಎಂಬ ಕವನದ ಅನುವಾದ, ೪೦ ಕಂದ ಪದ್ಯಗಳಲ್ಲಿದೆ) ಮೊದಲಾದ ಪದ್ಯ ಗ್ರಂಥಗಳನ್ನೂ 'ಪ್ರಿಂರೋಜ ವಿಜಯ' (ವಿಕಾರ್ ಆಫ್ ವೇಕ್ ಫೀಲ್ಡ್) ಮೊದಲಾದ ಗದ್ಯ ಗ್ರಂಥಗಳನ್ನೂ ಬರೆದಿದ್ದಾರೆ. 'ಉತ್ತರ ರಾಮ ಚರಿತೆ' ಯ ೩-೪ ಅಂಕಗಳು ಇವರಿಂದ ಅನುವಾದವಾಗಿ 'ಕರ್ಣಾಟಕ ಗ್ರಂಥಮಾಲೆ' ಯಲ್ಲಿ ಅಚ್ಚಾಗಿರುವಂತೆ ತಿಳಿದು ಬರುತ್ತದೆ. ಇವರು ಸ್ವಭಾವದಲ್ಲಿ ಸಾಧುಗಳು. ಇಂದಿನ "ಹೊಸ" ಹೊಸಗನ್ನಡದ ದಾರಿಗಳನ್ನು ನೋಡಿ ಅವರಿಗೆ ಮನಸ್ಸಿನಲ್ಲಿ ಕೊಂಚ ಕೆರಳಿಕೆ ಬಂದಿತ್ತು. "ಭಾಷೆ ಹೊಸ ಮಾರ್ಗಗಳನ್ನು ಹಿಡಿಯಲಿ; ಅದನ್ನು ಯಾರೂ ಬೇಡವೆನ್ನುವುದಿಲ್ಲ. ಆದರೆ ಆ ಮಾರ್ಗಗಳಿಗಾದರೂ ಒಂದು ನಿಯಮ, ಒಂದು ಕಟ್ಟುಪಾಡು, ಇರಬೇಡವೆ? ಹಳೆಯ ಮಾರ್ಗಗಳೆಲ್ಲ ತಪ್ಪೆ? ಅದರಲ್ಲೇನಿದೆ ಎಂಬುದನ್ನಾದರೂ ಈಗಿನವರು ನೋಡಿ ತಿಳಿದುಕೊಳ್ಳಬೇಡವೆ?" ಎಂದು ಪೇಚಾಡುತ್ತಿದ್ದರು.

ಎಸ್.ಜಿ. ನರಸಿಂಹಾಚಾರ್ಯರ ಛಾಯಾಚಿತ್ರ (ಫೋಟೋ) ಎಲ್ಲಿಯಾದರೂ ಇದ್ದೀತೆ, ಎಂದು ಬಹುಕಾಲದಿಂದ ಹುಡುಕುತ್ತಿದ್ದೇನೆ. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಅದು ಇಲ್ಲ. ಅವರ ಬಂಧುಗಳಲ್ಲಿಯೂ

ಸ್ನೇಹಿತರಲ್ಲಿಯೂ ಯಾರಾದರೂ ಅವರ ಛಾಯಾಚಿತ್ರವನ್ನು ಇಟ್ಟುಕೊಂಡಿದ್ದರೆ ಅವರು ಅದನ್ನು ನಾಡಿಗೆ ದೊರಕಿಸಿಕೊಡಬೇಕೆಂದು ಬೇಡಿಕೊಳ್ಳುತ್ತೇನೆ.

ಎಸ್.ಜಿ. ನರಸಿಂಹಾಚಾರ್ಯರ ಸ್ಮರಣೆ ನನ್ನ ಪಾಲಿಗೆ ಗುರುಸ್ಮರಣೆ. ಅದರಿಂದ ಚಿತ್ತಶುದ್ಧಿ, ಮನಶ್ಶಾಂತಿ.

೫

# ಎಚ್.ವಿ. ನಂಜುಂಡಯ್ಯನವರು

(ಜನನ: ೧೩ ಅಕ್ಟೋಬರ್ ೧೮೬೦. ಮರಣ: ೭ ಮೇ ೧೯೨೦)

ಶ್ರೀಮಾನ್ ಎಚ್.ವಿ. ನಂಜುಂಡಯ್ಯನವರ ಹೆಸರನ್ನು ನಾನು ವಿದ್ಯಾರ್ಥಿಯಾಗಿದ್ದಾಗಲೇ ಕೇಳಿದ್ದೆ. ಅವರು ಭಿಕ್ಷಾನ್ನವನ್ನುಂಡು, ಬೀದಿಯ ಲಾಂದ್ರದಲ್ಲಿ ಓದಿ, ಎಂ.ಎ., ಎಂ.ಎಲ್., ಪಾಸ್ ಮಾಡಿದವರೆಂದು ನನಗೆ ನಮ್ಮೂರಿನಲ್ಲಿ ಕಥೆ ಹೇಳಿದ್ದರು. ಅದು ಬರಿಯ ಕಥೆಯೆಂದು ಆಮೇಲೆ ನನಗೆ ಗೊತ್ತಾಯಿತು. ಶ್ರೀ ನಂಜುಂಡಯ್ಯನವರು ಐಶ್ವರ್ಯವಂತರಾಗಿ ಹುಟ್ಟಲಿಲ್ಲವೆಂಬುದು ನಿಜ. ಆದರೆ ಮಿಕ್ಕ ಕಥಾವಿವರಗಳು ನನ್ನಂಥವರ ಬೋಧನೆಗಾಗಿ ಯಾರೋ ಪುಣ್ಯಾತ್ಮರು ಮಾಡಿದ್ದ ಸ್ವಕಪೋಲಕಲ್ಪನೆ.

೧೯೦೭-೮ರ ವೇಳೆಗೆ ನಂಜುಂಡಯ್ಯನವರು ವಿದ್ವನ್ಮಂಡಲಿಗಳಲ್ಲಿಯೂ ಅಧಿಕಾರಿ ವರ್ಗದಲ್ಲಿಯೂ ಎಲ್ಲ ಸಭ್ಯ ಗೋಷ್ಠಿಗಳಲ್ಲಿಯೂ ಮನ್ನಣೆ ಪಡೆದಿದ್ದರು.

ಅವರು ೧೮೮೦ರಲ್ಲಿ, ತಮ್ಮ ೨೦ನೆಯ ವರ್ಷದಲ್ಲಿ, ಬಿ.ಎ., ಪಾಸ್ ಮಾಡಿದ ಮೇಲೆ ಕೊಳ್ಳೇಗಾಲದಲ್ಲಿ ಸಬ್-ರಿಜಿಸ್ಟ್ರಾರ್ ಆಗಿ ಉದ್ಯೋಗ ಪ್ರಾರಂಭಮಾಡಿದವರಂತೆ. ಆಮೇಲೆ ಮದ್ರಾಸಿನಲ್ಲಿ ಅಕೌಂಟೆಂಟ್-ಜನರಲ್ ಕಛೇರಿಯಲ್ಲಿ ಗುಮಾಸ್ತರಾಗಿದ್ದರಂತೆ. ಅದು ಕೊಂಚ ಕಾಲ. ೧೮೮೩ರಲ್ಲಿ ಅವರು ಬಿ.ಎಲ್., ಪ್ಯಾಸ್ ಮಾಡಿ ೧೮೮೫ರಲ್ಲಿ ಮೈಸೂರು ಸರಕಾರದಲ್ಲಿ ಉದ್ಯೋಗ ಸಂಪಾದನೆ ಮಾಡಿದರು. ಇಲ್ಲಿ ಅವರ ಮೊದಲ ಹುದ್ದೆ ನಂಜನಗೂಡಿನ ಮುನ್ಸಿಫರಾಗಿ. ಅದೇ ವರ್ಷ, ಎಂ.ಎ., ಪರೀಕ್ಷೆಯಲ್ಲಿ ತೇರ್ಗಡೆಯಾದರು. ಮಾರನೆಯ ವರ್ಷ (೧೮೮೬) ರೆವಿನ್ಯೂ ಇಲಾಖೆಗೆ ಬಂದರು. ಹಾಸನ, ಮೈಸೂರು, ಶಿವಮೊಗ್ಗಿಗಳಲ್ಲಿ ಕೆಲವು ಕಾಲ ಅಸಿಸ್ಟೆಂಟ್ ಕಮಿಷನರಾಗಿ ಕೆಲಸ ಮಾಡಿದ ಮೇಲೆ ೧೮೯೨ರಲ್ಲಿ ಜುಡಿಷಿಯಲ್ ಇಲಾಖೆಗೆ ಹಿಂದಿರುಗಿ ಬಂದು ಸಬ್-ಜಡ್ಜಿಯಾದರು. ೧೮೯೩ರಲ್ಲಿ ಎಂ.ಎಲ್., ಪರೀಕ್ಷೆಯಲ್ಲಿ ಉತ್ತೀರ್ಣರಾದರು. ೧೮೯೫ರಲ್ಲಿ ಮದ್ರಾಸು-ವಿಶ್ವವಿದ್ಯಾಲಯವು ಅವರನ್ನು ಫೆಲ್ಲೋ (ಸದಸ್ಯ) ಆಗಿ ಅಂಗೀಕರಿಸಿ ಗೌರವಿಸಿತು. ಅದೇ ಸುಮಾರಿನಲ್ಲಿ ಮೈಸೂರು ಸರಕಾರವು ಅವರನ್ನು ಅಂಡರ್-ಸೆಕ್ರೆಟರಿಯಾಗಿ ನಿಯಮಿಸಿಕೊಂಡಿತು. ೧೮೯೭ರಲ್ಲಿ ಅವರು ಶಿವಮೊಗ್ಗೆಯ ಡೆಪ್ಯುಟಿ

ಕಮಿಷನರ್ ಆದರು. ೧೯೦೧-೨ರಲ್ಲಿ ದಿವಾನ್ ಸರ್ ಪಿ. ಎನ್. ಕೃಷ್ಣಮೂರ್ತಿಗಳವರ ಕಾಲದಲ್ಲಿ ಸರಕಾರದ ಮುಖ್ಯ ಸೆಕ್ರೆಟರಿಯಾದರು. ಆ ತರುವಾಯ ಕ್ರಮವಾಗಿ ಚೀಫ್ ಕೋರ್ಟು ಜಡ್ಜಿ, ಕೌನ್ಸಿಲರ್ (ಉಪಮಂತ್ರಿ), ವೈಸ್‌ಚಾನ್ಸಲರ್-ಈ ಪದವಿಗಳಿಗೇರಿದರು.

ಅವರು ಉದ್ಯೋಗದ ಜವಾಬ್ದಾರಿ ಹೊತ್ತಿದ್ದಾಗಲೇ ದೊಡ್ಡ ದೊಡ್ಡ ಪರೀಕ್ಷೆಗಳಿಗೆ ಖಾಸಗಿಯಾಗಿ (ಪ್ರೈವೇಟ್) ಕುಳಿತು ಜಯಿಸಿದರು. ಆಗ ಕಾಲೇಜುಗಳಿಗೆ ಹೋಗಬೇಕಾದ ನಿರ್ಬಂಧವಿರಲಿಲ್ಲ. ಅಂಥ ವಿದ್ಯಾಸಾಹಸಗಳಿಗೆ ಈಗ ಅವಕಾಶವಿಲ್ಲ. ಈಗಿನ ವಿಶ್ವವಿದ್ಯಾಲಯಗಳು ಎಲ್ಲ ಸಾಹಸಗಳನ್ನೂ ತಪ್ಪಿಸಿವೆ. ಗಿಣಿಯ ಪಾಠ, ಗೂಡಿನಲ್ಲಿ ಓಟ-ಇವು ಇಂದಿನ ತಯಾರಿ.

ಅವರು ಸಬ್-ಜಡ್ಜಿ ಆಗಿದ್ದಾಗ ಅವರ ದೊಡ್ಡ ಯೋಗ್ಯತೆ ಜನದ ಗಮನಕ್ಕೆ ಬಂದಿರಬೇಕು. ಅವರು ಕೌನ್ಸಿಲರ್ ಆಗಿದ್ದಾಗ ಅರಳೇಪೇಟೆಯಲ್ಲಿಯ ಒಂದು ಮನೆಯನ್ನು "ಇದು ಸಬ್-ಜಡ್ಜಿ ನಂಜುಂಡಯ್ಯನವರ ಮನೆ" ಎಂದು ಜನ ತೋರಿಸುತ್ತಿದ್ದದ್ದು ನನಗೆ ಜ್ಞಾಪಕವಿದೆ.

ನಂಜುಂಡಯ್ಯನವರ ಸಾಹಿತ್ಯ ವ್ಯಾಸಂಗ ವಿಸ್ತಾರವಾದದ್ದು. ಕಾವ್ಯ ನಾಟಕಗಳನ್ನೂ ಕಥೆ ಕಾದಂಬರಿಗಳನ್ನೂ ಓದುವುದರಿಂದ ಬರುವ ಆನಂದವೇ ಜೀವನದಲ್ಲಿ ಅವರಿಗಿದ್ದ ಪರಮಾನಂದ. ಅವರಂತೆ ಪುಸ್ತಕ ಕೊಳ್ಳುತ್ತಿದ್ದವರು ಅವರ ಸಮಕಾಲೀನರಲ್ಲಿ ಬೆಂಗಳೂರಿನಲ್ಲಿ ಬಹುಶಃ ಇನ್ನೊಬ್ಬರಿರಲಿಲ್ಲವೆಂದು ತೋರುತ್ತದೆ.

ಕಾಲ್ಪನಿಕ ಸಾಹಿತ್ಯದ ಜೊತೆಗೆ ನಂಜುಂಡಯ್ಯನವರು ಕೆಲವು ಕ್ಲಿಷ್ಟಗಳಾದ ಶಾಸ್ತ್ರಗಳನ್ನೂ ಸ್ವಾಧೀನಪಡಿಸಿಕೊಂಡಿದ್ದರು. ನ್ಯಾಯಶಾಸ್ತ್ರ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ-ಈ ಮೂರೂ ಅವರಿಗೆ ಕರತಲಾಮಲಕವಾಗಿದ್ದವು.

ನಂಜುಂಡಯ್ಯನವರ ಭಾಷಾ ಪಾಂಡಿತ್ಯ ಬಹುಮುಖವಾದದ್ದು. ಇಂಗ್ಲೀಷ್, ಕನ್ನಡ, ಸಂಸ್ಕೃತ-ಈ ಭಾಷೆಗಳ ಜೊತೆಗೆ ಫ್ರೆಂಚ್ ಭಾಷೆಯನ್ನೂ ಅಭ್ಯಾಸ ಮಾಡಿಕೊಂಡಿದ್ದರು. ಫ್ರೆಂಚ್ ಮಹಾಕವಿ ವಿಕ್ಟರ್ ಹ್ಯೂಗೋ ಎಂಬಾತನ ಹಲವು ಕವಿತೆಗಳನ್ನು ನಂಜುಂಡಯ್ಯನವರು ತರ್ಜುಮೆ ಮಾಡಿದ್ದರು. ಆ ಕವನ ಸಂಗ್ರಹದ ಹೆಸರು 'ರಾತ್ರಿಯಲ್ಲಿ ಕಂಬನಿ' (Tears in the Night). ನಂಜುಂಡಯ್ಯನವರಿಗೆ ಪುತ್ರವಿಯೋಗ ದುಃಖವೊದಗಿದಾಗ ಹುಟ್ಟಿದ್ದು ಈ ಕೃತಿ. ಅದನ್ನು ಆ ಪುತ್ರ ಸ್ಮೃತಿಗಾಗಿ ಅಂಕಿತ

ಮಾಡಿದ್ದಾರೆ. ಅದರಲ್ಲಿಯ ಅವರ ಇಂಗ್ಲೀಷ್ ಶೈಲಿ ಲಲಿತವಾಗಿ ಭಾವಧ್ವನಿ ಪರಿಪೂರ್ಣವಾಗಿ ಮನೋಜ್ಞವಾಗಿದೆ.

ಇಂಗ್ಲೀಷ್ ಬರವಣಿಗೆ ನಂಜುಂಡಯ್ಯನವರಿಗೆ ಸ್ವಭಾಷೆಯಷ್ಟು ಸುಲಭವಾಗಿತ್ತು. ಸರಳವೂ ಗಂಭೀರವೂ ಯಥೋಚಿತವೂ ಆದ ಶೈಲಿಯಲ್ಲಿ ಅವರು ಹತ್ತಾರು ಪುಟಗಳನ್ನು ಧಾರಾಕಾರವಾಗಿ ತಪ್ಪಿಲ್ಲದೆ ಚಿತ್ತಿಲ್ಲದೆ ಬರೆಯುತ್ತಿದ್ದರು.

ನಂಜುಂಡಯ್ಯನವರ ಬಹಿರಂಗ ಭಾಷಣಗಳಲ್ಲಿ ಆ ಧೋರಣೆ ಇರಲಿಲ್ಲ. ಅವರು ವೇದಿಕೆಯ ಮೇಲೆ ನಿಂತಾಗ ವಿಷಯವನ್ನು ಆಲೋಚನೆ ಮಾಡುತ್ತ, ತುಟಿಯಿಂದ ಹೊರ ಹೊರಟ ಮಾತನ್ನು ಮರುಕ್ಷಣವೇ ತಿದ್ದುತ್ತ, ಹೇಳುವ ವಿಷಯವನ್ನು ಆದಷ್ಟು ಕರಾರುವಾಕ್ಕಾಗಿ ಹೇಳಬೇಕೆಂಬ ಚಿಂತೆಯಲ್ಲಿದ್ದಾಗ ಅವರ ಮಾತು ಸಾವಕಾಶಕ್ಕೆ ಬಿದ್ದು ರಭಸ ಕಾಣದೇ ಹೋಗುತ್ತಿತ್ತು.

ಅವರ ಸ್ವಭಾವ ರಭಸದ್ದಲ್ಲವೆಂದೇ-ರಭಸಕ್ಕೆ ಪ್ರತಿಯಾದದ್ದೆಂದೇ-ಹೇಳಬೇಕು.

ಇಂಗ್ಲೀಷಿನಲ್ಲಿ ಅವರು ಸಾರ್ವಜನಿಕವಾದ ಗ್ರಂಥ ಯಾವುದನ್ನೂ ಬರೆದಿಲ್ಲ. ಅನೇಕ ಸರಕಾರದ ವರದಿಗಳು, ಆಜ್ಞಾಪತ್ರಗಳು ಮಾತ್ರವಲ್ಲದೆ ಹತ್ತಾರು ಕಾನೂನು (ಶಾಸನ) ಪ್ರಬಂಧಗಳು ಅವರ ಇಂಗ್ಲೀಷ್ ಕೈವಾಡವನ್ನು ತೋರಿಸುತ್ತವೆ. ಹಾಗೆಯೇ ಅನೇಕ ಜಡ್ಜ್‌ಮೆಂಟುಗಳು ಅವರ ಇಂಗ್ಲೀಷ್ ಶೈಲಿಯನ್ನು ತೋರಿಸುತ್ತವೆ. ಇವುಗಳ ಜೊತೆಗೆ ಮೈಸೂರು ದೇಶದ ನಾನಾ ಜಾತಿ ಕುಲವರ್ಣನೆಯ ಪುಸ್ತಕಾವಳಿಯೊಂದನ್ನು (Ethnographical Survey) ಅವರು ಸಂಪಾದಿಸಿದ್ದಾರೆ. ಅವರು ಇಂಗ್ಲೀಷ್ ವರ್ತಮಾನ ಪತ್ರಿಕೆಗಳಿಗೆ ಲೇಖನಗಳನ್ನು ಬರೆದದ್ದೂ ಉಂಟು. ಇಂಡಿಯ ಸೆಕ್ರೆಟರಿಯಾದ ಮಾಂಟೆಗ್ಯು ೧೯೧೭ರಲ್ಲಿ ಇಂಡಿಯಕ್ಕೆ ಬಂದಿದ್ದಾಗ ನಮ್ಮ ರಾಜ ವ್ಯವಸ್ಥೆಯಲ್ಲಿ ಆಗಬೇಕಾಗಿದ್ದ ಪರಿಷ್ಕರಣೆಗಳು ಏನೆಂಬುದನ್ನು ಕುರಿತು ಎಚ್.ವಿ.ನಂಜುಂಡಯ್ಯನವರು ಒಂದು ಆವೇದನ ಪತ್ರಿಕೆ (Memorandum) ಯನ್ನು ತಯಾರು ಮಾಡಿ ಒಪ್ಪಿಸಿದರು. ಈ ಎಲ್ಲ ಬರವಣಿಗೆಗಳಿಂದಲೂ ಅವರಿಗಿದ್ದ ಭಾಷಾಸೌಲಭ್ಯವೂ ವಾಗ್ವಿಶದತೆಯೂ ಹೊರಪಡುತ್ತವೆ.

ನಂಜುಂಡಯ್ಯನವರು ಕನ್ನಡದಲ್ಲಿ 'ಲೇಖ್ಯ ಬೋಧಿನಿ', 'ವ್ಯವಹಾರ ದೀಪಿಕೆ'. 'ಅರ್ಥಶಾಸ್ತ್ರ' ಮೊದಲಾದ ಗ್ರಂಥಗಳನ್ನು ಬರೆದವರು. ಇದರಲ್ಲಿ ಮೊದಲನೆಯದು ಇಂಗ್ಲಿಷಿನಲ್ಲಿರುವಂಥ 'ಲೆಟರ್ ರೈಟರ್' ಎಂಬುದಕ್ಕೆ ಸಮಾನವಾದದ್ದು. ಅದು ಸಭ್ಯ ಮನುಷ್ಯನಾದವನೊಬ್ಬನು ಬಂಧುಮಿತ್ರರಿಗೂ

ಗುರುಹಿರಿಯರಿಗೂ ನಾನಾ ಸಂದರ್ಭಗಳಲ್ಲಿ ಬರೆಯಬೇಕೆನಿಸುವ ಕಾಗದ ಪತ್ರಗಳು ಹೇಗಿರಬೇಕೆಂಬುದನ್ನು ನಮ್ಮ ಸಾಂಪ್ರದಾಯಿಕವಾದ ಒಕ್ಕಣೆ ಮರ್ಯಾದೆಗಳೊಡನೆ-ಮಾದರಿಯ ಕಾಗದಗಳ ಮೂಲಕ-ತೋರಿಸಿ ಕೊಡುತ್ತದೆ. ಅದೇ ಪುಸ್ತಕದ ಮೂರನೆಯ ನಾಲ್ಕನೆಯ ಮುದ್ರಣಗಳಲ್ಲಿ ಮುಖ್ಯ ಮುಖ್ಯವಾದ ದಸ್ತಾವೇಜುಗಳ ಮಾದರಿ ರೂಪಗಳನ್ನು ಕೂಡ ಸೇರಿಸಿದ್ದರೆಂದು ನನ್ನ ಜ್ಞಾಪಕ. 'ವ್ಯವಹಾರ ದೀಪಿಕೆ' ಯಲ್ಲಿ ಕಾನೂನಿನ ರಚನೆ ಸರಕಾರದ ಆಡಳಿತಗಳು, ಕೋರ್ಟುಗಳ ನಡವಳಿಕೆ, ತೀರ್ಪು-ಇವೇ ಮೊದಲಾದ ನ್ಯಾಯ ಪರಿಪಾಲನೆಯ (ಜ್ಯೂರಿಸ್ ಪ್ರೂಡೆನ್ಸ್) ಕ್ರಮಗಳನ್ನು ವಿವರಿಸಿದ್ದರು. 'ಅರ್ಥಶಾಸ್ತ್ರ' ಗ್ರಂಥದಲ್ಲಿ ದೇಶದ ಸಂಪತ್ತಿನ ಉತ್ಪತ್ತಿ, ವಿಭಾಗ, ರಾಜ್ಯದ ಆದಾಯ ವ್ಯಯಗಳು, ನಾಣ್ಯದ ಚಲಾವಣೆ ಇವೇ ಮೊದಲಾದ ಆರ್ಥಿಕ ವಿಚಾರಗಳನ್ನು ಕುರಿತು ಬರೆದಿದ್ದರು. ಆ ಮೂರು ಜಾತಿಯ ಸಾಹಿತ್ಯದಲ್ಲಿಯೂ ನಂಜುಂಡಯ್ಯನವರ ಗ್ರಂಥಗಳೇ ಕನ್ನಡದಲ್ಲಿ ಮೊದಲನೆಯವೆಂದು ನನ್ನ ತಿಳಿವಳಿಕೆ.

ನನಗೆ ನಂಜುಂಡಯ್ಯನವರ ಪರಿಚಯವಾದದ್ದು ಹೇಗೋ ಎಲ್ಲೋ ಜ್ಞಾಪಕವಿಲ್ಲ. ಆದರೆ ಮೊದಲು ಭೇಟಿಯಾದಾಗಿನಿಂದ ಅವರು ಚಿರಪರಿಚಿತರ ಸಲಿಗೆಯಿಂದ ನಡೆದುಕೊಂಡದ್ದು ಮಾತ್ರ ಜ್ಞಾಪಕವಿದೆ. ನನ್ನ ಹಿರಿಯ ಬಂಧುಗಳಾದ ಸಬ್-ಜಡ್ಜಿ ಲಕ್ಷ್ಮೀನಾರಣಪ್ಪನವರು ನಂಜುಂಡಯ್ಯನವರಿಗೆ ತುಂಬಾ ಬೇಕಾದವರಾಗಿದ್ದರು. ಬಹುಶಃ ಆ ಮೂಲಕ ನಂಜುಂಡಯ್ಯನವರಿಗೆ ನನ್ನ ವಿಚಾರ ಅಷ್ಟಿಷ್ಟು ಗೊತ್ತಾಗಿದ್ದರೂ ಇರಬಹುದು.

ನನಗೆ ಅವರಲ್ಲಿ ಬಳಕೆ ಬೆಳೆದದ್ದು ೧೯೧೫ ರಿಂದೀಚೆಗೆ. ಆ ವರ್ಷ ಕರ್ಣಾಟಕ ಸಾಹಿತ್ಯ ಪರಿಷತ್ತು ಸ್ಥಾಪಿತವಾಯಿತು. ಅದಕ್ಕೆ ಹಿಂದೆ ಸುಮಾರು ಒಂದು ವರ್ಷ ಆ ಸಂಸ್ಥೆಯ ಯೋಜನೆ ವಿಶ್ವೇಶ್ವರಯ್ಯನವರ ಸರಕಾರದ ಯೋಚನೆಯಲ್ಲಿತ್ತು. ಆಗ ಎಕನಾಮಿಕ್ ಕಾನ್ಫರೆನ್ಸ್ ಎಂಬ ಮಹಾ ಸಂಸ್ಥೆಯೊಂದು ನಡೆಯುತ್ತಿತ್ತಷ್ಟೆ? ಅದರ ವಿದ್ಯಾಸಮಿತಿಯಲ್ಲಿ ಕನ್ನಡ ಸಾಹಿತ್ಯ ಸಂಸ್ಥೆಗೆ ಸಂಬಂಧಪಟ್ಟ ಆಲೋಚನೆ ನಡೆಯುತ್ತಿತ್ತು. ಆ ವಿಚಾರದಲ್ಲಿ ನಾನು ಕೊಂಚ ಉತ್ಸಾಹ ತೋರಿಸಿದ್ದೆನಾದದ್ದರಿಂದಲೋ ಏನೋ ಸಂಸ್ಥೆಯ ಸ್ಥಾಪನೆಯ ಕಾಲದಲ್ಲಿ ಅದರ ಮುಖ್ಯಸ್ಥರು ನನಗೆ ಒಂದಿಷ್ಟು ಪ್ರಾಧಾನ್ಯವನ್ನು ಕೊಟ್ಟಿದ್ದರು. ಆ ಮುಖ್ಯಸ್ಥರು ಮೂರು ಮಂದಿ: ಎಚ್.ವಿ.ನಂಜುಂಡಯ್ಯನವರು, ಕರ್ಪೂರ ಶ್ರೀನಿವಾಸರಾಯರು, ಡಾ || ಪಿ.ಎಸ್. ಅಚ್ಯುತರಾಯರವರು. ಈಗಣ ಇಂಟರ್‌ಮೀಡಿಯೆಟ್ ಕಾಲೇಜಿನ ಸಭಾ ಭವನದಲ್ಲಿ ಪರಿಷತ್ತು ಸ್ಥಾಪಿತವಾಯಿತು. ಅದಕ್ಕೆ ಬೇಕಾದ ನಿಯಮಾವಳಿಗಳನ್ನು ರಚಿಸುವ ಸಮಿತಿಯಲ್ಲಿಯೂ ಒಂದೆರಡು

ಉಪಸಮಿತಿಗಳಲ್ಲಿಯೂ ನನ್ನನ್ನು ಸೇರಿಸಿದ್ದರು. ಈ ಕಾರ್ಯಸಂದರ್ಭದಲ್ಲಿ ನಾನು ನಂಜುಂಡಯ್ಯನವರನ್ನು ಪದೇಪದೇ ಕಾಣುವ ಅವಕಾಶ ದೊರಕಿತು.

ನನಗೆ ನಂಜುಂಡಯ್ಯನವರಲ್ಲಿ ಮುಖ್ಯವಾಗಿ ಕಂಡುಬಂದ ಗುಣಗಳು: (೧) ಭಾಷೆಯಲ್ಲಿ ಸರಳತೆ ಮತ್ತು ಸಮಂಜಸತೆ, (೨)ಕಾರ್ಯತತ್ಪರ ಬುದ್ಧಿ-ಎಂದರೆ ಯಾವ ಬುದ್ಧಿಗುಣವನ್ನು ಇಂಗ್ಲಿಷಿನಲ್ಲಿ Common sense ಎಂದು ಹೇಳುತ್ತಾರೋ ಆ ಸಾಧ್ಯಾಸಾಧ್ಯವಿವೇಕ, (೩) ಸ್ನೇಹತತ್ಪರತೆ ಮತ್ತು ಕರುಣೆ, (೪) ಹಾಸ್ಯರಸಿಕತೆ, (೫) ವಿಚಾರಧೈರ್ಯ.

ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ದಿವಸ ಅಧ್ಯಕ್ಷರಾಗಿದ್ದು ಪ್ರಾರಂಭ ಭಾಷಣ ಮಾಡಿದವರು ನಂಜುಂಡಯ್ಯನವರು. ಅವರ ಆ ಭಾಷಣ ಇಂಗ್ಲಿಷಿನಲ್ಲಿತ್ತು. ಆ ಹೊತ್ತು ತುಂಬು ಸಭೆ. ಧಾರವಾಡ, ಬೆಳಗಾವಿ, ಮಂಗಳೂರು, ಸೋಲಾಪುರ, ಬಳ್ಳಾರಿ, ಬಿಜಾಪುರ, ಮೊದಲಾದ ಕಡೆಗಳಿಂದ ಪ್ರಸಿದ್ಧ ವಿದ್ವಾಂಸರುಗಳೂ ಪ್ರತಿನಿಧಿ ಪುರುಷರುಗಳೂ ದಯಮಾಡಿಸಿದ್ದರು. ಕನ್ನಡ ಸಾಹಿತ್ಯ ಸಮ್ಮೇಳನಗಳನ್ನು ಅಂದಿನಿಂದ ಇಂದಿನವರೆಗೂ ನೋಡಿರುವ ನನಗೆ ಅದಕ್ಕೆ ಸಮನಾದ ವಿದ್ವಜ್ಜನ ಪ್ರತಿನಿಧಿ ಸಭೆ ಇನ್ನೊಂದಾಗಿಲ್ಲವೆಂದೆನಿಸಿದೆ. ನಮ್ಮ ಮೈಸೂರು ಸಂಸ್ಥಾನದ ಗಣ್ಯಜನ ಪ್ರಪಂಚವೆಲ್ಲ ಅಲ್ಲಿ ಸೇರಿತ್ತು. ಸಭಿಕರೆಲ್ಲ ಕುತೂಹಲಭರಿತರಾಗಿ ಕಾದಿರುವಾಗ ಅಧ್ಯಕ್ಷರೆದ್ದು ನಿಂತು ತಮ್ಮ ಇಂಗ್ಲೀಷ್ ಭಾಷಣವನ್ನು ಓದಲು ಉಪಕ್ರಮಿಸಿದರು. ಆಗ ಅವರೆದುರಿಗೆ ಮೊದಲ ಸಾಲಿನ ಒಂದು ಕೊನೆಯಲ್ಲಿ ಕುಳಿತಿದ್ದ ಶ್ರೀಮಾನ್ ಬೆಳ್ಳಾವೆ ವೆಂಕಟನಾರಣಪ್ಪನವರು ನನ್ನ ಕಡೆ ತಿರುಗಿ- "ಇದೇನಪ್ಪ, ನಾನ್ಸೆನ್ಸ್. ಶುದ್ಧ ನಾನ್ಸೆನ್ಸ್ ಅಷ್ಟೆ" ಎಂದು ಉಸುರಿದರು. ಅದು ನಂಜುಂಡಯ್ಯನವರ ಕಿವಿಗೆ ತಾಕಿರಬೇಕು. ಅವರ ಮುಖದ ಮೇಲೆ ಮುಗುಳು ನಗೆ ಸುಳಿಯಿತು. ಅವರು ಭಾಷಣವನ್ನು ಓದಿ ಮುಗಿಸಿದರು. ಆ ಹೊತ್ತಿನ ಸಭೆ ಮುಕ್ತಾಯವಾಗಿ ಜನ ಚದರುತ್ತಿದ್ದ ಕಾಲದಲ್ಲಿ ನಂಜುಂಡಯ್ಯನವರು ವೆಂಕಟನಾರಣಪ್ಪನವರ ಬಳಿಗೆ ಬಂದು- "ನಾನ್ಸೆನ್ಸ್' ಯಾವ ಭಾಷೆ?" ಎಂದು ಕೇಳಿದರು. ವೆಂಕಟನಾರಣಪ್ಪನವರಿಗೆ ಒಂದು ಕ್ಷಣ ಅರ್ಥವಾಗಲಿಲ್ಲ. ಉಪನ್ಯಾಸ ಇಂಗ್ಲಿಷಿನಲ್ಲಿದ್ದರೂ ಅದರಲ್ಲಿದ್ದ ವಿಷಯ ಗಂಭೀರವಾಗಿ, ಬೋಧಪರಿಪೂರ್ಣವಾಗಿ, ಮನೋಹರವಾಗಿದ್ದದ್ದರಿಂದ ಅದರ ಸ್ವಾರಸ್ಯಾನುಭವದಲ್ಲಿ ವೆಂಕಟನಾರಣಪ್ಪನವರಿಗೆ ತಾವು ಆಡಿದ್ದ ಆಕ್ಷೇಪಣೆಯ ಮಾತು ಮರೆತುಹೋಗಿತ್ತು. ಅವರಿಗೆ ಜ್ಞಾಪಕ ಕೊಡುವ ಉದ್ದೇಶದಿಂದ ನಂಜುಂಡಯ್ಯನವರು "ಕನ್ನಡದಲ್ಲಿ ನಾನ್ಸೆನ್ಸ್ ಇಲ್ಲವೊ?" ಎಂದು ಕೇಳಿದರು. ಆಗ ವೆಂಕಟನಾರಣಪ್ಪನವರಿಗೆ ತಾವು ಉಸುರಿದ್ದ ಮಾತು ನೆನಪಿಗೆ ಬಂತು. ಆಗ ಅವರು ಹೇಳಿದರು: "ತಮ್ಮ

ಉಪನ್ಯಾಸ ಅಮೋಘವಾಗಿತ್ತು. ಆದರೆ ಕನ್ನಡದಲ್ಲಿ ಇದ್ದಿದ್ದರೆ ಮತ್ತೂ ಚೆನ್ನಾಗಿರುತ್ತಿತ್ತು ಎಂದು ನನ್ನ ಚಪಲ" ಎಂದರು. ನಂಜುಂಡಯ್ಯನವರು- "ಆಗಬಹುದಾಗಿತ್ತು. ಇನ್ನು ಮೇಲೆ ಹಾಗೇ ಮಾಡೋಣಂತೆ" ಎಂದರು. ಇಬ್ಬರೂ ನಗುತ್ತ ಆ ಪ್ರಕರಣವನ್ನು ಮುಗಿಸಿದರು.

ಇದಾದ ಮಾರನೆಯ ದಿವಸ ಸಂಸ್ಥೆಗೆ ಹೆಸರೇನಿಡಬೇಕೆಂಬುದು ಚರ್ಚೆಗೆ ಬಂತು. ಹತ್ತಾರುಮಂದಿ ಪಂಡಿತರುಗಳು ಬೇರೆ ಬೇರೆ ಹೆಸರುಗಳನ್ನು ಸೂಚಿಸಿದರು. "ಕರ್ಣಾಟಕ ಸಂಸದ", "ಕರ್ಣಾಟಕ ಮಹಾ ಸಭಾ", "ಕರ್ಣಾಟಕೀ ಪರಿಷದ", "ಕನ್ನಡ ಕೂಟ", "ಕನ್ನಡಿಗರ ಕೋಟೆ" -ಇತ್ಯಾದಿಯಾಗಿ ಚಿತ್ರವಿಚಿತ್ರ ಸಲಹೆಗಳೂ ಆ ಸಲಹೆಗಳನ್ನು ಪೋಷಿಸಲು ಉದ್ದುದ್ದನೆಯ ಭಾಷಣಗಳು ನಡೆದವು. ಅರ್ಧ ದಿನವೆಲ್ಲ ಈ ಹೆಸರಿನ ಚರ್ಚೆಯಾಯಿತು. ಮಾರನೆಯ ದಿನದ ಸಭೆಯಲ್ಲಿ ಚರ್ಚೆ ಮುಂದುವರಿಯಿತು. ಸುಮಾರು ಬೆಳಿಗ್ಗೆ ೧೦ ಘಂಟೆ ಸಮಯದಲ್ಲಿ ನಂಜುಂಡಯ್ಯನವರು- "ಇನ್ನು ನಾವು ಒಂದು ನಿರ್ಧಾರಕ್ಕೆ ಬರಬೇಕು. ಹೆಸರಿನ ಮೇಲೆ ಇಷ್ಟು ಶಕ್ತಿ ವ್ಯಯಮಾಡಿದವರು ಕೆಲಸಕ್ಕಾಗಿ ಸ್ವಲ್ಪ ಶಕ್ತಿ ಉಳಿಸಿಕೊಳ್ಳಬೇಡವೆ? ಹನ್ನೊಂದು ಘಂಟೆಗೆ ಚರ್ಚೆಯನ್ನು ನಿಲ್ಲಿಸಿ ಸಲಹೆಯಾದ ಹೆಸರುಗಳ ಮೇಲೆ ಅಭಿಮತಗಳನ್ನು (Vote) ತೆಗೆದುಕೊಳ್ಳುತ್ತೇನೆ. ಹನ್ನೆರಡು ಘಂಟೆಯೊಳಗಾಗಿ ಹೆಸರು ನಿಶ್ಚಿತವಾಗಿ ಬೆಳಗಿನ ಸಭೆ ಮುಗಿಯಬೇಕು" ಎಂದು ಹೇಳಿ ಅದರಂತೆ ಕಾರ್ಯ ನಡಸಿದರು. ಹಾಗೆ ಸಿದ್ಧವಾದದ್ದು "ಕರ್ಣಾಟಕ ಸಾಹಿತ್ಯ ಪರಿಷತ್ತು" ಎಂಬ ಹೆಸರು. ಅಲ್ಲಿಂದ ೨೦-೨೫ ವರ್ಷ ಕಳೆದ ಮೇಲೆ ಅದರಲ್ಲಿಯ "ಣ" ಕಾರವನ್ನು "ನ" ಕಾರ ಮಾಡಿದವರು ಯಾರೆಂಬುದು ವಾದಗ್ರಸ್ತವಾದ ಸಂಗತಿ. ಆ ಬದಲಾವಣೆಯನ್ನು ವಾದರಂಗಕ್ಕೆಳೆದವರು ವೆಂಕಟನಾರಣಪ್ಪನವರು. ಆ ವಿವಾದದ ಫಲಿತಾಂಶವು ಕರ್ಣಾಟಕ ಎಂಬ ಪದವೇ ಆ ಸಂಸ್ಥೆಯ ಹೆಸರಿನಿಂದ ಲುಪ್ತವಾಗಿ, ಅದರ ಸ್ಥಾನದಲ್ಲಿ ಕನ್ನಡ ಎಂಬುದು ಬಂದದ್ದು. ಅದು ಸದ್ಯಕ್ಕೆ ಹಾಗಿರಲಿ.

ಪರಿಷತ್ತಿನ ಸ್ಥಾಪನ ಸಭೆಯು ನಡೆಯುತ್ತಿದ್ದಾಗ, -ಬಹುಶಃ ಎರಡನೆಯ ದಿನ ಸಂಜೆ, -ಪ್ರಥಮ ಪಂಕ್ತಿಯಲ್ಲಿ ಕುಳಿತಿದ್ದ ಎಂ.ಎಸ್. ಪುಟ್ಟಣ್ಣನವರಿಗೂ ಅಗ್ರಸ್ಥಾನದಲ್ಲಿದ್ದ ನಂಜುಂಡಯ್ಯನವರಿಗೂ ಏನೋ ವಾಗ್ವಾದ ನಡೆಯಿತು. ನಂಜುಂಡಯ್ಯನವರಾಡಿದ ಯಾವುದೋ ಮಾತಿನಿಂದ ಪುಟ್ಟಣ್ಣನವರಿಗೆ ಕೋಪ ಬಂತು. ಅವರು ಸರ್ರನೆ ಎದ್ದು ಸಭೆಯನ್ನು ಬಿಟ್ಟು ಹೊರಟುಹೋದರು. ನಂಜುಂಡಯ್ಯನವರು ಯಥಾಪ್ರಕಾರ ಮುಗುಳ್ನಗೆ ನಗುತ್ತಿದ್ದರು. ವೆಂಕಟನಾರಣಪ್ಪನವರು ಅವರ ಬಳಿಗೆ ಹೋಗಿ "ಪುಟ್ಟಣ್ಣನವರನ್ನು ಕರೆತರುತ್ತೇನೆ" ಎಂದರು. ನಂಜುಂಡಯ್ಯನವರು- "ನಮ್ಮ ಪುಟ್ಟಣ್ಣನೇ! ನಾನೇ ಕರೆತರುತ್ತೇನೆ" ಎಂದು ಉತ್ತರ ಹೇಳಿದರು. ಅಲ್ಲಿಂದ ೧೫-೨೦ ನಿಮಿಷಗಳಿಗೆ ಸಭೆ ಮುಗಿಯಿತು. ನಂಜುಂಡಯ್ಯನವರು ತಮ್ಮ

ಗಾಡಿಯಲ್ಲಿ ಕುಳಿತು ಉದ್ದಕ್ಕೆ ಪುಟ್ಟಣ್ಣನವರ ಮನೆಗೆ ಹೋದರು. ಅವರಿಬ್ಬರೂ ತುಂಬಾ ಮಿತ್ರರು; ಒಬ್ಬರ ಹೃದಯವನ್ನು ಇನ್ನೊಬ್ಬರು ಬಲ್ಲವರು. ಮಾರನೆಯ ದಿನ ಪುಟ್ಟಣ್ಣನವರು ನಗು ಮುಖದಿಂದ ಸಭೆಗೆ ಬಂದು, ಹಿಂದಿನ ದಿನ ಯಾವ ವಿಶೇಷವೂ ನಡೆದಿರಲಿಲ್ಲವೆಂಬಂತೆ ನಡೆದುಕೊಂಡರು.

ನಂಜುಂಡಯ್ಯನವರು ಕೆಲವು ಕಾಲ ಶಿವಮೊಗ್ಗಿಯಲ್ಲಿದ್ದಾಗ ಬೆಂಗಳೂರಿನಲ್ಲಿ ಒಂದು ಪ್ರಸಂಗ ನಡೆಯಿತು. ಒಬ್ಬಾನೊಬ್ಬ ಯುವಕ ಬಿ.ಎ., ಪ್ಯಾಸ್ ಮಾಡಿ ಸರಕಾರದ ಚಾಕರಿಗಾಗಿ ಒದ್ದಾಡುತ್ತಿದ್ದ. ಆತ ಹೈಕೋರ್ಟಿಗೂ ಅರ್ಜಿ ಹಾಕಿದ್ದ. ಒಂದಾನೊಂದು ದಿನ ಹೈಕೋರ್ಟಿನ ಕಾರ್ಯಾಲಯದ ಮುಖ್ಯಾಧಿಕಾರಿಯು ಆತನನ್ನು ಇಂಟರ್‌ವ್ಯೂ (ಪ್ರತ್ಯಕ್ಷ ಪರೀಕ್ಷೆ) ಗಾಗಿ ಬರಬೇಕೆಂದು ಆಹ್ವಾನಿಸಿದ. ಆ ಯುವಕನು ಬಂದು ತನ್ನ ಅಹವಾಲನ್ನು ಹೇಳಿಕೊಂಡ. ಆ ಅಧಿಕಾರಿಯು "ನೀವು ಯಾವ ಜಾತಿಯವರು?" ಎಂದು ಕೇಳಿದ.

ಯುವಕ: "ನಾನು ಶ್ರೌತಿ."

ಅಧಿಕಾರಿ: "ಓಹೋ, ಹಾಗೆಯೇ? ನಿಮ್ಮ ಜನ ಯಾರಾದರೂ ದೊಡ್ಡ ಅಧಿಕಾರಗಳಲ್ಲಿದ್ದಾರೋ?"

ಯುವಕ: "ಯಾರೂ ಇಲ್ಲ."

ಅಧಿಕಾರಿ: "ಹಾಗೆಯೇ? ಅಯ್ಯೋ ಪಾಪ. ಇರಲಿ ಮುಂದಿನ ಶನಿವಾರ ಬನ್ನಿ, ನೋಡಿ ಹೇಳುತ್ತೇನೆ."

ಯುವಕನು ಹೊರಟುಹೋದ ಮೇಲೆ ಆ ಅಧಿಕಾರಿಯು ಆಗ ಅದೇ ಚೀಫ್ ಕೋರ್ಟಿನಲ್ಲಿ ತನ್ನ ಸಹದ್ಯೋಗಿಯಾಗಿದ್ದ ಎಂ.ಎಸ್.ಪುಟ್ಟಣ್ಣನವರನ್ನು ಕರೆದು ಕೇಳಿದ:

ಅಧಿಕಾರಿ: "ಶ್ರೌತಿ ಎಂದರೆ ಯಾವ ಜನ ಸ್ವಾಮಿ?"

ಪುಟ್ಟಣ್ಣನವರು: "ಶ್ರೌತಿ ಅಂದರೆ ಶ್ರೋತ್ರಿಯ. ಶ್ರುತಿ ಎಂದರೆ ವೇದ. ಬ್ರಾಹ್ಮಣರಲ್ಲಿ ವೇದಾಧ್ಯಯನಸಂಪನ್ನರಾಗಿ ವೈದಿಕ ಕರ್ಮನಿಷ್ಠೆ ಇಟ್ಟುಕೊಂಡಿರುವವರನ್ನು ಶ್ರೋತ್ರಿಯರು ಎಂದು ಕರೆಯುವುದು ಪದ್ಧತಿ."

ಅಧಿಕಾರಿ: "ಹಾಗಾದರೆ ಅವರು ಬ್ರಾಹ್ಮಣರೇ ಅಂತನ್ನಿ?"

ಪುಟ್ಟಣ್ಣ: "ಅಲ್ಲವೆ? ಅದರಲ್ಲಿಯೂ ಉತ್ತಮ ದರ್ಜೆಯ ಬ್ರಾಹ್ಮಣರು."

ಅಧಿಕಾರಿ: "ಸರಿ, ಸರಿ. ಅದು ನನಗೆ ತಿಳಿದಿರಲಿಲ್ಲ, ಸುಮ್ಮನೆ ಕೇಳಿದೆ." ಹೀಗೆ ಮಾತು ಮುಗಿಯಿತು.

ಮುಂದಿನ ಶನಿವಾರ ಆ ಯುವಕ ಬಂದು ಆ ಅಧಿಕಾರಿಯನ್ನು ಕಂಡ. ಅದೇ ದಿವಸ ಆ ಅಧಿಕಾರಿ ಇನ್ನೊಬ್ಬ ಉಮೇದುವಾರನನ್ನು ಪ್ರತ್ಯಕ್ಷ ಪರೀಕ್ಷೆಗಾಗಿ ಬರಮಾಡಿಕೊಂಡಿದ್ದ. ಮೊದಲು ಶ್ರೌತಿಯನ್ನು ಕುರಿತು- "ನಿಮಗೆ ಕನ್ನಡ ಓದುವುದಕ್ಕೆ ಬರುತ್ತದೆಯೆ?" ಎಂದು ಕೇಳಿದ. ಆತ "ನನ್ನ ಮನೆಯ ಮಾತು ಕನ್ನಡ. ಕನ್ನಡ ಬಾರದೆ ಏನು?" ಎಂದ. ಅಧಿಕಾರಿಯು- "ಹಾಗಾದರೆ ಈ ಕಾಗದವನ್ನು ಓದಿ; ನೋಡೋಣ" ಎಂದು ಒಂದು ಮೋಡಿ ಅಕ್ಷರದ ಬರಹವನ್ನು ಆ ಶ್ರೌತಿಯ ಕೈಗೆ ಕೊಟ್ಟ. ಶ್ರೌತಿಗೆ ಆ ಲಿಪಿಯನ್ನು ಓದುವುದು ಕೊಂಚ ಕಷ್ಟವಾಯಿತು. ಅಕ್ಷರಗಳು ಜಡೆ ಜಡೆಯಾಗಿ ಹೆಣೆದುಕೊಂಡಿದ್ದದ್ದರಿಂದ ತಡವರಿಸುವಂತಾಯಿತು.

ಅಧಿಕಾರಿಯು ಅದನ್ನೇ ನೆವಮಾಡಿಕೊಂಡು "ಏನ್ರೀ, ಕನ್ನಡ ಮನೆಯ ಮಾತು ಅಂತೀರಿ, ಕಾಗದ ಓದುವುದಕ್ಕೆ ಬರುವುದಿಲ್ಲವಲ್ಲ!" ಎಂದು ಹೇಳಿ, ಅದೇ ಕೆಲಸಕ್ಕೆ ಉಮೇದುವಾರನಾಗಿ ಬಂದಿದ್ದ ಇನ್ನೊಬ್ಬಾತನ ಕಡೆ ತಿರುಗಿ, ಆತನ ಕೈಗೆ ಇನ್ನೊಂದು ಕಾಗದವನ್ನು ಕೊಟ್ಟು ಓದ ಹೇಳಿದ. ಆ ಇನ್ನೊಬ್ಬ ಉಮೇದುವಾರನೂ ಯುವಕನೇ; ಬಿ.ಎ., ಪ್ಯಾಸ್ ಮಾಡಿದ್ದವನೇ, ಜಾತಿ ಮಾತ್ರ ಬೇರೆ. ಆತನು ತನ್ನ ಕೈಗೆ ಬಂದ ಕಾಗದವನ್ನು ಧಾರೆಯಾಗಿ ಸುಲಭವಾಗಿ ಓದಿಬಿಟ್ಟ. ಚಾಕರಿ ಆತನಿಗೆ ದೊರೆಯಿತು.

ಆ ಅಧಿಕಾರಿ ಪುಟ್ಟಣ್ಣನವರಿಂದ ಅರ್ಥ ತಿಳಿದುಕೊಂಡಿದ್ದ ಸಂಗತಿ ಶ್ರೌತಿಗೆ ಹೇಗೋ ಗೊತ್ತಾಯಿತು. ತನ್ನ ಪಾಡು ಹೀಗಾದದ್ದಕ್ಕೆ ಪುಟ್ಟಣ್ಣನವರು ಕಾರಣವಾಗಿರಬೇಕೆಂದು ಆತ ಭಾವಿಸಿಕೊಂಡು ಅವರ ಮೇಲೆ ಆಗ್ರಹಕಾರಿದನಂತೆ. ಪುಟ್ಟಣ್ಣನವರಿಗಾದರೋ ಆ ಶ್ರೌತಿ ಯಾರೆಂಬುದೂ ಆತನು ಚಾಕರಿಗಾಗಿ ಪ್ರಯತ್ನಪಟ್ಟಿದ್ದನೆಂಬುದೂ ಏನೇನೂ ಗೊತ್ತಿರಲಿಲ್ಲ. ಅದರ ಸುಳಿವನ್ನು ಕೂಡ ಅವರು ಅರಿಯರು. ಶ್ರೌತಿಗಳಿಗೆ ಪುಟ್ಟಣ್ಣನವರ ಮೇಲೆ ಬಂದಿದ್ದ ಭ್ರಾಂತಿಮೂಲವಾದ ಆಗ್ರಹದ ಸಮಾಚಾರ ನಂಜುಂಡಯ್ಯನವರಿಗೆ ತಿಳಿಯಿತು. ಆಗ ನಂಜುಂಡಯ್ಯನವರು ಪುಟ್ಟಣ್ಣನವರಿಗೆ ಒಂದು ಕಾಗದ ಬರೆದು ಅದರಲ್ಲಿ ಹೀಗೆ ಹೇಳಿದರು: "ಶ್ರೌತಿಗಳಿಗೆ ನಿಮ್ಮ ಮೇಲೆ ಕೋಪ ಬಂದದ್ದು ಸಹಜವಾಗಿಯೇ ಇದೆ. ನಿಮ್ಮನ್ನು ಆ ಅಧಿಕಾರಿ ಅರ್ಥವಿವರಣೆ ಕೇಳಿದಾಗ ನೀವು ಬೇರೆ ಅರ್ಥವನ್ನು ಯಾಕೆ ಹೇಳಲಿಲ್ಲ? ಶ್ರುತಿ ಎಂದರೆ ಮೇಳದಲ್ಲಿ ಹೊರಡುವ ಒಂದು ಜೊತೆಯ ಶಬ್ದ. ಶ್ರುತಿ ಹಿಡಿಯುವುದು ಅಂದರೆ ತುತ್ತೂ ಎಂದು

ಓಲಗ ಊದುವುದು. ಆದಕಾರಣ ಶ್ರೌತಿ ಎಂದರೆ ಬಾಜಾ ಬಜಂತ್ರಿಯವರು. ಹೀಗೆಂದು ನೀವು ಅರ್ಥ ಹೇಳಬೇಕಾಗಿತ್ತು. ಹೀಗೆ ಹೇಳಿದ್ದಿದ್ದರೆ ಆತನಿಗೆ ಆ ಚಾಕರಿ ಸಿಕ್ಕುತ್ತಿತ್ತು. ನೀವು ಅದನ್ನು ತಪ್ಪಿಸಿದಿರಲ್ಲ! ಚಾಕರಿ ತಪ್ಪಿಸಿ ಜಾತಿ ಉಳಿಸಿದರೆ ಏನಾಯಿತು?"

ನಂಜುಂಡಯ್ಯನವರು ಶಿವಮೊಗ್ಗಿಯಲ್ಲಿದ್ದಾಗ ಅಲ್ಲಿದ್ದ ಒಬ್ಬ ಉಪಾಧ್ಯಾಯರಿಗೆ ಅಲ್ಲಿಂದ ವರ್ಗವಾಯಿತು. ಆ ಉಪಾಧ್ಯಾಯರು ದೊಡ್ಡ ವಿದ್ವಾಂಸರು, ಪರಮ ಸಭ್ಯರು ಮತ್ತು ಉತ್ತಮ ಬೋಧಕರು; ಸರ್ವಜನ ಪ್ರಿಯರಾಗಿ ಮಾನ್ಯರಾಗಿದ್ದವರು. ಅವರಿಗೆ ಗೌರವಮಾಡಲು ಆ ಊರಿನ ಮಹಾಜನರು ಒಂದು ಸಂತೋಷಕೂಟವನ್ನು ಏರ್ಪಡಿಸಿದರು. ಆ ಕೂಟಕ್ಕೆ ನಂಜುಂಡಯ್ಯನವರನ್ನು ಕರೆದಿದ್ದರು, ಅವರು ಸಂತೋಷದಿಂದ ಹೋಗಿದ್ದರು. ಮಾರನೆಯದಿನ ಒಬ್ಬಾನೊಬ್ಬ ಮಿತ್ರರು-ಅವರು ಅಲ್ಲಿ ಜಡ್ಜಿಯಾಗಿದ್ದವರು-ನಂಜುಂಡಯ್ಯನವರನ್ನು ಕುರಿತು- "ಏನು, ನಿನ್ನೆ ಅಲ್ಲಿಗೆ ಹೋಗಿದ್ದಿರಂತೆ?" ಎಂದು ಕೇಳಿದರು.

ನಂ: "ಹೌದು. ನೀವೇಕೆ ಬರಲಿಲ್ಲ?"

ಸ್ನೇ: "ಅಂಥ ಕಡೆಗೇ ಬರೋದು? ಆ ಮನುಷ್ಯ ಇಬ್ಬರು ಹೆಂಡಿರನ್ನು ಮಾಡಿಕೊಂಡಿದ್ದಾನೆ-ಒಂದು ಬದುಕಿರೋವಾಗ ಇನ್ನೊಂದನ್ನು" ಎಂದು ಆಗ್ರಹ ಧ್ವನಿಯಲ್ಲಿ ಉತ್ತರ ಹೇಳಿದರು.

ನಂಜುಂಡಯ್ಯನವರು: "ಓಹೋ, ಆತ ಮದುವೆಮಾಡಿಕೊಂಡು ಹೆಂಡತಿಯರನ್ನು ಇಟ್ಟುಕೊಂಡಿರುವುದಕ್ಕೋ ನಿಮ್ಮ ಆಕ್ಷೇಪಣೆ? ಮದುವೆಯಾಗದೆ ಇಟ್ಟುಕೊಂಡಿದ್ದಿದ್ದರೆ ನಿಮ್ಮ ಆಕ್ಷೇಪಣೆ ಇದ್ದಿರಲಾರದೇನೋ!"

ಇದು ಆ ಸ್ನೇಹಿತನಿಗೆ ಷಹ. ಏಕೆಂದರೆ ಆತ ಮನೆಯಿಂದ ಹೊರಗಡೆ ಬೇಕಾದಷ್ಟು ಲೀಲೆ ಆಡುತ್ತಿದ್ದವನೆಂಬುದು ಸ್ನೇಹಿತರಿಗೆಲ್ಲ ಗೊತ್ತಿತ್ತು.

ನಂಜುಂಡಯ್ಯನವರ ಮುಖದ ಮೇಲೆ ಸಾಮಾನ್ಯವಾಗಿ ಯಾವಾಗಲೂ ಮುಸಿನಗು ಸುಳಿದಾಡುತ್ತಿತ್ತು. ಅವರ ತುಟಿಯ ಮಿಡಿತ, ಮೀಸೆಯ ಕುಣಿತ-ಎರಡೂ ಒಂದು ಹಾಸ್ಯ ಪ್ರಕರಣಕ್ಕೆ ಪೀಠಿಕೆಯಾಗಿ ಬರುತ್ತಿದ್ದವು.

ಒಂದಾನೊಂದು ಸಲ ಪ್ರಜಾಪ್ರತಿನಿಧಿ ಸಭೆಯಲ್ಲಿ ಒಬ್ಬಾನೊಬ್ಬ ಸದಸ್ಯರು ಒಂದು ಸಮಾಜಸಂಸ್ಕಾರ ಸೂಚನೆಯನ್ನು ತಂದಿದ್ದರು. ಅದು ಹೀಗೆ: "ನಮ್ಮ ಜನದಲ್ಲಿ ಬಾಲ್ಯ ವಿವಾಹದ ಕೇಡು ತುಂಬಾ ಹೆಚ್ಚಿಹೋಗಿದೆ. ಇದನ್ನು ಖಂಡಿತವಾಗಿ ನಿಲ್ಲಿಸಬೇಕು. ಅದಕ್ಕೆ ಉಪಾಯವೇನೆಂದರೆ-ಇನ್ನು ಮುಂದೆ ಸ್ಕೂಲು ಕಾಲೇಜುಗಳಿಗೆ ಸೇರಬರುವ ವಿದ್ಯಾರ್ಥಿಗಳಿಗೆ ಅವರು ವಿವಾಹಿತರಾಗಿದ್ದಲ್ಲಿ ಫ್ರೀಷಿಪ್ ಸ್ಕಾಲರ್ ಷಿಪ್‌ಗಳನ್ನು ಕೊಡತಕ್ಕದ್ದಲ್ಲ. ಮತ್ತು ಅವರಿಂದ ಫೀಜನ್ನು ದ್ವಿಗುಣವಾಗಿ ವಸೂಲ್ ಮಾಡಬೇಕು."

ಇದರಮೇಲೆ ಚರ್ಚೆ ನಡೆಯಿತು. ದಿವಾನ್ ವಿಶ್ವೇಶ್ವರಯ್ಯನವರಿಗೆ ಅದರ ಉದ್ದೇಶ ಮೆಚ್ಚಿಕೆಯೂ ಆಯಿತು. ಅವರು ಆ ಸದಸ್ಯರನ್ನು ಕುರಿತು, "ನಿಮ್ಮಂಥ ಪೂರ್ವಿಕರು ಹೀಗೆ ಈ ಸುಧಾರಣೆ ಬೇಕೆನ್ನುವುದು ಬಹಳ ಪ್ರೋತ್ಸಾಹಕರವಾಗಿದೆ" ಎಂದು ಪ್ರಶಂಸೆ ಮಾಡಿದರು. ಇನ್ನು ಕೆಲವರು "ಈ ಸಲಹೆಯಂತೆ ನಡೆದರೆ ಹೆಣ್ಣು ಕೊಡುವ ಮಾವನಿಗೆ ಜುಲ್ಮಾನೆ ಬೀಳುತ್ತದೆ" ಎಂದರು. ನಂಜುಂಡಯ್ಯನವರು "ಅಷ್ಟೆಲ್ಲ ಯಾಕೆ? ಅಂಥ ಹುಡುಗರಿಗೆ ಹೆಣ್ಣು ಕೊಟ್ಟವರಿಗೆ ಆರು ತಿಂಗಳು ಸಜ ಎಂದು ವಿಧಿಸಿದರೆ ಬಾಲ್ಯವಿವಾಹ ನಿಂತುಹೋಗುತ್ತದಲ್ಲವೆ?" ಎಂದು ಕೇಳಿದರು. ಆ ಸದಸ್ಯರ ನೀರ್ಗುಳ್ಳೆ ಒಡೆಯಿತು. ಸಭೆಯೆಲ್ಲ ನಗುವಿನಲ್ಲಿ ತೇಲಿಹೋಯಿತು.

ಇನ್ನೊಂದು ಸಲ ಇನ್ನೊಬ್ಬ ಉತ್ಸಾಹೀ ಸದಸ್ಯರು ಗ್ರಾಮದ ಚೊಕ್ಕಟಕ್ಕಾಗಿ ಸರಕಾರದವರು ಪೋಲೀಸಿನವರಿಗೆ ಅಧಿಕಾರ ಕೊಡಬೇಕೆಂದು ವಾದಿಸಿದರು. ನಂಜುಂಡಯ್ಯನವರು ಅವರನ್ನು ಕುರಿತು- "ನಿಮ್ಮ ಅಡಿಗೆಮನೆಯೊಳಗೆ ಚೊಕ್ಕಟವಾಗಿದೆಯೆ ಎಂದು ಪರೀಕ್ಷೆಮಾಡಲು ಪೋಲೀಸಿನವನು ಬಂದರೆ ಅವನಿಗೆ ಅಲ್ಲಿ ಊಟವಿಡುತ್ತೀರಾ?" ಎಂದು ಕೇಳಿದರು.

ಇನ್ನೊಂದು ಸಲ ಒಬ್ಬ ಸದಸ್ಯರು ಗ್ರಾಮಗಳಲ್ಲಿಯ ಸೊಳ್ಳೆಕಾಟವನ್ನು ವರ್ಣಿಸಿದರು. ನಂಜುಂಡಯ್ಯನವರು "ಸರಕಾರವನ್ನು ಸೊಳ್ಳೆ ಪರದೆ ಹೊಲಿಸಿಕೊಡಿ ಎಂದು ಕೇಳುತ್ತೀರಾ?" ಎಂದು ಕೇಳಿದರು.

ಇನ್ನೊಂದು ಸಲ ಒಬ್ಬ ಸದಸ್ಯರು, "ಸಂಸ್ಥಾನದಲ್ಲಿ ಇರುವ ಗುಡಿಗಳ ಪೈಕಿ ಯಾವ ಯಾವುದಕ್ಕೆ ಗೋಪುರವಿಲ್ಲವೋ ಅವಕ್ಕೆಲ್ಲ ಸರಕಾರದವರು ಗೋಪುರ ಕಟ್ಟಿಸಿಕೊಡಬೇಕು; ಏಕೆಂದರೆ ಗೋಪುರವಿಲ್ಲದ ಗುಡಿಗೆ ಹೋಗಬಾರದು ಎಂದು ಶಾಸ್ತ್ರವಿದೆ" ಎಂದು ವಾದಿಸಿದರು. ನಂಜುಂಡಯ್ಯನವರು-

"ಒಳ್ಳೆಯದು, ಆ ಗುಡಿಯಿಂದ ಸಕ್ಕರೆ ಪೊಂಗಲು ಪ್ರಸಾದವನ್ನು ನಿಮ್ಮ ಮನೆಗೇ ತಂದುಕೊಟ್ಟರೆ ಆಗಬಹುದೊ?" ಎಂದರು.

ಈ ರೀತಿಯಾಗಿ ನಂಜುಂಡಯ್ಯನವರು ಜನರ ಅವಿವೇಕಗಳನ್ನು ಅಲ್ಲಲ್ಲಿಯೇ ಹಾಸ್ಯ ಮರ್ಯಾದೆಯಿಂದ ತೋರಿಸಿಕೊಡುತ್ತಿದ್ದರು.

ನಂಜುಂಡಯ್ಯನವರು ಮಹಾ ಕರುಣಾಳು. ಅವರಿಗೆ ಯಾವಾಗ ಕೋಪ ಬರುತ್ತಿತ್ತೋ ನಾನು ಕಾಣೆ. ಅವರು ಜಡ್ಜಿಯಾಗಿದ್ದಾಗ ಅಪರಾಧಿಯ ವಿಷಯದಲ್ಲಿ ಕೂಡಿದಮಟ್ಟಿಗೆ ಕನಿಕರವನ್ನೇ ತೋರುತ್ತಿದ್ದರು. "ಇವನು ತಪ್ಪು ಮಾಡಿದ್ದರೆ ಇವನ ಹೆಂಡತಿ ಮಕ್ಕಳು ಅದರ ಫಲವನ್ನು ಅನುಭವಿಸಬೇಕಾಗುತ್ತದಲ್ಲ" ಎಂದು ಪರಿತಪಿಸುತ್ತಿದ್ದರು. ಶ್ರೀಮಾನ್ ನವರತ್ನ ರಾಮರಾಯರು ಇದಕ್ಕೊಂದು ಉದಾಹರಣೆಯನ್ನು ಒದಗಿಸಿದ್ದಾರೆ. ನಂಜುಂಡಯ್ಯನವರು ಕೌನ್ಸಿಲರ್ ಆಗಿದ್ದಾಗ ಎಡತೊರೆ ಕಡೆಯಿಂದ ಸರಕಾರಕ್ಕೆ ಒಂದು ತಂತಿ ಬಂತಂತೆ. ಆ ಪ್ರದೇಶದಲ್ಲಿ ಇದ್ದ ಒಬ್ಬ ಪ್ರಸಿದ್ಧ ದರೋಡೆಕಾರನು ಎಷ್ಟೋ ವರ್ಷಕಾಲ ಪೋಲೀಸರ ಕೈಗೆ ಸಿಕ್ಕದೆ ತಪ್ಪಿಸಿಕೊಂಡಿದ್ದು, ಕಡೆಗೆ ಒಂದಾನೊಂದು ದಿನ ಸಿಕ್ಕಿಬಿದ್ದನಂತೆ. ಅವನನ್ನು ಕ್ರಮವಾಗಿ ವಿಚಾರಣೆ ಮಾಡಿ ದಂಡನೆ ವಿಧಿಸಿದ ಮೇಲೆ ಆ ಮ್ಯಾಜಿಸ್ಟ್ರೇಟರು ಸರಕಾರಕ್ಕೆ ತಂತಿ ಕಳುಹಿಸಿದರಂತೆ, ಹೀಗೆ: 'Glad to report so and so was hanged as sentenced.' ಈ ತಂತಿಯ ವರದಿಯನ್ನು ನಂಜುಂಡಯ್ಯನವರು ನೋಡಿದ ಕೂಡಲೆ- "ಗ್ಲ್ಯಾಡ್ ಅಂತೆ ಗ್ಲ್ಯಾಡು. ಪುತ್ರೋತ್ಸವವಾಯಿತು; ಹಾಲುಕೀರು ಮಾಡಿಸಿಕೊಂಡು ಕುಡಿಯಲಿ" -ಎಂದರಂತೆ. ಇದು ನಂಜುಂಡಯ್ಯನವರ ಹೃದಯ.

ನಂಜುಂಡಯ್ಯನವರ ಮನೆಗೆ ನಾನು ಆಗಾಗ ಹೋಗುತ್ತಿದ್ದೆ. ನನಗೆ ಮನೆ, ಬಳಗ, ಸಂಸಾರ-ಎಂಬುದರ ಅರ್ಥ ಅಲ್ಲಿ ಪ್ರತ್ಯಕ್ಷವಾದ ಹಾಗೆ ಇನ್ನೆಲ್ಲಿಯೂ ಆಗಿಲ್ಲ. ಅದು ಭಾರಿ ಕಟ್ಟಡ. ಅದರ ಎಲ್ಲ ಜಾಗಗಳಲ್ಲಿಯೂ ಮುದುಕರೂ, ಮಕ್ಕಳೂ ಇರುತ್ತಿದ್ದರು. ಏನಾದರೊಂದು ಸದ್ದು ಸಂಗತಿ ನಡೆಯುತ್ತಿತ್ತು. ಮಡಿಯ ಹೆಂಗಸರು ಮುದುಕಿಯರು ಎಲ್ಲೆಲ್ಲೂ ಹಾರಾಡುತ್ತಿದ್ದರು. ನಾನು ಮಹಡಿಯ ಮೇಲೆ ಹೋದಾಗ ನಂಜುಂಡಯ್ಯನವರು "ಕೂಡು, ಕೂಡು" ಎನ್ನುತ್ತಿದ್ದರು. ಆದರೆ ಅಲ್ಲಿಯ ಸೋಫಾಗಳ ಮೇಲೆ ಮಕ್ಕಳ ಲಂಗಗಳು, ಪರಿಕರಗಳು, ಟವಲುಗಳು, ಬನೀನುಗಳು ಅಲ್ಲಲ್ಲಿ ಬಿದ್ದಿರುತ್ತಿದ್ದವು. ಅದರಿಂದ ಮೊದಲನೆಯ ಸಲ ನನಗೆ ಸ್ವಲ್ಪ ಸಂಕೋಚವಾಯಿತು. ಅದನ್ನು ಅವರು ಊಹಿಸಿ ತಿಳಿದುಕೊಂಡು- "ನಿಮ್ಮ ಮನೆಯಲ್ಲೂ ಮಕ್ಕಳಿದ್ದಾರೋ?" ಎಂದು ಕೇಳಿದರು. ನನ್ನ ಸಂಕೋಚ ಬಿಟ್ಟುಹೋಯಿತು. ಎಷ್ಟೋ ಸಲ ನಾನು ಅಲ್ಲಿಗೆ ಹೋದಾಗ ಅವರ ಹೆಂಡತಿ ಅವರ ಪಕ್ಕದಲ್ಲಿ ನಿಂತಿರುತ್ತಿದ್ದರು. ಆಗ ನಂಜುಂಡಯ್ಯನವರು ನನ್ನನ್ನು ಒಳಕ್ಕೆ

ಬಾರೆಂದು ಕರೆಯುತ್ತಿದ್ದರು. ನಾನು ಸಂಕೋಚಪಟ್ಟುಕೊಂಡು ಹೊರಗೆ ನಿಂತಿರುತ್ತಿದ್ದೆ. ಅವರು, "ಬಾ ಪರವಾಗಿಲ್ಲ. ಎಲ್ಲರ ಮನೆಯಲ್ಲಿ ಇರೋ ಹಾಗೆಯೇ ನಮ್ಮ ಮನೆಯಲ್ಲೂ" ಎಂದು ಹೇಳಿ ಒಳಕ್ಕೆ ಬರಮಾಡಿಕೊಳ್ಳುತ್ತಿದ್ದರು. ಅಷ್ಟು ಸರಳರು, ಅಷ್ಟು ಪ್ರೀತಿವಂತರು.

ಅವರ ಮನೆಯಲ್ಲಿ ಮೇಜಿನ ಮುಂದೆ ಕುಳಿತು ಕೆಲಸ ಮಾಡುತ್ತಿರುವಾಗ ಇಬ್ಬರು ಮಕ್ಕಳು ಮೇಜಿನ ಕೆಳಗಡೆ ಸೇರಿಕೊಂಡು ಅವರ ಕಾಲು ಬೆರಳುಗಳನ್ನು ಎಣಿಸುವುದು, ಕೆರೆಯುವುದು, ಚಿವುಟುವುದು-ಹೀಗೆ ಮಾಡುತ್ತಿದ್ದರು. ಇನ್ನಿಬ್ಬರು ಕುರ್ಚಿಯ ಮೇಲೆ ಹತ್ತಿ ಅವರ ಬೆನ್ನಿನಮೇಲೆ ದಬದಬನೆ ಗುದ್ದುತ್ತಿದ್ದರು. ಇನ್ನಿಬ್ಬರು ಮಕ್ಕಳು ಬಂದು, "ಅಪ್ಪಾ ದುದ್ದು" ಎಂದು ಕೂಗಾಡುತ್ತಿದ್ದರು. ನಂಜುಂಡಯ್ಯನವರು ಅದನ್ನೆಲ್ಲ ನೋಡಿ ನಗುತ್ತ ಸಹಿಸಿ, "ವೆರ್ರಿಕ್ಕೈನಾ, ದುದ್ದು ಅಂಟೆ ಏಮೇ? ವೆರ್ರಿಕ್ಕೈನಾ" ಅನ್ನುತ್ತಿದ್ದರು. "ದುದ್ದು" ಎಂಬುದು "ಧೂದ್" ಎಂಬುದರ ಅಪಭ್ರಂಶವಂತೆ! "ಧೂದ್" ಎಂದರೆ ಹಿಂದೂಸ್ಥಾನಿ ಭಾಷೆಯಲ್ಲಿ "ಹಾಲು" ಎಂದು ಅರ್ಥ. ಆ ಮಾತನ್ನು ಆ ಮಕ್ಕಳು ಆ ಮನೆಯಲ್ಲಿದ್ದ ಮುಸಲ್ಮಾನ್ ಆಳುಗಳಿಂದ ಕಲಿತುಕೊಂಡಿದ್ದರಂತೆ. ಈ ಭಾಷಾಶಾಸ್ತ್ರವನ್ನು ವಿಚಾರಿಸಿ ತಿಳಿದುಕೊಳ್ಳುವುದಕ್ಕೆ ನಂಜುಂಡಯ್ಯನವರಿಗೆ ಐದು ನಿಮಿಷ ಬೇಕಾಯಿತು. ಆ ಹೊತ್ತು ಅವರ ಮುಖವನ್ನು ನೋಡಬೇಕಾಗಿತ್ತು ನಿರ್ಮಲವಾದ ಸಂತೋಷ ಹೇಗಿರುತ್ತದೆ ಎಂಬುದನ್ನು ತಿಳಿಯುವುದಕ್ಕೆ.

ನಂಜುಂಡಯ್ಯನವರು ನಿಧಾನದ ಸ್ವಭಾವದವರು. ಯಾವುದರಲ್ಲಿಯೂ ಅವರಿಗೆ ಆತುರವಿಲ್ಲ. ಯಾವುದಾದರೂ ತಪ್ಪಾಯಿತೆಂದು ಅವರಿಗೆ ಹೇಳಿದರೆ- "ಆಗಲಿ, ಆಗಲಿ. ತಿದ್ದೋಣ; ತಿದ್ದಿದರೆ ಆಯಿತು" ಎನ್ನುವರು. ತಿದ್ದುವುದಕ್ಕೆ ಆಗುವುದಿಲ್ಲ ಎಂದು ಹೇಳಿದರೆ "ಆಗದಿದ್ದರೆ ಬೇಡ; ಮಿಂಚಿ ಹೋದದ್ದೇನು?" ಎನ್ನುವರು. ಮಿಂಚಿಹೋಯಿತು ಎಂದರೆ "ಹಾಗಾದರೆ ಇನ್ನು ಚಿಂತೆಮಾಡಿ ಏನು ಪ್ರಯೋಜನ? ಅನುಭವಿಸಿದರಾಯಿತು" ಎನ್ನುವರು.

ಒಂದು ಸಲ ಅವರು ದೆಹಲಿಗೆ ಪ್ರಯಾಣ ಮಾಡುತ್ತಿದ್ದಾಗ ನಾಸಿಕದ ಹತ್ತಿರ ಇಳಿದು ಗೋದಾವರಿ ಸ್ನಾನ ಮಾಡಬೇಕೆಂದು ಆಲೋಚನೆ ಮನಸ್ಸಿಗೆ ಬಂತು. ಅದನ್ನು ತಮ್ಮ ಕಾರ್ಯದರ್ಶಿಗೆ ಹೇಳಿದರು. ಆತ ಆಗಬಹುದೆಂದು ಉತ್ತರ ಹೇಳಿ, ರೈಲು ನಾಸಿಕದ ಹತ್ತಿರ ಬರುತ್ತಿದ್ದಾಗ ಎಚ್ಚರಿಕೆ ಕೊಟ್ಟ. ಆಗ ಬೆಳಿಗ್ಗೆ ಸುಮಾರು ೫ ಘಂಟೆ ಸಮಯ. ನಂಜುಂಡಯ್ಯನವರು, "ಏನಯ್ಯ ಇಷ್ಟು ಚಳಿ? ಈಗ ರೈಲಿನಿಂದ ಇಳಿದರೆ ದೇವರಿಗೆ ಆಗುವುದು ಶಾಪ ಅಷ್ಟೆ. ದೆಹಲಿಯಲ್ಲಿ ಮಾಡೋ ಪಾಪಗಳನ್ನು ಮಾಡಿ ವಾಪಸ್ ಬರುವಾಗ ಸ್ನಾನ ಮಾಡೋಣ" ಎಂದರು. ವಾಪಸ್ ಬರುವಾಗ ಕಾರ್ಯದರ್ಶಿ ನಾಸಿಕದ ಬಳಿ ಅವರನ್ನು

ಎಬ್ಬಿಸಿದಾಗ, "ಅಂಥ ಪಾಪವನ್ನೇನೂ ಮಾಡಲಿಲ್ಲವಲ್ಲ! ಈ ರಾತ್ರಿ ಇಲ್ಲೇಕೆ ಕೊರಗುವುದು!" ಎಂದುಬಿಟ್ಟರು. ಸಾಮಾನ್ಯವಾಗಿ ರೈಲಿಗೇ ಆಗಲಿ, ಸಭೆಗೇ ಆಗಲಿ, ಗೊತ್ತಾದ ಹೊತ್ತಿಗೆ ನಂಜುಂಡಯ್ಯನವರು ಬಂದರೆ ಅದು ಎಲ್ಲರಿಗೂ ಆಶ್ಚರ್ಯವೇ.

ನಂಜುಂಡಯ್ಯನವರು ಕುದುರೆ ಸವಾರಿ ಮಾಡುತ್ತಿದ್ದುದ್ದುಂಟು; ಅವರು ದೂರ ಹೋಗುತ್ತಿದ್ದದ್ದೂ ಉಂಟಂತೆ. ಆದರೆ ನಾನು ನೋಡಿರುವುದು ಅವರು ತಮ್ಮ ಮನೆಯಿಂದ ನಾಲ್ಕು ಹೆಜ್ಜೆಯಾಚೆ ಎದುರುಗಡೆಯಿದ್ದ ತಮ್ಮಂದಿರ ಮನೆಗೆ ಬಂದು, ಅಲ್ಲಿ ಇಳಿಯದೆ ಪೋರ್ಟಿಕೊ ಹತ್ತಿರದಲ್ಲೇ ಕುದುರೆಯ ಮೇಲೆಯೇ ಕುಳಿತಿದ್ದು, ಒಂದರ್ಧ ಘಂಟೆ ಹೆಂಗಸರು ಮಕ್ಕಳೊಡನೆ ಮಾತನಾಡಿ ಅಥವಾ ಸುಮ್ಮನೆ ಅತಿತ್ತ ನೋಡಿಕೊಂಡಿದ್ದು ಹಿಂದಿರುಗುವರು. ಎಷ್ಟೋ ಸಲ ಅವರ ಕುದುರೆ ಸವಾರಿ ಇಷ್ಟೆ. ಒಂದೊಂದು ದಿವಸ ಅಲ್ಲಿಂದ ಅಠಾರಾ ಕಛೇರಿಯವರೆಗೂ ಸವಾರಿ ಬರುತ್ತಿದ್ದರು. ಅದು ಅವರ ಕೆಲಸದ ದಿವಸ.

ನಂಜುಂಡಯ್ಯನವರ ಕೆಲಸದ ರೀತಿಯನ್ನು ಕುರಿತು ಹೇಳಬೇಕಾದದ್ದು ಇದೆ. ಅವರು ಅನೇಕ ವಾರಗಳ ಕಾಲ ಗ್ರಂಥವ್ಯಾಸಂಗದಲ್ಲಿಯೂ ಹೊರಗಣ ಅಡಳಿತಗಳಲ್ಲಿಯೂ ಇದ್ದು ಬಿಡುತ್ತಿದ್ದರು. ಕಾಗದದ ಕಟ್ಟುಗಳು (Files) ಐವತ್ತೋ ನೂರೋ ಸೇರಿಬಿಟ್ಟಿವೆ ಎಂದು ತಿಳಿದಾಗ ಬೆಳಿಗ್ಗೆ ಬೇಗ ಕುದುರೆಯ ಮೇಲೆ ಕುಳಿತು ಕಛೇರಿಗೆ ಬಂದುಬಿಡುವರು. ಆಗ ಅಲ್ಲಿ ಬಾಗಿಲು ತೆರೆಯಲು ಒಬ್ಬ ಆಳಿದ್ದರೆ ಸಾಕು. ಗುಮಾಸ್ತರೂ ಸಹಾಯಕರೂ ಒಬ್ಬರೂ ಬೇಕಿರಲಿಲ್ಲ. ತಾವೊಬ್ಬರೇ ಕುಳಿತು ಹನ್ನೆರಡು ಘಂಟೆ, ಒಂದು ಘಂಟೆವರೆಗೂ ಕೆಲಸ ಮಾಡುತ್ತಿದ್ದರು. ಅವರಿಗೆ ಎಲ್ಲ ಇಲಾಖೆಗಳ ಕಾನೂನುಗಳೂ, ಆಡಳಿತಗಳೂ, ಎಲ್ಲ ವ್ಯವಹಾರಗಳ ಚರಿತ್ರೆಗಳೂ ಹೃದ್ಗತವಾಗಿದ್ದದ್ದರಿಂದ ಇತರರ ಅಪೇಕ್ಷೆ ಎಷ್ಟು ಮಾತ್ರವೂ ಇರಲಿಲ್ಲ. ಪ್ರತಿಯೊಂದು ಕಟ್ಟನ್ನೂ ಬೇಗ ಬೇಗನೆ ನೋಡಿ ಮುಖ್ಯಾಂಶಗಳನ್ನು ಕಂಡುಕೊಳ್ಳುವುದು ಅವರಿಗೆ ಸುಲಭವಾಗಿತ್ತು. ಓದಿದ್ದು ಮುಗಿದಕೊಡಲೇ ತೀರ್ಮಾನವನ್ನು ಸ್ವಹಸ್ತದಲ್ಲಿ ತಡೆಯಿಲ್ಲದೆ, ಸಂದೇಹಕ್ಕೆಡೆಯಿಲ್ಲದಂತೆ, ಬರೆದಿಡುತ್ತಿದ್ದರು. ಅವರಿಗೆ (ಷಾರ್ಟ್ ಹ್ಯಾಂಡ್) ಶೀಘ್ರಲಿಪಿಕಾರರುಗಳಾಗಲಿ ಟೈಪಿಸ್ಟುಗಳಾಗಲಿ ಬೇಕಿರಲಿಲ್ಲ. ಸರಸರನೆ ಬರೆಯುವ ಸಾಮರ್ಥ್ಯವಿತ್ತು. ಆದರಿಂದ ಒಂದೆರಡು ತಿಂಗಳು ಶೇಖರವಾಗಿದ್ದ ಕಾಗದಪತ್ರಗಳ ರಾಶಿ ಒಂದೆರಡು ದಿನಗಳಲ್ಲಿ ಫೈಸಲ್ಲಿಗೆ ಬರುತ್ತಿತ್ತು.

ಅವರ ಕರುಣಾಳುತನವನ್ನು ಕುರಿತು ಆಗಲೇ ಒಂದು ಮಾತು ಹೇಳಿದೆ. ಒಬ್ಬಾನೊಬ್ಬ ಮುನ್ಸೀಫನ ಮೇಲೆ ಸರಕಾರಕ್ಕೆ ಅನೇಕ ದೂರುಗಳು ಬಂದಿದ್ದವು. ಸರಕಾರದ ಒಳಗಡೆ ಇದ್ದ ಕೆಲವರು ಆ ಮುನ್ಸೀಫನಿಗೆ ವೈಯಕ್ತಿಕ ಕಾರಣದಿಂದ ವೈರಿಗಳಾದವರಿದ್ದರು. ಈ ವೈರಿಗಳು ಆ ಮುನ್ಸೀಫನಿಗೆ ಶಿಕ್ಷೆ ಮಾಡಿಸಬೇಕೆಂದು

ಆತುರಪಡುತ್ತಿದ್ದರು. ಆ ಕಾಗದ ತಮ್ಮ ಮುಂದೆ ಬಂದಾಗಲೆಲ್ಲ ನಂಜುಂಡಯ್ಯನವರು- "ಆ ಮುನ್ಸಿಫನ ಕಾರಣ ವಿವರಣೆಯನ್ನು ತರಿಸಿ" ಎಂದು ಬರೆಯುತ್ತಿದ್ದರು. ಕಡೆಗೆ ಒಂದು ಸಲ ಅವರು ಹೀಗೆ ಬರೆದರು: "ಖೂನಿ ಮಾಡಿದವನೆಂದು ದೋಷಾಪಾದನೆಯಾದವನನ್ನು ಕೂಡ ಕ್ರಮವಾಗಿ ವಿಚಾರಣೆ ಮಾಡದೆ ದಂಡಿಸಲಾಗುವುದಿಲ್ಲ. ಆದರೆ ಈ ಬಡ ಮುನ್ಸಿಫನಿಗೆ ಆ ಅವಕಾಶ ತಪ್ಪಿ ಹೋಗುವಂತೆ ತೋರುತ್ತದೆ" ಎಂದು ಬರೆದರು.

ಅವರು ಹೈಕೋರ್ಟಿನಲ್ಲಿದ್ದಾಗ ಅಪರಾಧಿ ಸ್ಥಾನದಲ್ಲಿ ನಿಂತವನಿಗೆ ಶಿಕ್ಷೆಯನ್ನು ತೆಗೆದುಹಾಕಲಾಗದಿದ್ದರೆ ಕಡಿಮೆಯಾದರೂ ಮಾಡಲು ಕಾರಣ ಹುಡುಕುತ್ತಿದ್ದರು. ವರ್ಷದ ಸಜವನ್ನು ಆರು ತಿಂಗಳಿಗಿಳಿಸಿಯೋ, ಕಠಿಣ ಸಜವನ್ನು ಸಾದಾ ಸಜ ಮಾಡಿಯೋ, ಸಿವಿಲ್ ಮೊಖದ್ದಮೆಯಲ್ಲಿ ಕೋರ್ಟು ಖರ್ಚುಗಳನ್ನು ಮಾಫಿ ಮಾಡಿಯೋ, ಹೇಗೋ ನೊಂದವನಿಗೆ ಒಂದಿಷ್ಟು ರಿಯಾಯಿತಿಯನ್ನಾದರೂ ತೋರಿಸಲು ಪ್ರಯತ್ನಪಡುತ್ತಿದ್ದರು. ಅವರ ಅಧಿಕಾರ ಕಾಲದೊಳಗಾಗಿ ಅವರು ಯಾರಿಗೂ ಎಂದಿಗೂ ನೋವನ್ನುಂಟು ಮಾಡಿದವರಲ್ಲ.

ನಂಜುಂಡಯ್ಯನವರ ಮೇಲೆ ಬಂದಿದ್ದ ಒಂದು ಆಕ್ಷೇಪಣೆ ಏನೆಂದರೆ ಅವರು ಸ್ವಜನಪಕ್ಷಪಾತಿಗಳಾಗಿದ್ದರೆಂಬುದು. ಇದಕ್ಕೆ ವಾಸ್ತವವಾದ ಆಧಾರ ಎಷ್ಟು ಮಾತ್ರ ಉಂಟೋ ನಾನು ಹೇಳಲಾರೆ. ಇಂಥ ಆಪಾದನೆಗಳನ್ನು ನಮ್ಮ ದೇಶದಲ್ಲಿ ಎಲ್ಲರೂ ಮತ್ತೆಲ್ಲರ ವಿಷಯದಲ್ಲೂ ಮಾಡುವುದುಂಟು. ನನಗೆ ತಿಳಿದ ಮಟ್ಟಿಗೆ ನಂಜುಂಡಯ್ಯನವರು ಸ್ವಜನದ ಅನುಕೂಲಕ್ಕಾಗಿ ಇತರರಿಗೆ ಅನ್ಯಾಯಮಾಡಿದ ಸಂದರ್ಭವೊಂದೂ ಕಂಡುಬಂದಿಲ್ಲ. ಒಂದೆರಡು ಸಂದರ್ಭಗಳಲ್ಲಿ ಒಬ್ಬರಿಬ್ಬರಿಗೆ ಸಲ್ಲಬೇಕಾಗಿದ್ದುದಕ್ಕಿಂತ ಸ್ವಲ್ಪ ಹೆಚ್ಚಾಗಿ ಸಂದಿರಬಹುದು; ಅದಕ್ಕೆ ಕಾರಣಗಳೂ ಎಷ್ಟೋ ಇರಬಹುದು. ಅಲ್ಲಿ ನಂಜುಂಡಯ್ಯನವರ ಪಕ್ಷಪಾತಿತ್ವವಲ್ಲದೆ ಬೇರೆ ಯಾವ ಕಾರಣವೂ ಇಲ್ಲವೆಂದು ಸಿದ್ಧಾಂತ ಮಾಡಲಾಗುವುದಿಲ್ಲ. ಒಟ್ಟಿನಲ್ಲಿ ನಂಜುಂಡಯ್ಯನವರಿಗೆ ಇದ್ದ ಅವಕಾಶಗಳು ಕೂಡ ಅಂಥ ದೊಡ್ಡ ಮಟ್ಟದವವೇನೂ ಅಲ್ಲ. ಕೌನ್ಸಿಲರೂ ಜಡ್ಜಿಯೂ ತೋರಿಸಬಹುದಾಗಿದ್ದ ಅನುಗ್ರಹಾವಕಾಶಗಳು ಸಣ್ಣ ದರ್ಜೆಯವು. ನಂಜುಂಡಯ್ಯನವರ ಕಟಾಕ್ಷದಿಂದ ಬಹಳ ಮೇಲ್ಮಟ್ಟಕ್ಕೆ ಏರಿದವರನ್ನು ಯಾರನ್ನೂ ಕಾಣೆ.

ನಂಜುಂಡಯ್ಯನವರು ಯೋಗ್ಯತೈಕ ಪಕ್ಷಪಾತಿಗಳೆಂಬುದಕ್ಕೆ ಅವರು ವಿಶ್ವವಿದ್ಯಾನಿಲಯದಲ್ಲಿ ಮಾಡಿದ ನೇಮಕಗಳು ನಿರ್ಧಾರಕ ನಿದರ್ಶನಗಳಾಗಿವೆ. ರಾಧಾಕೃಷ್ಣನ್, ರಾಧಾಕುಮುದ ಮುಖರ್ಜಿ, ಕೆ.ಟಿ.ಷಾ, ಎ.ಆರ್.ವಾಡಿಯ, ಎಂ.ಹಿರಿಯಣ್ಣ. ಸಂಪತ್‌ಕುಮಾರನ್, ವೆಂಕಟೇಶಾಚಾರ್,

ಸಿ.ಆರ್.ನಾರಾಯಣರಾವ್, ಸಂಪತ್ತಯ್ಯಂಗಾರ್, ಎನ್.ಎಸ್.ಸುಬ್ಬರಾವ್-ಇವರಲ್ಲಿ ಯಾರೂ "ಮನವಾಂಡ್ಲು" ಇಲ್ಲ. ಎಲ್ಲರೂ ನಂಜುಂಡಯ್ಯನವರ ಕುಲ ಪಂಗಡದಿಂದ ಹೊರಗಿನವರೇ ಮತ್ತು ಇವರೆಲ್ಲರೂ ಆಗ್ಗೆ ಅವರವರ ಶಾಸ್ತ್ರವಿಚಾರಗಳಲ್ಲಿ ಮಹಾ ಸಮರ್ಥರೆಂದೆನ್ನಿಸಿಕೊಂಡಿದ್ದವರೇ. ಮೈಸೂರು ವಿಶ್ವವಿದ್ಯಾನಿಲಯಕ್ಕೆ ಕೀರ್ತಿ ಪ್ರತಿಷ್ಠೆಗಳೇನಾದರೂ ಇದ್ದರೆ ಅದಕ್ಕೆ ಮೂಲಪುರುಷರಾದವರು ಈ ಮೇಲೆ ಹೇಳಿದ ವಿದ್ವಾಂಸರುಗಳು. ಅಂಥವರನ್ನಾರಿಸಿ ನೇಮಿಸಿದ ಯಶಸ್ಸು ನಂಜುಂಡಯ್ಯನವರದು.

ನಂಜುಂಡಯ್ಯನವರೂ ವಿಶ್ವೇಶ್ವರಯ್ಯನವರೂ ಸ್ನೇಹಿತರು. ಒಂದೇ ಕುಲ ಪ್ರಭೇದಕ್ಕೆ ಸೇರಿದವರು. ಆದರೆ ಅವರಿಬ್ಬರ ದೃಷ್ಟಿಕೋನಗಳೂ ಬೇರೆಬೇರೆಯಾದವು. ಒಟ್ಟಿನಲ್ಲಿ ವಿಶ್ವೇಶ್ವರಯ್ಯನವರು ಪ್ರಗತಿ ವಿಷಯದಲ್ಲಿ ಆತುರವುಳ್ಳವರು. ನಂಜುಂಡಯ್ಯನವರು ಪ್ರಗತಿ ವಿಷಯದಲ್ಲಿ ಉದಾಸೀನರೇನೂ ಅಲ್ಲದೆ ಪ್ರಗತಿ ಸಹಾಯಕರೇ ಆಗಿದ್ದರೂ, ಆತುರವುಳ್ಳವರಾಗಿರಲಿಲ್ಲ. ಆತುರವೆಂದರೆ ಶಕ್ತಿಗೆ ಮೀರಿದಷ್ಟು, ಸಂದರ್ಭಕ್ಕೆ ಮೀರಿದಷ್ಟು ವೇಗ. ವೇಗವನ್ನು ನಮ್ಮ ದೇಶದ ಸ್ಥಿತಿಗೆ ಅನುಗುಣವಾಗಿ ಮಿತಗೊಳಿಸಬೇಕೆಂಬುದು ನಂಜುಂಡಯ್ಯನವರ ಆಶಯ. ದೇವಶಿಲ್ಪಿಯಾದ ಮಯನು ಕಟ್ಟಡ ಕಟ್ಟಿದಂತೆ ಬೆಳಗಾಗುವಷ್ಟರೊಳಗಾಗಿ ನಿರ್ಮಾಣ ಮಾಡಬೇಕೆಂಬವರು ವಿಶ್ವೇಶ್ವರಯ್ಯನವರು. ನಮ್ಮದು ದೇವಲೋಕವಲ್ಲ; ಇಲ್ಲಿ ಇಟ್ಟಿಗೆಯ ಮೇಲೆ ಇಟ್ಟಿಗೆ ಇಟ್ಟು, ಮಣ್ಣಿನಮೇಲೆ ಮಣ್ಣಿಟ್ಟು, ಹೆಜ್ಜೆಹೆಜ್ಜೆಗೂ ತೂಗುಗುಂಡಿನಿಂದ ನೋಡಿ, ಗೋಡೆ ಕಟ್ಟಬೇಕೆನ್ನುವವರು ನಂಜುಂಡಯ್ಯನವರು, ವಿಶ್ವೇಶ್ವರಯ್ಯನವರಿಗೆ ರಾಜ್ಯವು ಸಾಲವೆತ್ತುವುದೆಂದರೆ ಲಕ್ಷ್ಯವಿಲ್ಲ. ನಂಜುಂಡಯ್ಯನವರಿಗೆ ಸಾಲದ ಜವಾಬ್ದಾರಿಯ ವಿಷಯದಲ್ಲಿ ಹೆದರಿಕೆ. ವಿಶ್ವೇಶ್ವರಯ್ಯನವರ ಮುಖ್ಯ ಗುಣ ಸಾಹಸ. ನಂಜುಂಡಯ್ಯನವರ ಮುಖ್ಯ ಗುಣ ಅಪಾಯ ಭೀತಿ. ಹೀಗಾಗಿ, ಇಬ್ಬರಿಗೂ ಕೆಲವು ವಿಷಯಗಳಲ್ಲಿ ಅಷ್ಟು ಹೊಂದಾವಣೆ ಇರಲಿಲ್ಲ. ಆದರೆ ಈ ಮನೋವೃತ್ತಿ ಭೇದದಿಂದ ಅವರ ಸ್ನೇಹಕ್ಕೆ ಎಳ್ಳಷ್ಟೂ ಕುಂದು ಬರಲಿಲ್ಲ. ವಿಶ್ವೇಶ್ವರಯ್ಯನವರು ನಂಜುಂಡಯ್ಯನವರ ಮಹಾ ಪಾಂಡಿತ್ಯವನ್ನೂ ಪ್ರಾಮಾಣಿಕತೆಯನ್ನೂ ದೇಶಚಿಂತಾತತ್ಪರತೆಯನ್ನೂ ಮನಸಾರ ಗೌರವಿಸಿ, ನಂಜುಂಡಯ್ಯನವರಿಗೆ ಎಲ್ಲ ಸಂದರ್ಭಗಳಲ್ಲಿಯೂ ಮನ್ನಣೆ ತೋರುತ್ತಿದ್ದರು.

ಸುಮಾರು ೧೯೨೦ನೆಯ ಇಸವಿಯಲ್ಲಿ ಮೈಸೂರಿನಲ್ಲಿ ನಂಜುಂಡಯ್ಯನವರು ಕಾಯಿಲೆಯಾಗಿ ಹಾಸಿಗೆ ಹಿಡಿದು ಮಲಗಿದ್ದರು. ಅವರನ್ನು ವಿಚಾರಿಸಿಕೊಂಡು ಬರಲಿಕ್ಕೆಂದು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಇಬ್ಬರು ಮೂವರು ಅವರಲ್ಲಿಗೆ ಹೋಗಿದ್ದರು. ನಂಜುಂಡಯ್ಯನವರು ಅವರನ್ನು, "ಏನು ಈ ಹೊತ್ತಿನ ಸಮಾಚಾರ? ಮೂರುನಾಲ್ಕು ದಿನಗಳಿಂದ ನಾನು ಪೇಪರು ನೋಡುತ್ತಿಲ್ಲ!" ಎಂದರು.

ಆ ಸ್ನೇಹಿತರಲ್ಲೊಬ್ಬರು- “ಷೌಕತ್ತಾಲಿ ಅವರಿಗೆ ತುಂಬಾ ಕೋಪ ಬಂದುಬಿಟ್ಟಿದೆ. ಖಿಲಾಫತ್ ವಿಷಯದಲ್ಲಿ ಇಂಡಿಯದವರು ಯುದ್ಧಕ್ಕೆ ನಿಲ್ಲದಿದ್ದರೆ ಷೌಕತ್ತಾಲಿಯವರು ಅಫಘಾನಿಸ್ಥಾನಕ್ಕೆ ಹೋಗಿಬಿಡುತ್ತಾರಂತೆ” ಎಂದು ಹೇಳಿದರು. ಇದನ್ನು ಕೇಳುತ್ತಲೇ ಮಲಗಿದ್ದ ನಂಜುಂಡಯ್ಯನವರು ಸ್ವಲ್ಪ ಎದ್ದು ಕುಳಿತು “ಹೊರಟುಹೋಗುತ್ತಾರಂತೆಯೆ? ಹೋಗುವ ಮನಸ್ಸಿರುವವರನ್ನು ಕಟ್ಟಿಹಾಕಿಕೊಂಡರೆ ಏನು ಪ್ರಯೋಜನ? ಹೋಗುವವರು ಹೋಗಿಬಿಡಲಿ. ಅದಕ್ಕೆ ಹಣವೇನಾದರೂ ಬೇಕಂತೇನು? ಚಂದಾಹಾಕಿ ಕೊಟ್ಟುಬಿಡೋಣ!” ಎಂದರಂತೆ.

ನಂಜುಂಡಯ್ಯನವರು ಮಹಾ ಧೈರ್ಯಶಾಲಿಗಳು. ತಮ್ಮ ಅಂತಸ್ಸಾಕ್ಷಿಗೆ ನ್ಯಾಯವೆನ್ನಿಸಿದ್ದನ್ನು ಸ್ಪಷ್ಟವಾಗಿ ಹೇಳುವುದರಲ್ಲಿ ಅವರು ಯಾರಿಗೂ ಹೆದರುತ್ತಿರಲಿಲ್ಲ. ಎಲ್ಲ ಪ್ರಶ್ನೆಗಳನ್ನೂ ಕೂಲಂಕಷವಾಗಿ ವಿಮರ್ಶನ ಮಾಡುವುದು ಅವರ ನೈಜಗುಣ. ಪ್ರತಿಯೊಂದು ಪ್ರಶ್ನೆಗೂ ಎರಡು ಮೂರು ಪಕ್ಕಗಳುಂಟೆಂಬುದನ್ನು ತೋರಿಸಿಕೊಡುವುದನ್ನು ಅವರು ತಮ್ಮ ಕರ್ತವ್ಯವೆಂದೆಣಿಸಿದ್ದರು. ಕೋರ್ಟಿನಲ್ಲಿ ಒಬ್ಬ ಲಾಯರು ಒಂದು ಪಕ್ಷವನ್ನು ಹಿಡಿದು ವಾದಿಸುತ್ತಿದ್ದಾಗ ಆತನ ವಾದದಮೇಲೆ ನಂಜುಂಡಯ್ಯನವರು ಒಂದು ಆಕ್ಷೇಪವನ್ನು ಸೂಚಿಸುವರು. ಆಮೇಲೆ ಪ್ರತಿಕಕ್ಷಿಯ ಪರವಾಗಿ ವಾದಿಸಿದ ಲಾಯರಿಗೂ ಅದೇ ರೀತಿ ಅಡ್ಡಮಾತನ್ನೆತ್ತುವರು. ಇದರಿಂದ ಇಬ್ಬರು ವಕೀಲರಿಗೂ ತಬ್ಬಿಬ್ಬಲಾಗುತ್ತಿತ್ತು. ಯಾರಾದರೂ ತಮ್ಮ ಪಕ್ಷವೇ ಸರಿ ಎಂದು ಹಟ ಹಿಡಿದರೆ ಆ ಹಟದ ಗಾಳಿ ಗುಳ್ಳೆಯನ್ನೊಡೆಯುವುದರಲ್ಲಿ ನಂಜುಂಡಯ್ಯನವರಿಗೆ ಬಲು ಸಂತೋಷ. ನ್ಯಾಯಸ್ಥಾನದಲ್ಲಿ ಮಾತ್ರವೇ ಅಲ್ಲ, ಎಲ್ಲ ಕ್ಷೇತ್ರಗಳಲ್ಲಿಯೂ ಉಭಯಪಕ್ಷತೋಲನವೇ ನಂಜುಂಡಯ್ಯನವರ ವಿಶೇಷ ಗುಣ. ಅವರಿಗೆ ಸಮಾಜಸಂಸ್ಕಾರ ವಿಚಾರದಲ್ಲಿಯೂ ಆಸಕ್ತಿಯಿತ್ತು. ನಮ್ಮ ಮತಾಚಾರ ಸಂಸ್ಥೆಗಳನ್ನು ಪರಿಷ್ಕಾರ ಪಡಿಸಬೇಕೆಂದು ಅವರು ಅಭಿಪ್ರಾಯಪಟ್ಟಿದ್ದರು. ಮತ್ತು ತದನುಸಾರವಾಗಿ ಗುಡಿ ಮಠಗಳ ಆಡಳಿತಗಳ ಸಂಸ್ಕರಣಕ್ಕಾಗಿ ಕಾನೂನನ್ನೂ ಮಾಡಿಸಿದರು. ಆದರೂ ಅವರು ಪೂರ್ವಾಚಾರದಲ್ಲಿ ಶ್ರದ್ಧೆ ತೊರೆದಿದ್ದವರಲ್ಲ. ಪ್ರಗತಿ ಪಕ್ಷದವರಿಗೆ ಅವರು ಸಂಪ್ರದಾಯ ಶರಣರಂತೆಯೂ ಸಂಪ್ರದಾಯಸ್ಥರಿಗೆ ಅವರು ಪ್ರಗತಿಪರರಂತೆಯೂ ಕಾಣಿಸುತ್ತಿದ್ದರು. ಇದರ ಅಂತರಂಗವೇನೆಂದರೆ-ಅವರ ನಾನಾ ಪಕ್ಷಗುಣ ದರ್ಶನ ಮತ್ತು ತದ್ಗುಣ ಸಮನ್ವಯ ಪ್ರವೃತ್ತಿ. ರಾಜ್ಯದಲ್ಲಿಯೂ ಸಮಾಜದಲ್ಲಿಯೂ ಆರ್ಥಿಕ ವ್ಯವಸ್ಥೆಯಲ್ಲಿಯೂ ಬಂಧನಗಳನ್ನು ಸಡಲಿಸಬೇಕು, ಆದರೆ ವ್ಯವಸ್ಥೆಯು ಕೆಡದಂತೆ ಸಡಲಿಸಬೇಕು. ಸ್ವಾತಂತ್ರ್ಯವಿರಬೇಕು; ಆದರೆ ಆ ಸ್ವಾತಂತ್ರ್ಯವು ಒಂದು ವಿಹಿತ ಕ್ರಮದ ಚೌಕಟ್ಟಿನೊಳಗಡೆ ಸೇರಿಸಬೇಕು-ಇದು ಅವರ ತತ್ತ್ವ. ಈ ತೆರದ ಮನೋಭಾವವನ್ನು ಇಂಗ್ಲಿಷಿನಲ್ಲಿ “ಲಿಬರಲಿಸಮ್” ಎಂದರೆ “ಮಿತವೇಗ ಸ್ವಾತಂತ್ರ್ಯವಾದ” ಎಂದು ಕರೆಯುತ್ತಾರೆ. ಎಲ್ಲ ಮಾನುಷ

ಪ್ರಶ್ನೆಗಳೂ ದ್ವಿಮುಖವಾದವು; ಆ ಎರಡರಲ್ಲಿ ಯಾವ ಒಂದನ್ನು ನಿರಾಕರಿಸಿದರೂ ಹಾನಿಯೇ-ಎಂಬುದು ಆ ತತ್ತ್ವದ ತಿರುಳು. ಪ್ರಗತಿ ಬೇಕು; ಅದರಲ್ಲಿ ಒಂದು ಕ್ರಮಾನುಸರಣೆ ಇರಬೇಕು. ಮುನ್ನಡೆ ನಡೆಯಬೇಕು, ಆದರೆ ಅದರ ವೇಗ ತಲೆ ತಿರುಗಿಸುವಷ್ಟಾಗಬಾರದು. ಈ ತೆರದ ನಂಬಿಕೆ ನಂಜುಂಡಯ್ಯನವರದು.

ಮೈಸೂರು ಪಾರ್ಟಿಗೆ ನಂಜುಂಡಯ್ಯನವರು ಬುದ್ಧಿನಿಧಿ(ಬ್ರೆಯಿನ್ ಟ್ರಸ್ಟ್). ಅವರು, ಡಿ.ವೆಂಕಟರಾಮಯ್ಯನವರು, ಎಂ.ವೆಂಕಟಕೃಷ್ಣಯ್ಯನವರು-ಈ ಮೂವರೂ ಒಂದೇ ಧ್ಯೇಯಕ್ಕಾಗಿ ಮೂರು ದೇಹಗಳಲ್ಲಿ-ಮೂರು ವಿಧಗಳಲ್ಲಿ-ದುಡಿದವರು. ಆ ಮೂವರೂ ಆಪ್ತಮಿತ್ರರು, ಅವರಲ್ಲಿ ಯಾರೂ ಯಾವ ಕೆಲಸವನ್ನೂ ಮಿಕ್ಕಿಬ್ಬರ ಮಂತ್ರಾಲೋಚನೆಯಿಲ್ಲದೆ ಮಾಡುತ್ತಿರಲಿಲ್ಲ.

# ೬

# ಡಾಕ್ಟರ್ ಅಚ್ಯುತರಾಯರು

ಕರ್ನಾಟಕ ಸಾಹಿತ್ಯ ಪರಿಷತ್ತಿನ ಮೂಲಸ್ಥಾಪಕರಲ್ಲಿ ಮುಖ್ಯರಾದವರು ನಾಲ್ಕು ಮಂದಿ: (೧) ಎಚ್.ವಿ.ನಂಜುಂಡಯ್ಯನವರು, (೨) ಕರ್ಪೂರ ಶ್ರೀನಿವಾಸರಾಯರು, (೩) ಪಿ.ಎಸ್.ಅಚ್ಯುತರಾಯರು, (೪) ಆರ್.ರಘುನಾಥರಾಯರು.

ಡಾಕ್ಟರ್ ಪಿ.ಎಸ್.ಅಚ್ಯುತರಾಯರು ಆಗ್ಗೆ (೧೯೧೫)ಸಂಸ್ಥಾನದ ಸೀನಿಯರ್ ಸರ್ಜನ್ ಆಗಿದ್ದರು. ದಿವಾನ್ ವಿಶ್ವೇಶ್ವರಯ್ಯನವರು ಎಕನಾಮಿಕ್ ಕಾನ್‌ಫರೆನ್ಸ್ ಸಂಸ್ಥೆಯ ವಿದ್ಯಾ ಸಮಿತಿಯ ಮೂಲಕ ಕನ್ನಡದ ಅಭಿವೃದ್ಧಿಗಾಗಿ ಏನೇನು ಆಗಬೇಕಾಗಿದೆಯೆಂಬುದನ್ನು ಪರ್ಯಾಲೋಚನೆ ಮಾಡಿಸಿ ಅದರ ಫಲವಾಗಿ ಪರಿಷತ್ತನ್ನು ಸ್ಥಾಪನೆ ಮಾಡಿಸಬೇಕೆಂದು ತಿರ್ಮಾನಿಸಿ, ಆ ಬಗ್ಗೆ ತಕ್ಕ ಕಾರ್ಯಕ್ರಮವನ್ನು ನಡೆಸಲು ಒಂದು ಉಪಸಮಿತಿಯನ್ನು ನೇಮಿಸಿದರು. ಆ ಉಪಸಮಿತಿಗೆ ಡಾ ॥ ಅಚ್ಯುತರಾಯರನ್ನು ಒಬ್ಬ ಸದಸ್ಯರನ್ನಾಗಿ ನಿಯಮಿಸಿದರು.

ಡಾ ॥ ಅಚ್ಯುತರಾಯರನ್ನು ಆಗ್ಗೆ ಸಮೀಪದಿಂದ ತಿಳಿಯದಿದ್ದ ನನ್ನಂಥವರಿಗೆ ಅದು ಸ್ವಲ್ಪ ಆಶ್ಚರ್ಯಕಾರಣವಾಯಿತು. ಏಕೆಂದರೆ ಅಚ್ಯುತರಾಯರು ಹುಟ್ಟು ಕನ್ನಡಿಗರೇ ಆಗಿದ್ದಾಗ್ಯೂ ಅವರಿಗೆ ಭಾಷಾಪಾಂಡಿತ್ಯವುಂಟೆಂದಾಗಲಿ ಸಾಹಿತ್ಯೋತ್ಸಾಹವುಂಟೆಂದಾಗಲಿ ಆವರೆಗೆ ಯಾರಿಗೂ ತೋರಿರಲಿಲ್ಲ. ಅಚ್ಯುತರಾಯರು ಸಮರ್ಥರಾದ ವೈದ್ಯರು; ಜನಾನುರಾಗಿಗಳು; ಸ್ನೇಹ ವಿನೋದಶೀಲರು. ಇಷ್ಟು ಎಲ್ಲರಿಗೂ ತಿಳಿದಿದ್ದದ್ದು. ಇದರಲ್ಲಿ ಭಾಷಾ ಸೇವೆಯ ಅಂಕುರವನ್ನು ಕಾಣುವುದು ಸುಲಭವಾಗಿರಲಿಲ್ಲ.

ಕನ್ನಡದಲ್ಲಿ ಹೆಸರುವಾಸಿಯಾದ ವಿದ್ವಾಂಸರೂ ಉತ್ಸಾಹಿಗಳೂ ಆಗಿದ್ದ ಆರ್. ರಘುನಾಥರಾಯರು ಅಚ್ಯುತರಾಯರ ಆಪ್ತ ಮಿತ್ರರು.ರಘುನಾಥರಾಯರು ಪರಿಷತ್ಕಾರ್ಯದಲ್ಲಿ ಮುಂದಾಳಾಗಿದ್ದದ್ದು ಸ್ವಾಭಾವಿಕ. ಅವರು ತಮ್ಮ ಸಹಾಯಕ್ಕಾಗಿ ಅಚ್ಯುತರಾಯರಿರಬೇಕೆಂದು ಬಯಸಿ ಅವರ ಹೆಸರನ್ನು ಶಿಫಾರಸು ಮಾಡಿರಬಹುದೆಂದೂ ರಘುನಾಥರಾಯರ ದಾಕ್ಷಿಣ್ಯಕ್ಕೆ ವಶರಾಗಿ ಅಚ್ಯುತರಾಯರು ಒಪ್ಪಿಕೊಂಡಿರಬಹುದೆಂದೂ ನಾನು ಊಹಿಸಿಕೊಂಡೆ. ವಾಸ್ತವಾಂಶವೆಂತಾದರೂ ಇರಲಿ, ಆ ಸಮಿತಿಯ

ಸದಸ್ಯರಾಗಿ ಅಚ್ಯುತರಾಯರು ತೋರಿಸಿದ ಶ್ರದ್ಧಾಸಕ್ತಿಗಳು ಯಾವ ಅಭಿಮಾನಿಯದಕ್ಕಿಂತಲೂ ಕಡಿಮೆಯದಾಗಿರಲಿಲ್ಲ, ಪರಿಷತ್ತಿನ ಸ್ಥಾಪನೆಯ ಕಾಲದ ಕೆಲಸಗಳಲ್ಲಿ ನಾನು ಪ್ರತ್ಯಕ್ಷಭಾಗಿಯಾಗಿದ್ದೆ. ಅಚ್ಯುತರಾಯರ ಸಂಭ್ರಮಾದರಗಳನ್ನು ನೋಡಿ ಸಂತೋಷಿಸುವ ಯೋಗ ಆಗ ನನಗೆ ದೊರೆಯಿತು. ಅವರಿಗೂ ನನಗೂ ಬಳಕೆ ಬೆಳೆದದ್ದು ಆಗ.

ಅಚ್ಯುತರಾಯರ ಸ್ವಭಾವವನ್ನು ನಿದರ್ಶನಪಡಿಸುವ ಸಂಗತಿಯೊಂದನ್ನು ನಾನು ಹೇಳಬೇಕಾದರೆ, ಅದು ಇದು: ಅವರಿಗೂ ನನಗೂ ವಯಸ್ಸಿದಲ್ಲಿ ಅಂತರ ಮೂವತ್ತು ವರ್ಷಗಳಿಗೆ ಮೇಲ್ಪಟ್ಟಿತ್ತು. ಲೋಕಾನುಭವದಲ್ಲಿಯೂ ಅದರಿಂದ ಬರುವ ಪ್ರಾಜ್ಞತೆಯಲ್ಲಿಯೂ ಅಧಿಕಾರ ಪ್ರಶಸ್ತಿಗಳಲ್ಲಿಯೂ ಅವರೊಡನೆ ನಾನು ಎಷ್ಟು ಮಾತ್ರವೂ ಹೋಲಿಸಿಕೊಳ್ಳತಕ್ಕವನಾಗಿರಲಿಲ್ಲ. ಅವರಿಗೂ ನನಗೂ ಎಲ್ಲ ದೃಷ್ಟಿಗಳಿಂದಲೂ ಅಜಗಜಾಂತರವಿದ್ದರೂ ಅವರು ಯಾವಾಗಲೂ ನನ್ನನ್ನು ಸಮಾನಸ್ಕಂಧನೆಂದೇ-ಸರಿಸಮನಾದ ಸ್ನೇಹಿತನೆಂಬಂತೆಯೇ-ಕಾಣುತ್ತಿದ್ದರು. ಮಾತುಕಥೆಯಲ್ಲಿ ಅಷ್ಟು ಸಲಿಗೆ-ಅಷ್ಟು ಬಿಚ್ಚಿದ ಮನಸ್ಸು. ಅವರು ಇತರ ಸ್ನೇಹಿತರ ಮನೆಗೆ ಹೋಗುವಂತೆ ಈ ಬಡವನ ಮನೆಗೂ ಅವನ ಕೆಲಸದ ಜಾಗಕ್ಕೂ ಎಷ್ಟೋ ಸಾರಿ ಬರುತ್ತಿದ್ದರು. ಅವರು ವಿಶ್ರಾಂತರಾದಮೇಲೆ ಬೆಳಿಗ್ಗೆಯೂ, ಸಂಜೆಯೂ ವಾಯು ವಿಹಾರಕ್ಕಾಗಿ ಸಂಚಾರ ಹೊರಟಾಗ ನನ್ನನ್ನು ಹುಡುಕಿಕೊಂಡು ಬಂದದ್ದುಂಟು. ಇಬ್ಬರೂ ಒಟ್ಟಿಗೆ ಹೋಗುತ್ತಿದ್ದಾಗ ನಾನು ದಾರಿಯಲ್ಲಿ ಎಲ್ಲಾದರೂ ಸ್ವಂತ ಕೆಲಸಕ್ಕಾಗಿ ಸೊಸೈಟಿಗೋ, ಅಂಗಡಿಗೋ, ಬ್ಯಾಂಕಿಗೋ ಹೋಗಬೇಕೆಂದರೆ ಅವರು- "ನೀವು ಅಲ್ಲಿಗೆ ಹೋಗಿ ನಿಮ್ಮ ಕೆಲಸ ಮುಗಿಸಿಕೊಂಡು ಬನ್ನಿ. ನಾನು ಇಲ್ಲಿಯೇ ಹೊರಗಡೆ ಠರಾಯಿಸುತ್ತಿರುತ್ತೇನೆ. ನೀವು ಬಂದ ಮೇಲೆ ಮುಂದಕ್ಕೆ ಹೋದರಾಯಿತು" ಎನ್ನುತ್ತಿದ್ದರು. ನಾನು "ತಮಗೆ ತೊಂದರೆಯಾಗುತ್ತದೆಯಲ್ಲ" ಎಂದು ಪ್ರತಿ ಹೇಳಿದರೆ- "ನನಗೇನಯ್ಯ ತೊಂದರೆ? ನಾನು ಹೊರಟಿರುವುದು ವಾಕಿಂಗಿಗೆ. ಇಲ್ಲಿ ತಿರುಗಾಡಿದರೂ ವಾಕಿಂಗ್ ಅಲ್ಲವೆ?" ಎಂದು ಸಮಾಧಾನ ಹೇಳುವರು. ಈ ವಿನಯವನ್ನು, -ಈ ಕೇವಲ ಮಾನವೀಯ ಸರಳತೆಯನ್ನು- ಅಚ್ಯುತರಾಯರ ಗುಣಮಾಲೆಯಲ್ಲಿ ನಾಯಕ ಮಣಿ ಎಂದು ಹೇಳಬಹುದು.

ಮೈಸೂರು ಜಿಲ್ಲೆಯಲ್ಲಿ ಪ್ಲೇಗು ಮೊದಲು ತಲೆಹಾಕಿದಾಗ ಅದನ್ನು ತಡೆಗಟ್ಟಲು ಸರಕಾರವು ಜನದಮೇಲೆ ನಿರ್ಬಂಧಪಡಿಸಿದ ಉಪಾಯಗಳಲ್ಲಿ 'ಇನಾಕ್ಯುಲೇಷನ್' ಒಂದು. ಆದರೆ ಅದು ಜನಸಾಮಾನ್ಯಕ್ಕೆ ಸರಿಯೆಂದೆನಿಸಲಿಲ್ಲ. ಪ್ಲೇಗ್ ಎಂಬುದು ಮಾರಿಕಾ ದೇವತೆಯ ಒಂದು ಆಗ್ರಹ ರೂಪದೆಂದೂ, ಅದಕ್ಕೆ ಮದ್ದಿಲ್ಲವೆಂದೂ, ಪರಂಗಿ ರೀತಿಯ ಚಿಕಿತ್ಸಾ ಪ್ರಯತ್ನದಿಂದ ದೇವಿಯ ಕೋಪ ಮತ್ತಷ್ಟು ಹೆಚ್ಚೀತೆಂದೂ

ಭಾವನೆಯಾಗಿತ್ತು. ಈ ಕಾರಣದಿಂದ ಅನೇಕ ಕಡೆ ಜನರು ಇನಾಕ್ಯುಲೇಷನ್ ಪ್ರಯತ್ನಕ್ಕೆ ವಿರೋಧವಾಗಿ ಪ್ರತಿಭಟಿಸಿ ನಿಂತರು. ಶ್ರೀರಂಗಪಟ್ಟಣ, ಗಂಜಾಂ, ಚಿಕ್ಕಬಳ್ಳಾಪುರ ಮುಂತಾದ ಪ್ರದೇಶಗಳಲ್ಲಿ ಜನ ದಂಗೆಯೇಳುವವರೆಗೂ ಹೋಗಿದ್ದರು. ದೇಶದಲ್ಲಿ ಹೀಗೆ ಗೊಂದಲವೂ ಆವೇಶವೂ ಉಂಟಾಗಿದ್ದರೂ ಅಚ್ಯುತರಾಯರಿದ್ದ ಕಡೆ ಅವರ ಒಳ್ಳೆಯತನದಿಂದ ಇನಾಕ್ಯುಲೇಷನ್ ಕಾರ್ಯ ತಕ್ಕ ಮಟ್ಟಿಗೆ ಸಮಾಧಾನವಾಗಿ ಸಾಗಿತು. ಆಗಿನ ಒಬ್ಬ ಕವಿ ಹೀಗೆ ಹಾಡಿದ್ದನಂತೆ:

ಅಚ್ಯುತಂ ಚುಚ್ಚುತಂ
ಹಚ್ಚುತಂ ಹೆಚ್ಚಿನಿಂ
ಬೆಚ್ಚಗಾಗಿದ್ದ ಮೈ-
ಗಿಕ್ಕುತಂ ತಿಕ್ಕುತಂ

ಈ ಕವಿತೆಯ ಮಿಕ್ಕಭಾಗ ಕೊಂಚ ನೆನಪಿನಿಂದ ಅಳಿಸಿಹೋಗಿದೆ. ಉಳಿದದ್ದನ್ನು ಅಚ್ಚು ಮಾಡುವ ಹಾಗಿಲ್ಲ.

ಅಚ್ಯುತರಾಯರು ಕರುಣಾಳು, ಕೊಡುಗೈಯವರು, ಬಡಬಗ್ಗರ ಬಂಧು. ಎಷ್ಟೋ ಮಂದಿಗೆ ಔಷಧಿಕೊಟ್ಟು- "ಆರೈಕೆಯಾಗಬೇಕಲ್ಲೋ ನಿನಗೆ! ಹಾಲು ಹಣ್ಣು ಉಪಚಾರ ಆದರೆ ವಾಸಿಯಾಗುತ್ತದೆ, ನಿನ್ನ ಕಾಯಿಲೆ" -ಎಂದು ಹೇಳುವರು. ಅವನು ತಾನು ಬಡವನೆಂದರೆ ಜೇಬಿನಿಂದ ಐದೋ ಹತ್ತೋ ರೂಪಾಯಿ ತೆಗೆದು ಅವನ ಕೈಯಲ್ಲಿಟ್ಟು "ಒಳ್ಳೆಯ ಪದಾರ್ಥ ತಿನ್ನು" ಎಂದು ಹೇಳಿ ಕಳಿಸುವರು. ಅವರಿಂದ ಹೀಗೆ ಉಪಕಾರ ಪಡೆದವರು ನೂರಾರು ಮಂದಿ. ಅದರಲ್ಲಿಯೂ ಪ್ಲೇಗು ಮೊದಲಾದ ಸಾಂಕ್ರಾಮಿಕ ಉಪದ್ರವಗಳ ಕಾಲದಲ್ಲಿ ಇಂಥ ಸಂದರ್ಭಗಳು ದಿನದಿನವೂ ಒಂದೆರಡಾದರೂ ನಡೆಯುತ್ತಿದ್ದವು. ಜ್ಞಾನಿಯಾದವನು ಲೋಕವಿಷಯದಲ್ಲಿ ಬೇಸರಪಡಲಾರನೆಂದು ("ತತೋ ನ ವಿಜುಗುಪ್ಸತೇ") ಉಪನಿಷತ್ತು ಹೇಳುತ್ತದೆ. ಅಚ್ಯುತರಾಯರು ವೇದಾಂತ ಗ್ರಂಥಗಳನ್ನೋದಿದ್ದವರಲ್ಲ. ಆದರೂ ಅವರು ಲೋಕವಿಷಯದಲ್ಲಿ ಜುಗುಪ್ಸೆ ಮಾಡಿಕೊಂಡಿರಲಿಲ್ಲ. ತಾವು ನಗುಮುಖದಿಂದಿದ್ದು ಲೋಕದಲ್ಲಿ ನಗುಮುಖ ಕಾಣಬೇಕೆಂದು ಆಶಿಸಿದ್ದವರು ಅವರು. ಹೂವನ್ನು ಕಂಡಾಗ ಅವರ ಕಣ್ಣು ಅರಳುತ್ತಿತ್ತು; ಅದು ಕೈಗೆ ಎಟುಕಿದಾಗ ಅದರ ಮಧುವಿಗೆ ಅವರ ತುಟಿ ಬಿರಿಯುತ್ತಿತ್ತು. ಹೀಗೆ ಎರಡು ಕೈಗಳಿಂದಲೂ ಜೀವನದ ಮಧುವನ್ನು ಸವಿದವರು ಅವರು. ಲೋಕದ ಸ್ವಾರಸ್ಯಗಳನ್ನು ಹೀರುವುದರಲ್ಲಿ ಅವರು ಹುಸಿ ನಾಚಿಕೆ ಪಟ್ಟವರಲ್ಲ. ಈಶ್ವರನು ಒಂದು ಕಡೆ ನಾಲಗೆಯನ್ನೂ ಇನ್ನೊಂದು ಕಡೆ ಜೇನನ್ನೂ ಸೃಷ್ಟಿ ಮಾಡಿರುವುದು ಮನುಷ್ಯನು ಅವೆರಡನ್ನೂ ಜೊತೆಗೂಡಿಸಿಕೊಳ್ಳಬೇಕೆಂದೇ-ಎಂದು ಅವರು

ನಂಬಿದ್ದರು. ವಿರಕ್ತಿಯ ನಟನೆಯಲ್ಲಿ ಅವರಿಗೆ ಸಹನೆಯಿರಲಿಲ್ಲ. ತಾವು ನೇಮಿಷ್ಠರೆಂದು ಅವರು ತೋರಿಸಿಕೊಂಡವರಲ್ಲ.

ಒಂದು ದಿನ ಸಂಜೆ ಚಾಮರಾಜಪೇಟೆಯ 'ಈದ್ಗಾ' ಹತ್ತಿರ 'ವಾಕಿಂಗ್' ಹೋಗುತ್ತಿದ್ದೆವು. ಅಚ್ಯುತರಾಯರು- "ಏನಪ್ಪಾ, ಇಲ್ಲೊಂದು ಕಡೆ ಒಂದು ಮನೆ ತೋರಿಸ್ತೇನೆ, ಅದರ ಒಳಗೆ ಹೋಗಿ ನೋಡಿಕೊಂಡು ಬರ್ತೀರಾ?" ಎಂದರು.

ನಾನು: ಅಲ್ಲೇನಿದೆ?

ಅ: ಏನಿದೆಯೋ ನೀವೇ ನೋಡಿಕೊಂಡು ಬನ್ನಿ.

ನಾನು: ಅದು ಯಾರ ಮನೆಯೋ!

ಅ: ಈಗ ಅದರೊಳಗೆ ಇರುವವರು ಪಾಪವೇನೂ ಮಾಡದ ಪುಣ್ಯಾತ್ಮರು. ಯಾರೂ ಮಾಡದ್ದನ್ನು ನಾನು ಮಾಡಿದ್ದೇನೆ ಎಂತ ಜನ ಆಡಿಕೋತಾರಲ್ಲ! ಇರಲಿ; ನಾನು ಪಾಪಿಷ್ಠನಿರಬಹುದು ಡಾ ll...ಅವರು ಬಹಳ ಮಡಿವಂತರು ಅಂತಲ್ಲವೇ ಜನ ಹೇಳೋದು. ಅವರು ಈಗ ಅಲ್ಲೇನು ಮಾಡುತ್ತಾರೋ ಕಣ್ಣಿಂದ ಕಂಡರಲ್ಲವೆ ನಿಜ ಗೊತ್ತಾಗುವುದು.

ನಾನು: ನನಗೆ ಅಂಥಾ ರುಜುವಾತೇನೂ ಬೇಕಾಗಿಲ್ಲ. ಪುಣ್ಯಪಾಪ ವಿಮರ್ಶೆಗೆ ನಾನು ಹೋಗತಕ್ಕವನೇ ಅಲ್ಲ. ಯಾವ ಯಾವ ಜೀವಕ್ಕೆ ಎಲ್ಲೆಲ್ಲಿ ನೆಮ್ಮದಿಯೋ ಯಾರು ಕಂಡವರು? ದೇವರು ಮಾಡಬೇಕಾದ ಕೆಲಸಕ್ಕೆ ನಾನು ಹೇಗೆ ಕೈ ಹಾಕಲಿ?

ಈ ನನ್ನ ಮಾತು ರಾಯರಿಗೆ ಮೆಚ್ಚಿಕೆಯಾಯಿತೆಂದು ತೋರುತ್ತದೆ.

ಅಚ್ಯುತರಾಯರು ದೊಡ್ಡ ಕುಟುಂಬಿಗಳು; ವಿಸ್ತಾರವಾದ ಬಂಧುವರ್ಗಕ್ಕೂ ಆಶ್ರಿತವರ್ಗಕ್ಕೂ ಪೋಷಕರಾಗಿದ್ದವರು. ಆ ಕಾಲಕ್ಕೆ ಅವರ ಹುದ್ದೆ ಸಂಬಳ ಭಾರಿಯಾದವು. ಆದರೂ ಅವರು ಐಶ್ವರ್ಯವಂತರಾಗಲಿಲ್ಲ. ಎರಡು ಕೈಗಳಿಂದಲೂ ಸಂಪಾದನೆ ಮಾಡಿ ಎರಡೆರಡು ಕೈಗಳಿಂದ ವೆಚ್ಚ ಮಾಡಿದರು. ಅವರು ಬಿಟ್ಟುಹೋಗಿರುವುದು ಒಂದು ಸವಿಯಾದ ನೆನಪು-ಅವರನ್ನು ಬಲ್ಲವರ ನೆನಪಿನಿಂದ ಎಂದಿಗೂ ಅಳಿಸಿಹೋಗದ ಒಳ್ಳೆಯ ಹೆಸರು.

# ೭

# ಪ್ರೊ॥ ಬಿ. ವೆಂಕಟನಾರಣಪ್ಪನವರು

ಶ್ರೀಮಾನ್ ವೆಂಕಟನಾರಣಪ್ಪನವರು ಅನೇಕ ಕಾರಣಗಳಿಂದ ನಮ್ಮೆಲ್ಲರ ಶಾಶ್ವತವಾದ ಕೃತಜ್ಞತೆಗೂ ಗೌರವಕ್ಕೂ ಪಾತ್ರರಾಗಿದ್ದಾರೆ. [1] ಆ ನಾನಾ ಕಾರಣಗಳನ್ನು ಮೂರು ಮುಖ್ಯ ಜಾತಿಗಳಾಗಿ ವಿಂಗಡಿಸಬಹುದು: ಮೊದಲನೆಯದು, ಅವರು ಈ ಕ್ಲಬ್ಬಿನ ಸ್ಥಾಪಕರೆಂಬುದು. ಎರಡನೆಯದು, ಅವರು ಆದರ್ಶಪ್ರಾಯದ ಪೌರಜನ ಎಂಬುದು. ಮೂರನೆಯದು, ಅವರು ಕೇವಲ ಮನುಷ್ಯತ್ವದ ದೃಷ್ಟಿಯಿಂದಲೇ ಸನ್ಮಾನ್ಯರೆಂಬುದು.

ಈಗ್ಗೆ ಸುಮಾರು ೫೦ ವರ್ಷಗಳ ಕೆಳಗೆ ಬಸವನಗುಡಿಯ ಬಡಾವಣೆ ಇನ್ನೂ ಪ್ರಾರಂಭದಶೆಯಲ್ಲಿದ್ದಾಗ, ವೆಂಕಟನಾರಣಪ್ಪನವರು ಈ ಪ್ರದೇಶದಲ್ಲಿ ಮನೆಕಟ್ಟುವ ಆಲೋಚನೆ ಮಾಡಿದರು. ನಾಲ್ಕಾರು ಮನೆಗಳಾದ ಮೇಲೆ ಇಲ್ಲಿಯ ಸದ್ಗೃಹಸ್ಥರು ಸ್ನೇಹಭಾಗದಲ್ಲಿ ಒಂದು ಕಡೆ ಸೇರಿ ಸಂತೋಷದಿಂದ ಕಾಲ ಕಳೆಯಲು ಒಂದು ಗೊತ್ತಾದ ಜಾಗ ಅವಶ್ಯವೆಂಬುದು ಅವರ ಮನಸ್ಸಿಗೆ ಬಂತು. ಆಗ ಅವರೂ ಇನ್ನಿಬ್ಬರು ಮೂವರು ಮಿತ್ರರೂ ಸೇರಿ ಈ ಗೋಷ್ಠೀ ಮಂದಿರದ ಆಲೋಚನೆಯನ್ನು ನಡಸಿದರು. ಕಟ್ಟಡಕ್ಕೆ ಜಾಗ ಸಿಕ್ಕಿದಮೇಲೆ, ಕಟ್ಟಡವನ್ನೆಬ್ಬಿಸಲು ವೆಂಕಟನಾರಣಪ್ಪನವರು ಮುಂದೆ ನಿಂತರು. ಆಗ ಆ ಕೆಲಸಕ್ಕಿದ್ದ ದ್ರವ್ಯಾನುಕೂಲ ಬಹು ಸಂಕೋಚವಾದದ್ದು. ಆದದ್ದರಿಂದ ಎಷ್ಟೋ ದೇಹಶ್ರಮದ ಕೆಲಸಗಳನ್ನು ವೆಂಕಟನಾರಣಪ್ಪನವರು ಸ್ವತಃ ನಿರ್ವಹಿಸಿದರು. ಇಟ್ಟಿಗೆಗಾಡಿ ಬಂದ ಕೂಡಲೆ, ಇಟ್ಟಿಗೆಗಳನ್ನು ಅದರಿಂದ ಇಳಿಸಿ, ಎಣಿಸಿ ಗೊತ್ತಾದ ಕಡೆ ರಾಶಿ ಹೊಯ್ಯುವ ಕೆಲಸಗಳನ್ನು ಅವರು ಸ್ವಂತ ಕೈಯಿಂದ ಮಾಡಿದರು. ಮಣ್ಣು-ಶೇರುಕಲಸಿ ಸ್ವತಃ ಗೋಡೆ ಕಟ್ಟಿದರು. ಈಗ ಸುಂದರವಾಗಿ ಕಾಣುತ್ತಿರುವ ಈ ಮಂದಿರದ ಗೋಡೆಗಳಲ್ಲಿ ಒಂದಿಷ್ಟು ಭಾಗ ಅವರ ಕೈಯಿಂದ ಆದದ್ದು ಸೇರಿಕೊಂಡಿದೆ.

ಕಟ್ಟಡವನ್ನೆಬ್ಬಿಸುವುದಕ್ಕಿಂತ ಹೆಚ್ಚಾದದ್ದು ಈ ಗೋಷ್ಠಿಯ ಕಾರ್ಯನಿರ್ವಾಹಕ್ಕಾಗಿ ಅವರು ಪಟ್ಟ ಪಾಡು. ಚಂದಾ ವಸೂಲು ಮಾಡುವುದು ಆ ಕಾಲದಲ್ಲೂ ಸುಲಭದ ಕೆಲಸವಾಗಿರಲಿಲ್ಲ. ಸದಸ್ಯ ಪುಸ್ತಕವನ್ನೂ ರಸೀದಿ ಪುಸ್ತಕವನ್ನೂ ವೆಂಕಟನಾರಣಪ್ಪನವರು ಕಂಕುಳಲ್ಲಿರಿಸಿಕೊಂಡು ಮನೆಮನೆಗೂ ಅಲೆದಲೆದು

ನಕ್ಷತ್ರಿಕನೆಂಬ ಬಿರುದನ್ನು ಸಂಪಾದಿಸಿಕೊಂಡರು. ಗೋಷ್ಠಿಯ ವಾಚನಾಲಯಕ್ಕಾಗಿ ತರಿಸುತ್ತಿದ್ದ ಪತ್ರಿಕೆ ಪುಸ್ತಕಗಳನ್ನು ಸದಸ್ಯರೂ ಸ್ನೇಹಿತರೂ ಕಾರ್ಯದರ್ಶಿಗೆ ತಿಳಿದಂತೆಯೂ ತಿಳಿಯದಂತೆಯೂ ಸಾಲ ತೆಗೆದುಕೊಂಡು ಹೋಗಿ ಕಾಲಕ್ಕೆ ಸರಿಯಾಗಿ ವಾಪಸುಮಾಡದೆ ಉಳಿಸಿಕೊಂಡಿರುತ್ತಿದ್ದರು; ವಾಪಸು ಕೊಟ್ಟವರು ಎಷ್ಟೋ ಸಲ ಪುಸ್ತಕದ ಚಿತ್ರಪಟಗಳನ್ನು ಹರಿದುಕೊಂಡೋ ಪತ್ರಿಕೆಯನ್ನು ನಲುಗಿಸಿ ಮಾಸಲು ಮಾಡಿಯೋ ಹಿಂತಿರುಗಿಸುತ್ತಿದ್ದರು. ಇಂಥ ಅಕ್ರಮಗಳನ್ನು ತಿದ್ದುವ ಪ್ರಯತ್ನದಲ್ಲಿ ವೆಂಕಟನಾರಣಪ್ಪವವರು ಹೆದರಿದವರಲ್ಲ. ಆ ಕರ್ಮ ಶ್ರದ್ಧೆಗಾಗಿ ಅವರಿಗೆ ದೊರೆತ ಪ್ರತಿಫಲ ಬರಿಯ ನಿಷ್ಠುರ!

ಈ ಸಂಸ್ಥೆಯ ವಿಷಯದಲ್ಲಿ ಅವರು ಹೆಚ್ಚಾದ ಆಶೆ ಇಟ್ಟುಕೊಂಡಿದ್ದರು. ನನ್ನನ್ನು ಎರಡು ಮೂರು ಸಲ ಇಲ್ಲಿಗೆ ಕರೆದುಕೊಂಡು ಬಂದು ಇಸ್ಪೀಟ್ ಆಟ ಹೇಳಿಕೊಡಲು ಪ್ರಯತ್ನಪಟ್ಟದ್ದು ನನಗೆ ಚೆನ್ನಾಗಿ ಜ್ಞಾಪಕ ಇದೆ. ಇತರ ವಿದ್ಯೆಗಳಲ್ಲಿ ಹೇಗೋ ಈ ಇಸ್ಪೀಟ್ ವಿದ್ಯೆಯಲ್ಲಿಯೂ ನಾನು ಯಶಸ್ವಿಯಾಗತಕ್ಕವನಲ್ಲವೆಂಬುದನ್ನು ಅವರು ಬೇಗ ಕಂಡುಕೊಂಡರು.

ದೂರದಿಂದ ನೋಡುವವರಿಗೆ ಅವರು ಕಟ್ಟುನಿಟ್ಟಿನ ಮನುಷ್ಯರೆಂದೂ, ಮಹಾನೇಮಿಷ್ಠರೆಂದೂ, ಹಾಸ್ಯ ವಿನೋದಗಳಿಗೆ ಅವರಲ್ಲಿ ಜಾಗವಿರಲಿಲ್ಲವೆಂದೂ ತೋರುತ್ತಿತ್ತು. ಆದರೆ ಸ್ವಲ್ಪ ಹತ್ತಿರ ಬಂದವರಿಗೆ ಅವರ ಸರಸತೆ ಗೋಚರವಾಗಲು ಬಹುಕಾಲ ಬೇಕಾಗುತ್ತಿರಲಿಲ್ಲ. ಕಷ್ಟನಿಷ್ಠುರಗಳಲ್ಲಿರುವವರಿಗೆ ಸಮಾಧಾನ ನೀಡುವುದರಲ್ಲಿಯೂ, ಶುಚಿಯಾದ ಹಾಸ್ಯದಿಂದ ಎಳೆಯರಂತೆ ಮನಸ್ಸು ಬಿಟ್ಟು ನಗುವುದರಲ್ಲಿಯೂ ಅವರಿಗೆ ಸಮನಾದ ರಸಿಕರನ್ನು ಬಹುಮಂದಿಯನ್ನು ನಾನು ಕಂಡಿಲ್ಲ.

ಇನ್ನು ಅವರ ಪೌರನೀತಿಯನ್ನು ಜ್ಞಾಪಕಕ್ಕೆ ತಂದುಕೊಳ್ಳೋಣ. ಒಂದು ಹೊಸ ಉಪನಗರ ನಿರ್ಮಾಣವಾದ ಮೇಲೆ ಅದರಲ್ಲಿ ಜನಸೌಕರ್ಯಕ್ಕೆ ಏನೇನು ಅವಶ್ಯವೆಂಬುದನ್ನು ವೆಂಕಟನಾರಣಪ್ಪನವರು ಗೊತ್ತುಮಾಡಿಕೊಂಡು ಕಾರ್ಯಾರಂಭಮಾಡಿದರು. ಹಾಗೆ ಆದದ್ದು ಶ್ರೀ ಮಲ್ಲಿಕಾರ್ಜುನ ದೇವಾಲಯ. ಆ ಗುಡಿಗೂ ವೆಂಕಟನಾರಣಪ್ಪನವರು ಖುದ್ದಾಗಿ ಗೋಡೆ ಕಟ್ಟಿದರು. ವರ್ಷೇ ವರ್ಷೇ ಶಿವರಾತ್ರಿಯ ಕಾಲದಲ್ಲಿ ತಾವೇ ಖುದ್ದಾಗಿ ಸುಣ್ಣ ತೊಡೆದು ಗುಡಿಯನ್ನು ನವೀಕರಿಸುತ್ತಿದ್ದರು. ಆ ಗುಡಿಯ ಲೆಕ್ಕಾಚಾರಗಳನ್ನು ಒಂದು ಬಿಡಿಕಾಸು ಕೂಡ ಹೆಚ್ಚುಕಡಮೆ ಬರದಂತೆ ಬರೆದಿರಿಸಿ, ಕ್ರಮವಾಗಿ ಮಹಾಜನ ಸಭೆಯನ್ನು ಕರೆದು ಅದಕ್ಕೊಪ್ಪಿಸುತ್ತಿದ್ದರು. ಹಾಗೆಯೇ ಅವರು ಅನೇಕ ಪೌರ ಸಂಸ್ಥೆಗಳಲ್ಲಿ ಕೆಲಸಮಾಡಿದ್ದಾರೆ. ಬಸವನಗುಡಿಗೆ ಮಾರ್ಕೆಟ್ ಕಟ್ಟಿಸಲು ಪ್ರಯತ್ನ ಮಾಡಿದರು.

ಇಲ್ಲಿಯ ರೇಟ್ ಪೇಯರ್ ಸಂಘಕ್ಕೆ ವ್ಯವಸ್ಥಾಪಕರಾಗಿದ್ದರು. ಅನೇಕ ಸಹಕಾರ ಸಂಘಗಳ ನಿರ್ವಾಹದಲ್ಲಿ ಮುಖ್ಯಭಾಗವನ್ನು ವಹಿಸಿದ್ದರು. ಅನೇಕ ಧರ್ಮ ಸಂಸ್ಥೆಗಳಲ್ಲಿ ಜವಾಬ್ದಾರಿಯನ್ನು ಹೊತ್ತುಕೊಂಡರು. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಗಾಗಿಯೂ ಅಭಿವೃದ್ಧಿಗಾಗಿಯೂ ಅವರು ದುಡಿದದ್ದು, ವಿಶ್ವವಿದ್ಯಾಲಯದ ಸಮಿತಿಗಳಲ್ಲಿಯೂ ಹತ್ತಾರು ಇತರ ಸಂಘ ಸಂಸ್ಥೆಗಳಲ್ಲಿಯೂ ಅವರು ನಿಃಸ್ಪೃಹತೆಯಿಂದಲೂ ಶ್ರದ್ಧೆಯಿಂದಲೂ ಕೆಲಸಮಾಡಿದ್ದು ತಮಗೆಲ್ಲ ಗೊತ್ತಿದೆ. ಹೀಗೆ ನಾನಾ ಮುಖವಾಗಿ ಸಾರ್ವಜನಿಕ ಹಿತಕ್ಕಾಗಿ ದುಡಿದವರು ವೆಂಕಟನಾರಣಪ್ಪನವರು. ಅವರ 'ಪಬ್ಲಿಕ್ ಸ್ಪಿರಿಟ್', ಎಂದರೆ ಸಾರ್ವಜನಿಕ ಚಿಂತನೆಯು ಎಲ್ಲರಿಗೂ ಅನುಕರಣೀಯವಾದದ್ದು. ಅಂಥಾ ಶ್ರಮಕ್ಕೆ ಬಹುಮಂದಿಯ ನಿಷ್ಠುರದ ವಿನಾ ಬೇರೆ ಯಾವ ಪ್ರತಿಫಲವೂ ಇಲ್ಲದಿದ್ದ ಕಾಲ ಅದು. ಅಂಥಾ ನಿಃಸ್ಪೃಹರೂ ಖಂಡಿತವಾದಿಗಳೂ ಆದವರಿಗೆ ಇಂದಿನ ದಿವಸ ಹೆಚ್ಚು ಪುರಸ್ಕಾರ ದೊರೆಯುತ್ತಿದೆಯೆಂದು ನಾನೇನೂ ಭ್ರಾಂತಿಪಟ್ಟುಕೊಂಡಿಲ್ಲ. ನಿಷ್ಠುರವೇ ನಿಷ್ಠೆಗೆ ಪ್ರತಿಫಲವೆಂದು ತೋರುತ್ತದೆ. ಹಾಗಿದ್ದರೂ ಸ್ವಾರ್ಥದ ಸೋಂಕೂ ಮಾತ್ಸರ್ಯ ಕಾರಣವೂ ಇಲ್ಲದಿದ್ದ ಜನರು ವೆಂಕಟನಾರಣಪ್ಪನವರು ಎಂಥಾ ಪ್ರಾಮಾಣಿಕರು, ಎಂಥಾ ಸತ್ಯಸಂಧರು ಎಂಬುದನ್ನು ಕಂಡುಕೊಂಡು ಅವರನ್ನು ಗೌರವಿಸುತ್ತಿದ್ದರು.

ಕೇವಲ ಮನುಷ್ಯತ್ವದ ದೃಷ್ಟಿಯಿಂದ-ಫಕತ್ ಮನುಷ್ಯ ವ್ಯಕ್ತಿಯೆಂದು ನೋಡಿದರೂ ವೆಂಕಟನಾರಣಪ್ಪನವರು ಪೂಜ್ಯರೆನಿಸುತ್ತಾರೆ. ಅವರು ಒಳಗೂ ಹೊರಗೂ ಒಂದೇ ತೆರದ ಪರಿಶುದ್ಧಿಯನ್ನು ಪಡೆದಿದ್ದವರು. ಮನಸ್ಸಿನಲ್ಲಿದ್ದದ್ದು ಬಾಯ ಮಾತಿನಲ್ಲಿ; ಬಾಯಿಂದ ಹೊರಟದ್ದು ನಡೆದ ನಡವಳಿಕೆಯಲ್ಲಿ ಸ್ಪಷ್ಟವಾಗಿ ಕಾಣಬರುತ್ತಿತ್ತು. ಅವರು ಸದಾಚಾರಶೀಲರು ಮತ್ತು ಸಂಪ್ರದಾಯಾನುವರ್ತಿಗಳು. ಅವರ ಅಕಾರವನ್ನು ನೋಡಿದ ಮಾತ್ರದಿಂದಲೇ ಇದು ಗೊತ್ತಾಗುತ್ತಿತ್ತು. ಆದರೆ ಅವರು ಅಂಧಶ್ರದ್ಧೆಯವರೇನೂ ಆಗಿರಲಿಲ್ಲ. ನಮ್ಮ ಆಚಾರಪದ್ಧತಿಗಳಲ್ಲಿ ಬದಲಾವಣೆಗಳು ಆಗಬೇಕಾದವು ಎಷ್ಟೋ ಇವೆಯೆಂಬುದನ್ನು ಅವರು ಒಪ್ಪಿಕೊಂಡಿದ್ದರು; ಮತ್ತು ತಮಗೆ ಯುಕ್ತವೆನಿಸಿದ ಸುಧಾರಣೆಗಳನ್ನು ಅವರು ಅನುಷ್ಠಾನಕ್ಕೂ ತಂದುಕೊಂಡಿದ್ದರು. ಹೊರನೋಟಕ್ಕೆ ಅವರು ಎಷ್ಟು ಕಠಿನವ್ರತಿಯಂತೆ ತೋರುತ್ತಿದ್ದರೋ ಒಳಮನೋಬಾಂಧವ್ಯಕ್ಕೆ ಅವರು ಅಷ್ಟೂ ಅಷ್ಟು ಮೃದುವಾಗಿ ಇರುತ್ತಿದ್ದರು. ಅವರು ಬಹಳ ಎಳೆ ಕರುಳಿನವರು. ಅವರು ಕಣ್ಣೀರಿಡುತ್ತ ಕೋಪದ ಧ್ವನಿಯಲ್ಲಿ ಮಾತನಾಡಿದ್ದನ್ನು ನಾನು ಕಂಡಿದ್ದೇನೆ. "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ" ಎಂಬ ಭವಭೂತಿಯ ಮಾತು ಅವರ ವಿಷಯಕ್ಕೆ ಬಹಳ ಚೆನ್ನಾಗಿ ಅನ್ವಯಿಸುತ್ತಿತ್ತು. ವೆಂಕಟನಾರಣಪ್ಪನವರ ಅವಸಾನಕಾಲಕ್ಕೆ ೧೫-೨೦ ದಿನಗಳ ಹಿಂದೆ ನಾನು ಅವರ ಬಳಿ ಕುಳಿತು ಮಾತನಾಡುತ್ತಿದ್ದೆ. ಆಗ ಅವರು

ಮಲಗಿದ್ದ ಕೊಠಡಿ ರಸ್ತೆಯ ಮಗ್ಗುಲಲ್ಲಿತ್ತು. ಅಲ್ಲಿ ರಸ್ತೆಯ ಧೂಳೂ ಗಾಡಿ ಬಸ್ಸುಗಳ ಶಬ್ದವೂ ಅತಿಯಾಗಿತ್ತು. ಅವರು ಆ ಕೊಠಡಿಯನ್ನು ಬಿಟ್ಟು, ಮನೆಯ ಪೂರ್ವಭಾಗದಲ್ಲಿ ರಸ್ತೆಯಿಂದ ದೂರವಾಗಿದ್ದ ಒಂದು ಕೊಠಡಿಯಲ್ಲಿ ಮಲಗಿಕೊಳ್ಳಬಹುದೆಂದು ನಾನು ಸೂಚಿಸಿದೆ. ಅವರು ನನಗೆ ಕೊಟ್ಟ ಉತ್ತರವು ಸ್ವಭಾವ ಪ್ರದರ್ಶಕವಾಗಿದೆ: "ಈಗ ನಾನು ಮಲಗಿರುವ ಕೊಠಡಿಯ ಹಿಂದುಗಡೆಯ ಕೊಠಡಿಯಲ್ಲಿ ನನ್ನ ಮೊಮ್ಮಗಳು ಆಗಾಗ ಪೀಟಿಲು ನುಡಿಸುತ್ತಿರುತ್ತಾಳೆ. ಮಕ್ಕಳು ಮಾತನಾಡುತ್ತ ನಗುತ್ತಿರುತ್ತಾರೆ. ಈ ಸಂತೋಷಕ್ಕೆ ನೀವು ಹೇಳುವ ಬೇರೆ ಕೊಠಡಿಯಲ್ಲಿ ಅವಕಾಶವಿಲ್ಲ."

ವೆಂಕಟನಾರಣಪ್ಪನವರಿಗೆ ಸಂಗೀತದಲ್ಲಿಯೂ ಮಕ್ಕಳ ನಗು ಹರಟೆಗಳಲ್ಲಿಯೂ ಅಷ್ಟೊಂದು ಪ್ರೀತಿಯಿತ್ತೆಂದು ನನಗೆ ಕೂಡ ತೋರಿರಲಿಲ್ಲ. ಅವರ ಮನಸ್ಸು ಗಟ್ಟಿ ಮಡಕೆಯೊಳಗಿದ್ದ ಹೊಸ ಬೆಣ್ಣೆಯ ಮುದ್ದೆ. ಲೋಕದ ಕಣ್ಣಿಗೆ ಕಾಣಿಸುತ್ತಿದ್ದದ್ದು ಮಡಕೆಯ ಗಟ್ಟಿ. ಮುಚ್ಚಳ ತೆರೆದವರಿಗೆ ಕಾಣುತ್ತಿದ್ದದ್ದು ನವನೀತ.

ಇಂಥವರ ಸ್ಮರಣೆ ಯಾರಿಗೆ ಬೇಡ? ಈ ದಿವಸ ನನ್ನ ಪಾಲಿಗೆ ಸುದಿವಸ. ಇದು ತಮ್ಮೆಲ್ಲರ ಪಾಲಿಗೂ ಹಾಗೆಯೇ ಎಂದು ತಾವೂ ಭಾವಿಸುವಿರೆಂದು ನಾನು ತಿಳಿದುಕೊಂಡಿದ್ದೇನೆ. ವೆಂಕಟನಾರಣಪ್ಪನವರ ಸ್ಮರಣೆಯನ್ನು ಚಿರಸ್ಥಾಯಿಯಾಗಿ ಮಾಡುವ ಈ ಸತ್ಕಾರ್ಯದಲ್ಲಿ ನನಗೆ ಒಂದು ಭಾಗವನ್ನು ಕೊಟ್ಟಿದ್ದಕ್ಕೋಸ್ಕರ ತಮಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

೮

# ರಾ. ರಘುನಾಥರಾಯರು

ರಾ. ರಘುನಾಥರಾಯರದು ರಂಗುಚಿತ್ರದಂಥ ವ್ಯಕ್ತಿತ್ವ (Picturesque). ಅವರ ಆಕಾರ, ವಸ್ತ್ರಭೂಷಣಗಳು, ಮಾತಿನ ಠೀವಿ, ಕಾರ್ಯದ ಪರಿಠವಣೆ-ಇವೆಲ್ಲ ನೋಡಿದವರ ಮನಸ್ಸಿನ ಮೇಲೆ ಸ್ಥಿರ ಪರಿಣಾಮವನ್ನು ಉಂಟು ಮಾಡಬಲ್ಲಂಥವು. ಆಳು ಎತ್ತರ; ಮೈಬಣ್ಣ ಶ್ಯಾಮಲ-ಮಸಕೆಂದೇ ಎನ್ನಬಹುದು. ಗಂಡು ಮುಖ, ಕೊಂಚ ಕೋಲಾದದ್ದು; ನೀಳಾಗಿ ಗುಂಡಾಗಿ ಎದ್ದು ಕಾಣುವ ಮೂಗು; ಹುಲುಸಾದ ತೋರಣದಂಥ ಮೀಸೆ; ಕಣ್ಣುಗಳಾದರೋ ಈ ಕಡೆಯಿಂದಾಕಡೆಗೆ ಸುಳಿಯುತ್ತ ಚುಚ್ಚಿ ಮಾತನಾಡುವಂತೆ ತೋರುವ ಹೊಳಹೊಳವು; ಎರಡಂಗುಲ ಅಗಲದ ರೇಷ್ಮೆಯ ಅಂಚಿನ ಧೋತ್ರ, ಪಂಚೆ ಕಚ್ಚೆ ಹಾಕಿ ಉಟ್ಟದ್ದು; ಆ ಅಂಚೂ ಜರತಾರಿಯ ಸೆರಗೂ ಇಲ್ಲಲ್ಲಿ ಈಡಾಡುತ್ತಿರಬೇಕು; ಮೇಲೆ ಕರಿಯ ನಿಲುವಂಗಿ; ಅದರ ಮೇಲು ಸರಿಗೆಯ ಶಲ್ಯ; ಅಥವಾ ಬೆಳ್ಳನೆಯ ಶರಟು; ಮೊಳಕಾಲ್ಮುರುವಿನ ಚೌಕಳಿಯ ರೇಷ್ಮೆ ವಸ್ತ್ರ; ಮುಂಗೈಯಲ್ಲಿ ದಪ್ಪವಾದ ಚಿನ್ನದ ತಿರುಗುಸುತ್ತಿನ ಕೈಕಪ್ಪ; ಎರಡು ಕೈಯಲ್ಲೂ ಕೆಂಪು ಪಚ್ಚೆ ಥಳ ಥಳಿಸುವ ಉಂಗುರಗಳು; ಬೆಳ್ಳಿಯ ನಸ್ಯದ ಡಬ್ಬಿ: ಬಣ್ಣದ ರೇಷ್ಮೆ ಕರವಸ್ತ್ರ-ಈ ಲಕ್ಷಣಗಳಿಂದ ಶೋಭಾಯಮಾನವಾಗಿದ್ದದ್ದು ಆ ವ್ಯಕ್ತಿಸ್ವರೂಪ. ಅವರನ್ನು ನಿಲುವು ಕಾಮಣ್ಣನೆಂದು ಕರೆಯುತ್ತಿದ್ದದ್ದುಂಟು.

ರಘುನಾಥರಾಯರು ಸೆಂಟ್ರಲ್ ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದರು. ಆಗ ಹೈಸ್ಕೂಲ್ ತರಗತಿಗಳೂ ಆ ಕಾಲೇಜಿನ ಒಳಭಾಗವಾಗಿದ್ದವು. ರಘುನಾಥರಾಯರು ಇಂಗ್ಲೀಷ್, ಚರಿತ್ರೆ, ಭೂವಿವರಣೆ, ಭಾಷಾಂತರೀಕರಣ-ಈ ವಿಷಯಗಳಲ್ಲಿ ಬೋಧಕರಾಗಿದ್ದರು. ಪ್ರವಚನ ವಿಧಾನದಲ್ಲಿ ಅವರು ತಮ್ಮ ಸ್ವಂತದ್ದನ್ನಾಗಿ ಮಾಡಿಕೊಂಡಿದ್ದ ವಾಕ್ಯಪರಿಷ್ಕಾರ ಪದ್ಧತಿಯನ್ನು ಅವರ ಶಿಷ್ಯರನೇಕರು ಪದೇ ಪದೇ ನೆನಸಿಕೊಳ್ಳುತ್ತಿದ್ದದ್ದನ್ನು ನಾನು ಕೇಳಿದ್ದೇನೆ. ಅವರು ಯಾವ ಸೊಗಸಾದ ಇಂಗ್ಲೀಷ್ ಕಾವ್ಯವನ್ನೋದಿದರೂ ಕೂಡಲೆ ಅದನ್ನು ಕನ್ನಡಕ್ಕೆ ಪರಿವರ್ತನೆ ಮಾಡಿಸುವ ಪದ್ಧತಿಯನ್ನಿಟ್ಟುಕೊಂಡಿದ್ದರು. ಅವರು ಕೊಟ್ಟ ವಾಕ್ಯಕ್ಕೆ ವಿದ್ಯಾರ್ಥಿಗಳು ನೀಡಿದ ತರ್ಜುಮೆಗಳನ್ನು ಒಂದೊಂದನ್ನಾಗಿ ತೆಗೆದುಕೊಂಡು ಓದಿ ವಿಮರ್ಶೆಮಾಡಿ- “ಮೂಲವಾಕ್ಯದ ‘ಸ್ಪಿರಿಟ್’ (Spirit) ಬರಲಿಲ್ಲವಯ್ಯ, ಸ್ಪಿರಿಟ್ ಬರಲಿಲ್ಲ”

ಎನ್ನುತ್ತಿದ್ದರಂತೆ. ಮಾತಿಗೆ ಪಡಿಮಾತನ್ನಿಟ್ಟು ಮಾಡಿದ ತರ್ಜುಮೆ ಅವರಿಗೆ ಒಪ್ಪದು. ಮೂಲದ ಅರ್ಥ ಸ್ಥೂಲವಾಗಿ ಹೊರಟರೂ ಅವರಿಗೆ ಸಾಲದು. ಕನ್ನಡದ ಒಳ್ಳೆಯ ವಾಕ್ಯವನ್ನು ವಿದ್ಯಾರ್ಥಿಗಳಿಗೆ ಕೊಟ್ಟು ಅದನ್ನು ಇಂಗ್ಲಿಷಿಗೆ ತರ್ಜುಮೆ ಮಾಡ ಹೇಳಿ, ಅದನ್ನೂ ಹೀಗೆಯೇ ವಿಮರ್ಶನೆಗೆ ಒಳಪಡಿಸುತ್ತಿದ್ದರು. ಪದಕ್ಕೆ ಪದವನ್ನಿಡುವುದು ದೊಡ್ಡದಲ್ಲ, ಮೂಲದ "ಸ್ಪಿರಿಟ್" -ಅದರ ಭಾವ ಧೋರಣೆ, ಅದರ ಕಾವು, ಅದರ ಜೋರು-ನಮ್ಮ ಭಾಷಾಂತರದಲ್ಲಿ ಕಾಣಬೇಕು. "ಗಂಡರ ಗಂಡ = Man among men" : "ಬಿರುದೆಂತೆಂಬರ ಗಂಡ= Vanquisher of those who challenge his title" -ಇದು ರಘುನಾಥರಾಯರ ಸರಣಿ. ಇಂಗ್ಲಿಷಿನಿಂದ ಕನ್ನಡಕ್ಕೆ ಪರಿವರ್ತನೆ ಮಾಡಿದಾಗಲೂ ಹಾಗೆಯೇ, "Bloemfontein = ಕುಸುಮಪುರಿ", "Roof of the world =ಭುವನಭವನದ ಕರುಮಾಡ." ಇಂಥ ವೀರ್ಯವತ್ತಾದ ಪದಪ್ರಯೋಗಗಳು ಅವರ ಬರವಣಿಗೆಯಲ್ಲಿ ಹೇರಳವಾಗಿ ಸಿಕ್ಕುತ್ತವೆ.

ರಘುನಾಥರಾಯರು ಶಿವಮೊಗ್ಗ, ಚಿತ್ರದುರ್ಗ ಮೊದಲಾದ ಕಡೆ ಹೈಸ್ಕೂಲು ಹೆಡ್ಮಾಸ್ಟರಾಗಿದ್ದರು. ಸರಕಾರಿ ಕೆಲಸದಿಂದ ವಿಶ್ರಾಂತರಾದ ಮೇಲೆ ಬೆಂಗಳೂರು ಚಾಮರಾಜಪೇಟೆಯ ೫ನೆಯ ಬೀದಿಯಲ್ಲಿಯ ಅಚ್ಚುಕಟ್ಟಾದ ಸ್ವಂತಮನೆಯಲ್ಲಿ ನೆಲಸಿ, ಸಾಹಿತ್ಯಸೇವೆಗೆ ತಮ್ಮ ಕಾಲವನ್ನು ವಿನಿಯೋಗಿಸಿದರು. ಅವರಿಗೆ ಪರಮ ಮಿತ್ರರಾಗಿದ್ದವರು ಒಂದು ಕಡೆ ಡಾ ॥ ಪಿ.ಎಸ್. ಅಚ್ಯುತರಾಯರು; ಇನ್ನೊಂದು ಕಡೆ ಗರಣಿ ವೈಯಾಕರಣಿ ಕೃಷ್ಣಾಚಾರ್ಯರು.

ರಘುನಾಥರಾಯರು ಬರೆದಿರುವ ಗ್ರಂಥಗಳಲ್ಲಿ ಪ್ರಸಿದ್ಧವಾದವು: (೧) ಭೂವಿವರಣೆ, (೨)ಈಸೊಪ್ ನೀತಿಕಥೆಗಳು, (೩)ವ್ಯಾಕರಣೋಪನ್ಯಾಸ ಮಂಜರಿ, (೪)ಸನಾತನ ಧರ್ಮದೀಪಿಕೆ, (೫)ನಿಯೋಗ ವಿಧಿಯ ವಿಚಾರ. ಇವಿಷ್ಟು ಸದ್ಯಕ್ಕೆ ನನಗೆ ಜ್ಞಾಪಕದಲ್ಲಿರುವವು. ಅವರ ಭೂವಿವರಣೆ ವಿಸ್ತಾರವಾದ ಪುಸ್ತಕ-ಒಳ್ಳೆ ವಿಶದವೂ ಓಜಸ್ವಿಯೂ ಆದ ಶೈಲಿಯಲ್ಲಿ ಬರೆದಿದ್ದದ್ದು. ಅದನ್ನು ಅವರು ಈಗ್ಗೆ ೫೫-೬೦ ವರ್ಷಗಳ ಹಿಂದೆ-ಉಪಾಧ್ಯಾಯ ವೃತ್ತಿಯಲ್ಲಿದ್ದಾಗಲೇ-ಬರೆದಿರಬೇಕು.

ಅವರು ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆಯಲ್ಲೂ ಇತರ ಕೆಲವು ಪತ್ರಿಕೆಗಳಲ್ಲಿಯೂ ಸಾಹಿತ್ಯ ವಿಚಾರಗಳನ್ನು ಕುರಿತು ಲೇಖನಗಳನ್ನು ಪ್ರಕಟಪಡಿಸಿದ್ದಾರೆ. ಮೈಸೂರಿನ ರೈಲ್ವೆ ಇಲಾಖೆಯ ಮುಖ್ಯ ಇಂಜಿನಿಯರಾಗಿದ್ದು ನಿವೃತ್ತರಾದ ರಾಜಸೇವಾಪ್ರಸಕ್ತ ಶ್ರೀ ವೈ.ಕೆ. ರಾಮಚಂದ್ರರಾಯರವರು ಬರೆದು ಪ್ರಕಟಮಾಡಿ, ಪರಿಷತ್ತಿಗೆ ಉಚಿತವಾಗಿ ದಾನ ಮಾಡಿದ ಜೇಮ್ಸ್ ಏಬ್ರಹಾಂ ಗಾರ್ಫೀಲ್ಡ್‌ನ ಚರಿತ್ರೆಯನ್ನು ಪರಿಷತ್ತಿಗಾಗಿ ಪುನಃಪರಿಷ್ಕರಣ ಮಾಡುವುದರಲ್ಲಿ ರಘುನಾಥರಾಯರ ಕೈವಾಡ ಹೆಚ್ಚಾಗಿ ನಡೆದಿದೆ.

ಹಾಗೆಯೇ ಇನ್ನೂ ಅನೇಕ ಮಂದಿ ಕನ್ನಡ ಲೇಖಕರ ಕೆಲಸದಲ್ಲಿ ರಘುನಾಥರಾಯರ ಸಲಹೆ ಸಹಾಯಗಳು ದೊರೆತಿವೆ.

ಅಚ್ಚಿಗಾಗಿ ಅವರು ಕೊಡುತ್ತಿದ್ದ ಬರವಣಿಗೆ ವಿರಳ ವಿರಳವಾಗಿ ಸೊಗಸಾಗಿರುತ್ತಿತ್ತು. ಯಾವ ಕೆಲಸ ಮಾಡಿದರೂ ಅವರಿಗೆ ಅದರಲ್ಲಿ ಸೊಗಸಿರಬೇಕು.

ರಘುನಾಥರಾಯರ ಭಾಷಾಪಾಂಡಿತ್ಯವು ನಿಶಿತವಾದದ್ದು. ಅವರು ಹಳಗನ್ನಡ ಕಾವ್ಯಗಳನ್ನು ಮಾತ್ರವಲ್ಲದೆ ಶಾಸನ ಸಾಹಿತ್ಯವನ್ನೂ ವಿಮರ್ಶನ ದೃಷ್ಟಿಯಿಂದ ನೋಡಿ, ಭಾಷಾಸಂಪ್ರದಾಯವನ್ನು ಕಂಡುಕೊಂಡಿದ್ದದ್ದು ಮಾತ್ರವಲ್ಲದೆ, ಭಾಷೆಗೆ ಹೊಸ ತೇಜಸ್ಸನ್ನು ತಂದು ತುಂಬುವುದು ಹೇಗೆಂಬುದನ್ನು ಕುರಿತು ಆಲೋಚನೆ ಮಾಡಿದ್ದರು. ವ್ಯಾಕರಣಕ್ಕೆ ಸಲ್ಲಬೇಕಾದ ಮರ್ಯಾದೆಯ ವಿಷಯದಲ್ಲಿ ಅವರು ಎಷ್ಟು ಶ್ರದ್ಧೆಯಿಟ್ಟುಕೊಂಡಿದ್ದರೊ ಭಾಷೆಗೆ ನೂತನ ಕಾಂತಿಯನ್ನು ತರಬೇಕೆಂಬುದರಲ್ಲಿಯೂ ಅಷ್ಟು ಉತ್ಸಾಹವನ್ನು ಇಟ್ಟುಕೊಂಡಿದ್ದರು. ಕೆಲವು ವರ್ಷ ಅವರು ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಯಾಗಿದ್ದರು.

ಸಮಾಜ ಸಂಸ್ಕಾರ ವಿಷಯದಲ್ಲಿಯೂ ಅವರ ಆಸಕ್ತಿ ತೀವ್ರವಾಗಿತ್ತು. ಅವರು ಥಿಯೊಸಾಫಿಕಲ್ ಸೊಸೈಟಿ ಎಂಬ ದಿವ್ಯಜ್ಞಾನ ಸಮಾಜದ ಸದಸ್ಯರಾಗಿದ್ದರು. ಮೇಲೆ ಹೇಳಿರುವ "ಸನಾತನ ಧರ್ಮ ದೀಪಿಕೆ" ಎಂಬ ಗ್ರಂಥವು ಆ ಸೊಸೈಟಿಯ ಸಹಾಯದಿಂದ ಡಾ ॥ ಆನಿಬೆಸೆಂಟರವರ ಪ್ರೇರಣೆಯಂತೆ, ಕಾಶಿಯ ಸೆಂಟ್ರಲ್ ಹಿಂದೂ ಕಾಲೇಜಿನವರು ಇಂಗ್ಲಿಷಿನಲ್ಲಿ ತಯಾರು ಮಾಡಿಸಿದ ಸನಾತನ ಧರ್ಮ ಗ್ರಂಥಮಾಲೆಯಲ್ಲೊಂದರ ಅನುವಾದ. ಹಿಂದೂಮತದ ಅಂತಃಕಲಹಗಳನ್ನು ಹೋಗಲಾಡಿಸಿ, ಮೂಢವಿಶ್ವಾಸಗಳನ್ನು ಶೋಧಿಸಿ, ಅಂಧಾಚಾರಗಳನ್ನು ತಿದ್ದಿ, ನಿಜವಾದ ವೈದಿಕ ಧರ್ಮವು ಪುನರುಜ್ಜೀವಿತವಾಗುವಂತೆ ಸಹಾಯ ಮಾಡಬೇಕೆಂಬುದೇ ಆ ಗ್ರಂಥಮಾಲೆಯ ಉದ್ದೇಶ. ಈ ಉದ್ದೇಶವು ರಘುನಾಥರಾಯರ ಮನಸ್ಸಿಗೆ ಒಪ್ಪಿಕೆಯಾಗಿತ್ತು. "ನಿಯೋಗ ವಿಧಿಯ ವಿಚಾರ" ವೆಂಬ ಗ್ರಂಥದಲ್ಲಿ ಸ್ತ್ರೀ ಪುನರ್ವಿವಾಹದ ಪ್ರಶ್ನೆಯನ್ನು ಅವರು ಸಮಾಲೋಚನೆ ಮಾಡಿದ್ದರು. ಹೀಗೆ ಅವರು ಸಮಾಜ ಸಂಸ್ಕಾರವಾದಿಗಳಾಗಿದ್ದರೂ, ಅವರ ಜೀವನದ ತಳಹದಿ ಮಾತ್ರ ಪೂರ್ವ ಸಂಪ್ರದಾಯದ್ದೇ ಆಗಿತ್ತು.

ರಘುನಾಥರಾಯರವರು ಮಾತುಕಥೆಯಲ್ಲಿ ಸರಸಿಗಳು; ಸ್ನೇಹದಲ್ಲಿ ಉದಾರಿಗಳು; ಕಷ್ಟಕ್ಕೆ ಸಿಕ್ಕಿದವರಿಗೆ ಉಪಕಾರಿಗಳು. ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಅಲ್ಲಲ್ಲಿರಬಹುದಾದ ಸ್ವಾರಸ್ಯಗಳನ್ನು ಕಂಡು ಅನುಭವಿಸುವುದರಿಂದಲೇ ಜೀವನಕ್ಕೆ ಸಾರ್ಥಕ್ಯವೆಂದು ಅವರು ನಂಬಿದ್ದವರು.



# ವೈಯಾಕರಣಿ ಗರಣಿ ಕೃಷ್ಣಾಚಾರ್ಯರು

ನನಗೆ ಅಣ್ಣಂದಿರಂತೆ ಪ್ರಿಯರೂ ಪೂಜ್ಯರೂ ಆಗಿದ್ದ ದೊಡ್ಡ ಮನುಷ್ಯರೊಬ್ಬರು-ವಿದ್ಯಾಸಂಪತ್ತಿನಲ್ಲಿ ಗಣ್ಯರಾದವರು [1] -ತಮ್ಮ ವಿದ್ಯಾಗುರುಗಳ ಪೈಕಿ ಗರಣಿ ಕೃಷ್ಣಾಚಾರ್ಯರವರ ವ್ಯಕ್ತಿಸ್ವರೂಪ ತಮ್ಮ ಮನಸ್ಸಿನ ಮೇಲೆ ಸತ್ಪರಿಣಾಮ ಮಾಡಿದಂತೆ ಮತ್ತಾರದೂ ಮಾಡಿಲ್ಲವೆಂದು ಆಗಾಗ ಹೇಳುತ್ತಿದ್ದರು. ಕೃಷ್ಣಾಚಾರ್ಯರವರ ಪಾಂಡಿತ್ಯ ಬಹಳ ದೊಡ್ಡದು; ಅದಕ್ಕಿಂತ ದೊಡ್ಡದು ಅವರ ಗುಣಶೀಲಸೌಂದರ್ಯ. ಅವರು ಹೊರಗೂ ಒಳಗೂ ಒಂದೇ ರೀತಿ ಚೊಕ್ಕಟವಾಗಿದ್ದವರು. ಅದರಿಂದ ಅವರ ದರ್ಶನವೂ ಅವರ ಸ್ನೇಹವೂ ಸಂಭಾಷಣೆಯೂ ಎಲ್ಲರಿಗೂ ಬೇಕೆನಿಸುತ್ತಿತ್ತು.

ಗರಣಿ ವೈಯಾಕರಣಿ ಕೃಷ್ಣಾಚಾರ್ಯರು ಬಹುಕಾಲ ಮದರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿಯೂ ತರುವಾಯ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿಯೂ ಕನ್ನಡ ಪಂಡಿತರಾಗಿದ್ದರು; ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಗ್ರಂಥಲೇಖನದಿಂದ ಪ್ರಸಿದ್ಧರಾಗಿದ್ದರು.

ಕೃಷ್ಣಾಚಾರ್ಯರು ಕ್ರಿ.ಶ.೧೮೫೬ಕ್ಕೆ ಸಮನಾದ ನಳ ಸಂವತ್ಸರದ ವೈಶಾಖ ಶುದ್ಧಪಾಡ್ಯಮಿಯ ದಿವಸ ಜನಿಸಿದರು. ಅವರ ತಾತಂದಿರು "ಮಹೀಶೂರ ಪುರವಾಸಿ ಶ್ರೀಮದ್ವೈಯಾಕರಣ ವ್ಯಾಸ ಕೃಷ್ಣಾಚಾರ್ಯರವರು." ಅವರ ತಂದೆಗಳು "ಪರಿಗಿಪುರೀ ಸನ್ನಿಹಿತ ಗರಣಿ ಗ್ರಾಮವಾಸ್ತವ್ಯ" ವೈಯಾಕರಣಿ ತಿಮ್ಮಣ್ಣಾಚಾರ್ಯರು. ಸಂಸ್ಕೃತ ವ್ಯಾಕರಣವು ಕೃಷ್ಣಾಚಾರ್ಯರಿಗೆ ಕುಲಪರಂಪರಾಗತವಾದ ಸ್ವತ್ತಾಗಿತ್ತು. ಅವರು ತಮ್ಮ ತಂದೆಗಳಾದ ತಿಮ್ಮಣ್ಣಾಚಾರ್ಯರವರಲ್ಲಿ ವ್ಯಾಸಂಗಮಾಡಿ ಸಿದ್ಧಾಂತ ಕೌಮುದಿ ಮೊದಲಾದ ವ್ಯಾಕರಣಗ್ರಂಥಗಳನ್ನು ಸ್ವಾಧೀನಪಡಿಸಿಕೊಂಡಿದ್ದರು. ಕನ್ನಡ ಸಾಹಿತ್ಯದಲ್ಲಿ ಬೆಂಗಳೂರಿನ ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿಗಳು ಅವರ ಗುರುಗಳು. ಈ ಸುಬ್ರಹ್ಮಣ್ಯಶಾಸ್ತ್ರಿಗಳು ಮಹಾ ವಿದ್ವತ್ಪಂಕ್ತಿಗೆ ಸೇರಿದ್ದವರು. ಅವರು ಕನ್ನಡದಲ್ಲಿ ಪದ್ಯ ಗದ್ಯ ಕಾವ್ಯಗಳನ್ನೂ ಟೀಕೆಗಳನ್ನೂ ಬರೆದು ಅವರ ಕಾಲದ ಜನಕ್ಕೆ ಜ್ಞಾನಸೇವೆ ಸಲ್ಲಿಸಿದ್ದರು. ಅವರ ಮಕ್ಕಳೇ ಮಹಾಮಹೋಪಾಧ್ಯಾಯ ಸಿದ್ಧಾಂತಿ

ಶಿವಶಂಕರಶಾಸ್ತ್ರಿಗಳವರು; ೧೯೨೩ರಲ್ಲಿ ಬಿಜಾಪುರದಲ್ಲಿ ನಡೆದ ಒಂಭತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದವರು. ಇವರೂ ಕೃಷ್ಣಾಚಾರ್ಯರವರೂ ಆಪ್ತಮಿತ್ರರು.

ಕೃಷ್ಣಾಚಾರ್ಯರು ರಚಿಸಿದ ಗ್ರಂಥಗಳನ್ನು ವಿಷಯಾನುಸಾರ ನಾಲ್ಕು ಜಾತಿಗಳಾಗಿ ವಿಂಗಡಿಸಬಹುದು: (೧) ಸಂಸ್ಕೃತ ವ್ಯಾಕರಣ, (೨) ಕನ್ನಡ ಕಾವ್ಯ, (೩) ಧರ್ಮ ವಿಚಾರ, (೪) ಆರೋಗ್ಯ ವಿಚಾರ.

ಅವರ ಮೊಟ್ಟಮೊದಲನೆಯ ಕೃತಿ ಅವರ ಇಪ್ಪತ್ತಮೂರನೆಯ ವರ್ಷದಲ್ಲಾದ ಸಂಸ್ಕೃತ "ಶಬ್ದರತ್ನಾವಳಿ" (೧೮೭೮). ಈ ಗ್ರಂಥ ನಾಲ್ಕಾರು ಸಲ ಪುನರ್ಮುದ್ರಿತವಾಗಿದೆ. ಸಂಸ್ಕೃತ ಕಲಿಯಬಯಸುವವರಿಗೆ ಅದು ಪ್ರವೇಶ ಮಾರ್ಗದರ್ಶಿನಿ. ಅದು ನಾಮಪದ, ಸಂಧಿ, ವಿಭಕ್ತಿ, ಸಮಾಸ, ಧಾತು, ಆಖ್ಯಾತಪ್ರತ್ಯಯ ಮೊದಲಾದ ಭಾಷಾಂಶಗಳ ಸ್ವರೂಪ ಕಾರ್ಯಗಳನ್ನು ಕುರಿತ ತಿಳಿವಳಿಕೆಯನ್ನು ಸಂಗ್ರಹವಾಗಿ ಒದಗಿಸುತ್ತದೆ. ಗ್ರಂಥದ ಪ್ರಕರಣ ಯೋಜನೆಯೂ ನಿರೂಪಣ ಕ್ರಮವೂ ವಿಷಯದ ಕ್ಲಿಷ್ಟತೆಯನ್ನು ಕಡಿಮೆ ಮಾಡಿವೆ. ಸ್ವಲ್ಪದರಲ್ಲಿ ಬಹುವನ್ನು ಕ್ರಮವಿವೇಚನೆಯಿಂದ ಸಂಗ್ರಹಿಸಿರುವುದು ಕೃಷ್ಣಾಚಾರ್ಯರ ಚತುರತೆ. ಎಷ್ಟು ಬೇಕೋ ಅಷ್ಟು ಮಾತ್ರ, ಅದು ಹೆಚ್ಚು ಕಡಮೆಗಳಿಲ್ಲದಂತೆ, ಸಂಶಯಕ್ಕೆ ಅವಕಾಶಬಿಡದಂತೆ ಇದೆ ಈ ರಚನೆ. ಬಹುಶಃ ಈ ಗ್ರಂಥದ ವೇಳೆಗೇ ಅವರ ಎರಡನೆಯ ಗ್ರಂಥವಾದ 'ಧಾತುರತ್ನಾವಳಿ' ಸಿದ್ಧವಾಗುತ್ತಿತ್ತೆಂದು ತೋರುತ್ತದೆ. ಅದು ೧೮೭೯ರಲ್ಲಿ ಪ್ರಕಟವಾಯಿತು. ಅದನ್ನು, "ಸಿದ್ಧಾಂತಿ-ಸುಬ್ರಹ್ಮಣ್ಯಾರ್ಯ-ವಿದುಷಾಂ ಪ್ರೇರಣಾಬಲಾತ್" ರಚಿಸಿದಂತೆ ಹೇಳಿದ್ದಾರೆ. ಮತ್ತು,

> ಧಾತುರತ್ನಾವಳೀನಾಮ್ನಾ ತನ್ಯತೇ ಪಿತುರಾಜ್ಞಯಾ ।
> ಕೃಷ್ಣೇನ ಬಾಲಬೋಧಾಯ ಧಾತೂನಾಂ ರೂಪಪದ್ಧತಿಃ ॥

ಈ ಗ್ರಂಥವೂ ಪುನಃಪುನಃ ಮುದ್ರಿತವಾಗಿದೆ. ಸಂಸ್ಕೃತ ಭಾಷಾಭ್ಯಾಸಿಗಳಿಗೆ ಇದೂ ತುಂಬ ಉಪಕಾರಕವಾದದ್ದು.

ಕನ್ನಡದಲ್ಲಿ ಕೃಷ್ಣಾಚಾರ್ಯರು ಮೂರು ಗದ್ಯಗ್ರಂಥಗಳನ್ನೂ, ಮೂರು ನಾಟಕಗಳನ್ನೂ, ಒಂದು ಅಲಂಕಾರ ಗ್ರಂಥವನ್ನೂ ಬರೆದಂತೆ ತಿಳಿಯ ಬಂದಿದೆ. ಆ ಗದ್ಯಗ್ರಂಥಗಳು ಪ್ರಸಿದ್ಧ ಸಂಸ್ಕೃತ ಕಾವ್ಯ ನಾಟಕಗಳ ಸಂಕ್ಷೇಪಾನುವಾದಗಳು: (೧) ನಾಗಾನಂದ ಅಥವಾ ಜೀಮೂತವಾಹನ ಚರಿತ್ರೆ, (೨) ಮೃಚ್ಛಕಟಿಕ ನಾಟಕ ಕಥೆ, (೩) ಕಾದಂಬರೀ ಕಾವ್ಯ ಸಾರಾಂಶ.

ಕೃಷ್ಣಾಚಾರ್ಯರು ೧೮೮೭ ರಲ್ಲಿ ತಮ್ಮ ೩೨ನೆಯ ವರ್ಷದಲ್ಲಿ ಸಂಸ್ಕೃತ ನಾಗಾನಂದ ನಾಟಕವನ್ನು ಆಮೂಲಾಗ್ರವಾಗಿ ಕನ್ನಡಿಸಿದಂತೆ ತಿಳಿದು ಬಂದಿದೆ. ನನಗೆ ಆ ಗ್ರಂಥ ದೊರೆತಿಲ್ಲ. ಅವರ ಮತ್ತೊಂದು ನಾಟಕ ಕೃತಿಯಾದ "ಶೃಂಗಾರ ತರಂಗಿಣಿ" ಎಂಬ ಬಾಣ ಪ್ರಬಂಧವೂ ನನಗೆ ದೊರೆತಿಲ್ಲ. ಅವರ "ಸಮಗ್ರ ಮೃಚ್ಛಕಟಿಕ ಪ್ರಕರಣ" ವು ೧೮೯೦ರಲ್ಲಿ ಪ್ರಕಟವಾಯಿತು.

ಶ್ರೀಮತ್ ಕೃಷ್ಣ ಪದಾರ್ಚಕ ।
ಭೂಮೀಸುರವರ್ಯ ಗರಣಿ ಕೃಷ್ಣಾಚಾರ್ಯಂ ಶ್ರೀ ॥
ಚಾಮೇಂದ್ರ ಕೃಪೆಯನೆಳಸುತ- ।
ಲೀ ಮೃಚ್ಛಕಟಿಕಮನಿಂತು ತಾಂ ಪ್ರಕಟಿಸಿದಂ ॥

ಈ ನಾಟಕವು "ಶೂದ್ರಕ ನೃಪತಿ ಪ್ರಣೀತಮುಂ, ರಸಾಲಂಕಾರ ಭರಿತಮುಂ, ಲೋಕಾನುಭವ ನೀತಿ ಬೋಧಕಮುಂ" ಎಂದು ವರ್ಣಿಸಿದ್ದಾರೆ. ಮತ್ತು ತಮ್ಮ ಕೃತಿ, "ಪಳೆಗನ್ನಡ ಪೊಸಗನ್ನಡ ನುಡಿಗಳಿಂ ಕಡುಚೆಲ್ವೆನಿಸಿ ಕಂಗೊಳಿಪಂತೆ" ಇರುವುದಾಗಿ ಹೇಳಿದ್ದಾರೆ.

ಕೃಷ್ಣಾಚಾರ್ಯರು ಕನ್ನಡಿಸಿದರೆಂದು ಹೇಳಲಾದ ದಂಡಿಕೃತ ಕಾವ್ಯಾದರ್ಶವನ್ನು ನಾನು ನೋಡಿಲ್ಲ.

ಕೃಷ್ಣಾಚಾರ್ಯರು ಚಿಕ್ಕ ವಯಸ್ಸಿನಿಂದ ಅನಾರೋಗ್ಯವನ್ನು ಅನುಭವಿಸಿದ್ದರಂತೆ. ಜೀರ್ಣಾಂಗಗಳಿಗೆ ಸಂಬಂಧಪಟ್ಟ ವ್ಯಾಧಿಗಾಗಿ ಅವರು ಬಗೆ ಬಗೆಯ ಚಿಕಿತ್ಸೆಗಳನ್ನು ಮಾಡಿಸಿಕೊಂಡು, ಯಾವುದರಿಂದಲೂ ಗುಣ ಕಾಣದೆ, ಕಡೆಗೆ ತಮ್ಮದೇ ಆದ ಒಂದು ಆಹಾರಕ್ರಮವನ್ನು ಗೊತ್ತುಮಾಡಿಕೊಂಡು ಅದರಿಂದ ಆರೋಗ್ಯ ಭಾಗ್ಯವನ್ನು ಪಡೆದರು. ಆ ಆಹಾರಕ್ರಮಕ್ಕೆ ಅವರು ಹವ್ಯಪಾಕ ಪದ್ಧತಿ ಎಂದು ಹೆಸರು ಕೊಟ್ಟಿದ್ದರು. ನಾನು ಅವರನ್ನು ನೋಡಿದ್ದು ಅವರು ಈ ಹೊಸ ಪದ್ಧತಿಯನ್ನು ಅವಲಂಬಿಸಿದ ಮೇಲೆ. ಆಗ ಅವರನ್ನು ನೋಡಿದವರಿಗೆ "ಕೃಷ್ಣಾಚಾರ್ಯರು ರೋಗದಿಂದ ನರಳಿದ್ದವರು" ಎಂದು ಯಾರಾದರೂ ಹೇಳಿದ್ದಿದ್ದರೆ, ಆ ಮಾತನ್ನು ಕೇಳಿದವರು ಅದನ್ನು ನಂಬಲಾಗುತ್ತಿರಲಿಲ್ಲ. ಅಷ್ಟು ಸತ್ವವೂ ಕಾಂತಿಯೂ ಅವರ ಆಕಾರಚರ್ಯೆಗಳಲ್ಲಿ ಎದ್ದು ಕಾಣುತ್ತಿದ್ದವು. ಈ ಹವ್ಯಪಾಕಪದ್ಧತಿಯನ್ನು ಪ್ರಚಾರಪಡಿಸಲು ಅವರು ಕನ್ನಡದಲ್ಲಿ ಕೆಲವು ಪಾಕಶಾಸ್ತ್ರ ಗ್ರಂಥಗಳನ್ನೂ ಆರೋಗ್ಯ ತತ್ತ್ವ ಗ್ರಂಥಗಳನ್ನೂ ರಚಿಸಿ ಪ್ರಕಟಿಸಿದರು. ನಾಲ್ಕಾರು ಕಡೆ ಸಭೆಗಳಿಗೆ ತಮ್ಮ ಪಾಕವಿಧಾನವನ್ನು ಪ್ರತ್ಯಕ್ಷವಾಗಿ ತೋರಿಸಿದರು.

ಅವರು ಸನಾತನ ಧರ್ಮದಲ್ಲಿ ಸಂಪೂರ್ಣ ಶ್ರದ್ಧೆಯುಳ್ಳವರಾಗಿದ್ದರು. ಮತ್ತು ಆ ಧರ್ಮವನ್ನು ಪುನರುಜ್ಜೀವಿತಮಾಡಲು ದೀಕ್ಷೆ ತೊಟ್ಟಿದ್ದರು. ಈ ಧರ್ಮೋತ್ಸಾಹದಿಂದ ಅವರು ಬರೆದ ಗ್ರಂಥಗಳು: (೧) ಶ್ರುತಿಸ್ಮೃತಿ ಧರ್ಮಪದ್ಧತಿ, (೨) ದೀರ್ಘಾಯುಸ್ತೋತ್ರ ಸದ್ವೃತ್ತ ರತ್ನಾವಳಿ, (೩) ಸಾಮಾನ್ಯ ಧರ್ಮ ಪ್ರಶ್ನೋತ್ತರ, (೪)ವಿಶೇಷಧರ್ಮ ಪ್ರಶ್ನೋತ್ತರ, (೫) ಸಾಮಾನ್ಯ ಕರ್ಮ ಪ್ರಶ್ನೋತ್ತರ, (೬) ಸಂಸ್ಕಾರ ವಿಶೇಷ ಕರ್ಮ ಪ್ರಶ್ನೋತ್ತರ, (೭) ಸದ್ವೃತ್ತಾನುಷ್ಠಾನ, (೮) ಭಗವತ್ಪ್ರಾರ್ಥನೆ. ಇವೆಲ್ಲ ಸುಲಭ ಶೈಲಿಯ ಲಘುಗ್ರಂಥಗಳು. ಸರ್ವರಿಗೂ ಸುಲಭವಾಗಿ ಸರ್ವತ್ರ ಪ್ರಚಾರವಾಗಬೇಕೆಂದು ತೀರ ಕಡಮೆ ಬೆಲೆಯನ್ನು ಇಟ್ಟಿದ್ದರು. ಹಾಗಿದ್ದರೂ ಅದರಿಂದ ನಮ್ಮ ಜನದ ಔದಾಸೀನ್ಯವೇನೂ ಸವೆಯಲಿಲ್ಲ. ಸವೆದವರು ಗ್ರಂಥಕರ್ತರೇ.

ಕೃಷ್ಣಾಚಾರ್ಯರು ಸ್ವಭಾವದಲ್ಲಿ ಪರಮ ಸಾತ್ತ್ವಿಕರು, ಮೃದುಹೃದಯರು ಮತ್ತು ಸರಳ ಜೀವಿಗಳು.

ಒಳ್ಳೆ ಆಜಾನುಬಾಹುವಾದ ಆಕೃತಿ; ಹಾಲು ಕೆನೆಯ ಮೈಬಣ್ಣ; ಪ್ರಸನ್ನವಾದ ಮುಖ; ಆಪಾದಮಸ್ತಕವೂ ಶುಭ್ರ ಧವಲ ವರ್ಣದ ಉಡಿಗೆ, ನಿಲುವಂಗಿ, ಉತ್ತರೀಯ ರುಮಾಲುಗಳು; ನೋಡಿದವನ ಮನಸ್ಸಿನಲ್ಲಿ ಕೂಡಲೇ ವಿಶ್ವಾಸವೂ ಗೌರವವೂ ಉದಯಿಸುತ್ತಿದ್ದವು.

ಕೃಷ್ಣಾಚಾರ್ಯರ ಮಿತ್ರಮಂಡಲಿ ವಿಶಾಲವಾದದ್ದು. ಪ್ರಸಿದ್ಧ ಸಾಹಿತ್ಯ ವಿದ್ವಾಂಸರಾದ ಛಪ್ಪಲ್ಲಿ ವಿಶ್ವೇಶ್ವರಶಾಸ್ತ್ರಿಗಳು, ಮೋಟಗಾನಹಳ್ಳಿ ಶಂಕರ ಶಾಸ್ತ್ರಿಗಳು, ಎಂ.ಟಿ.ನರಸಿಂಹಯ್ಯಂಗಾರ್ಯರು. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಮೂಲ ಸ್ಥಾಪಕರಾದ ಡಾ.ಪಿ.ಎಸ್. ಅಚ್ಯುತರಾಯರು, ಆರ್. ರಘುನಾಥರಾಯರು, ಕರ್ಪೂರ ಶ್ರೀನಿವಾಸರಾಯರು. ನಂಗಪುರಂ ವೆಂಕಟೇಶಯ್ಯಂಗಾರ್ಯರು- ಇವರು ಆ ಸ್ನೇಹಿತರಲ್ಲಿ ಮುಖ್ಯರು. ಭಾಷಾ ಸಾಹಿತ್ಯ ವಿಚಾರಗಳಲ್ಲಿ ಇವರು ಗರಣಿ ಕೃಷ್ಣಾಚಾರ್ಯರವರ ಅಭಿಪ್ರಾಯಗಳನ್ನು ಬಯಸಿ, ಅವರ ಮಾತಿಗೆ ಮನ್ನಣೆ ಕೊಡುತ್ತಿದ್ದರು.

ಕೃಷ್ಣಾಚಾರ್ಯರವರು ಅನೇಕ ವಿದ್ವತ್ಪರಿಷತ್ತುಗಳ ಕಾರ್ಯಗಳಲ್ಲಿ ಭಾಗವಹಿಸಿದ್ದರು. ಕರ್ನಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಲ್ಲಿ ಉತ್ಸಾಹದಿಂದ ಸೇರಿದ್ದರು. ಅದಾದಮೇಲೆ ಅವರು ಬದುಕಿದ್ದದ್ದು ಮೂರು ವರ್ಷ ಮಾತ್ರ. ೧೯೧೮ನೆಯ ನವೆಂಬರ್ ತಿಂಗಳಲ್ಲಿ ತಮ್ಮ ೬೩ನೆಯ ವರ್ಷದಲ್ಲಿ ಅವರು ಕಾಲಾಧೀನರಾದರು. ಅವರು ಮೃಚ್ಛಕಟಿಕ ನಾಟಕದ ಪೀಠಿಕೆಯಲ್ಲಿ, -ತಮ್ಮ ೩೫ನೆಯ ವಯಸ್ಸಿನಲ್ಲಿ, (೧೮೯೦)-ಬರೆದ ಕೆಲವು ವಾಕ್ಯಗಳು ನಮಗೆ ಇಂದಿಗೂ ಮನನಾರ್ಹವಾಗಿವೆ:

"...ಇತರ ದೇಶ ಭಾಷೆಗಳಂತೆ ಒಂದೇ ವಿಧವಾದ ಕಟ್ಟಳೆಯನ್ನು ಹೊಂದದೆ, ಅಶಿಕ್ಷಿತರಾದ ಕವಿಗಳು ಹುಟ್ಟಿ, ಮನಸ್ಸು ಬಂದಂತೆ ಭಾಷೆಯನ್ನು ಕೆಡಿಸಿದುದಕ್ಕಾಗಿ ಎಷ್ಟು ಚಿಂತಿಸಿದರೂ ತೀರದು. ಅಂತಹ ನಮ್ಮ ಕನ್ನಡದ ಭಾಷಾ ವಿಷಯದಲ್ಲಿರುವ ಲಕ್ಷ್ಯ ಲಕ್ಷಣ ವಿರೋಧಗಳನ್ನು ಪೂರ್ವದಲ್ಲಿ 'ನಾಗಾನಂದ ನಾಟಕ'ದ ಉಪೋದ್ಘಾತದಲ್ಲಿ ಕೆಲವು ಮಟ್ಟಿಗೆ ತೋರಿಸಿ, ಇನ್ನೂ ಹೀಗೆಯೇ ಬಹಳವಿರುವುದೆಂದು ಸೂಚಿಸಿ, ಗುಣಜ್ಞರು ಪರೀಕ್ಷಿಸಬಹುದೆಂದು ಪ್ರಕಟಿಸಿ, ಇದುವರೆಗೆ ಎರಡೂವರೆ ವರುಷಗಳಾದರೂ, ನಾಡಿಗರಾಗಲಿ ವಿದ್ಯಾರ್ಥಿಗಳಾಗಲಿ ಯಾರೊಬ್ಬರಾದರೂ ಅದನ್ನು ಗುಣ ದೋಷ ವಿಚಾರದಿಂದ ಸಮರ್ಥಿಸದೆ ಉಪೇಕ್ಷಿಸಿರುವುದಂ ನೋಡಿದರೆ: ನಮ್ಮ ಕರ್ಣಾಟಕ ಭಾಷೆಯಲ್ಲಿ ಭಾಷಾಭಿಮಾನಿಗಳೇ ಇಲ್ಲವೋ; ಇದ್ದವರಿಗಾದರೂ ಈ ಅವ್ಯವಸ್ಥೆಯೇ ಸಮ್ಮತವೇನೋ; ಇಲ್ಲದೆ ಭಿನ್ನ ಪ್ರಭುತ್ವದಿಂದ ದೇಶಗಳೂ ಭಿನ್ನ ಭಿನ್ನಗಳಾಗಿರಲು ಅಲ್ಲಿ ವಾಸಿಸುವ ದೇಶಾಂತರ ಖಂಡಾಂತರ ಜನಗಳಿಗೆ ಐಕಮತ್ಯವಿಲ್ಲದುದರಿಂದಲೋ; ಅಥವಾ ನಮ್ಮ ಭಾಷೆಯಲ್ಲಿ-ಅದೃಶ್ಯ ಕವಿ, ದೃಶ್ಯ ಕವಿ, ಜ್ಞಾನಸಿಂಧು ಕವಿ, ಕರ್ಣಾಟಕ ವ್ಯಾಸ ಶುಕ ವಾಲ್ಮೀಕಿ ಕವಿಗಳು, ಇನ್ನೂ ವರಕವಿಗಳೇ ಮುಂತಾದ ಪರಮ ಪಂಡಿತರಿಂದ ಮಾಡಲ್ಪಟ್ಟ ಬಹುಲಕ್ಷ್ಯ ಗ್ರಂಥಗಳೂ, ಹೊಸಗನ್ನಡ, ನಡುಗನ್ನಡ, ಕನ್ನಡ ಕೌಮುದೀ, ವಾಣೀಮುಕುರ, ವಾಗ್ವಿಧಾಯಿನೀ, ಶಬ್ದ ಭಾಸ್ಕರಾದಿ ವಿಲಕ್ಷಣ ಲಕ್ಷಣ ಗ್ರಂಥಗಳೂ ಪ್ರಚುರವಾಗಿರುವುದರಿಂದ, ಸಾಕಲ್ಯವಾಗಿ ಪರಸ್ಪರ ಲಕ್ಷ್ಯ ಲಕ್ಷಣ ಸಮನ್ವಯವಂ ಮಾಡುವುದು ಅಸಾಧ್ಯವಾದುದರಿಂದಲೋ; ಉಪೇಕ್ಷೆಯ ಕಾರಣವಂ ತಿಳಿಯದೆ ಅದು ಹೇಗಾದರೂ ಇರಲೆಂದು ತಿಳಿದು, ಮುಂಚೆಯಿದ್ದ ಭಾಷಾಭಿಮಾನಮಂ ತೊರೆದುಕೊಂಡು, ಈ ಕಾಲದವರೆಗೆ ಪದಪದಾರ್ಥಗಳು ಚೆನ್ನಾಗಿ ತಿಳಿಯುವುದೇ ಮುಖ್ಯೋದ್ದೇಶವಾಗಿರುವ ಕಾರಣದಿಂದ, ನಾನು ಕೇವಲ ಲಕ್ಷಣಪರವಾದರೆ ಪ್ರಾಚೀನ ಭಾಷೆಯನ್ನೂ ಕೇವಲಾಸಹ್ಯಕರದಾದ ನಿಂದ್ಯ ಗ್ರಾಮ್ಯ ಭಾಷೆಯನ್ನೂ ಬಿಟ್ಟು ಮಧ್ಯಸ್ಥದಲ್ಲಿರುವ ಜೈಮಿನಿ ಭಾರತಕಾರ ಲಕ್ಷ್ಮೀಶಾದಿ ಸಮ್ಮತವಾದಿ ಮಿಶ್ರಭಾಷಾ ಶೈಲಿಯನ್ನೇ ಪ್ರಕೃತೋಚಿತವಾಗಿ ಅವಲಂಬಿಸುವುದು ಯುಕ್ತವೆಂದು ತಿಳಿದು ಹಾಗೆ ಮಾಡಿರುವೆನು.

"ಅಂತಲ್ಲದೆ ನಾವೇ ಕೈಲಾದಮಟ್ಟಿಗೂ ಭಾಷೆಯಂ ಶುದ್ಧಗೊಳಿಸಿ ವಿಧಿಗಳನ್ನೇರ್ಪಡಿಸಿ ಸಮನ್ವಯ ಮಾಡಿ ಭಾಷೆಯನ್ನಭಿವೃದ್ಧಿಗೆ ತರುವೆವೆಂದರೆ-ಅದಕ್ಕೆ ತಕ್ಕಷ್ಟು ಧನೋಪಪತ್ತಿಯೂ ರಾಜಕೀಯ ಸಹಾಯವೂ ಜೀವನ ಸ್ವಾಸ್ಥ್ಯವೂ ಇಲ್ಲವು. ಇನ್ನು ಕೇವಲ ಕೀರ್ತಿಕಾಮರಾಗಿಯಾದರೂ ಶ್ರಮಪಟ್ಟು ಗ್ರಂಥಗಳಂ ರಚಿಸಿ ಪ್ರಕಟಿಸುವೆವೆಂದರೆ, ಈ ಕಾಲದಲ್ಲಿ- 'ಸರ್ವೇ ಯಜಮಾನಾಸ್ಸರ್ವೇ ಋತ್ವಿಜಃ' ಎಂಬಂತೆ ಬರಹ ಬಂದವರೆಲ್ಲರೂ ಕವಿಗಳೂ, ಓದಲ್ಬಂದವರೆಲ್ಲರೂ ಉಪನ್ಯಾಸಕರೂ, ಯಕ್ಷಗಾನ ಕಾವ್ಯ ಮಾಲಾದಿಗಳನ್ನೋದುವ ಶಾಲಾವಿದ್ಯಾರ್ಥಿಗಳೆಲ್ಲರೂ ಪಂಡಿತರೂ, ಪಾಠಶಾಲೆಯಂ ಬಿಟ್ಟು

ಬಂದವರೆಲ್ಲರೂ ಒಡನೆಯೇ ಪರೀಕ್ಷಕರೂ, ಮತ್ತೆ ಕೆಲವರು ಏತದ್ಭಾಷಾಲೇಶ ಶೂನ್ಯರಾಗಿದ್ದರೂ ಅದಕ್ಕವರು ವಿಚಾರಕರೂ, ರೋಧಕರೂ, ನಿಯಾಮಕರೂ, ಕೋಶಾಭಿಧಾನಲಕ್ಷಣಕಾರರೂ ಆಗಿರಲು- ತತ್ಪ್ರಾಮಾಣ್ಯವುಳ್ಳ ಆ ಜನಗಳ ನಡುವೆ ಜೀವಿಸುವ ನಮಗೆ 'ಶ್ವಾನಾರೋಹೇ ಕುತಸ್ಸೌಖ್ಯಂ ಪತನೇ ಕಾಽವಮಾನಿತಾ' ಎಂಬಂತೆ ಅಕಿಂಚಿತ್ಕರವಾದ ಆ ಕೀರ್ತಿಯ ಆರ್ತಿಯೇತಕ್ಕೆ! ಎಂದು ಸುಮ್ಮನಿರುವುದೇ ಉತ್ತಮವು. ಹಾಗಲ್ಲದೆ ಒಂದು ವೇಳೆ ಸ್ವಜಾತಿ ದೇಶಭಾಷಾ ನಿವೇಶ ಚಾಪಲ್ಯಗಳಿಂದ ತದುದ್ಯೋಗದಲ್ಲಿ ಪ್ರವರ್ತಿಸುವವನು ಬೆತ್ತಲೆಯಿರುವವರ ನಡುವೆ ಕೌಪೀನವನ್ನುಟ್ಟವನಂತೆ ಹಾಸ್ಯಾಸ್ಪದವಾಗುವುದಲ್ಲದೆ, ಪುಣ್ಯ ಪುರುಷಾರ್ಥಗಳಿಲ್ಲದೀ ಕಾರ್ಯದಲ್ಲಿ ಪ್ರಯತ್ನಿಸಿ, 'ಹಾಳು ತೋಟಕ್ಕೆ ನೀರನೆತ್ತಿ ಬೀಳುರಟ್ಟೆ ಬಿತ್ತು' ಎಂಬ ಗಾದೆಗೆ ಸರಿಯಾಗಿ ವೃಥಾಯಾಸಕ್ಕೆ ಗುರಿಯಾಗಬೇಕಾದೀತೆಂಬ ಶಂಕೆಯಿಂದ ವಿರಮಿಸಬೇಕಾಯಿತು."

ಕೃಷ್ಣಾಚಾರ್ಯರವರು ಗಂಭೀರ ಸ್ವಭಾವದವರು, ಅತಿ ಮಾತಿನವರಲ್ಲ. ಮೆಚ್ಚಿಕೆ ಸಂಪಾದಿಸುವುದಕ್ಕಾಗಿಯಾಗಲಿ, ಪ್ರತಿಷ್ಠೆಗಾಗಿಯಾಗಲಿ ಹಾರಾಡಿದವರಲ್ಲ. ಕರ್ತವ್ಯವಾದದ್ದನ್ನು ಮಾಡುವುದು, ವಕ್ತವ್ಯವಾದದ್ದನ್ನು ನುಡಿಯುವುದು, ಫಲಾಫಲಗಳ ವಿಷಯದಲ್ಲಿ ಉದಾಸೀನರಾಗಿರುವುದು-ಇದು ಅವರ ಸ್ವಭಾವ. ಅಧಿಕಾರಸ್ಥರಲ್ಲಿಯೂ ಬಲಿಷ್ಠರಲ್ಲಿಯೂ 'ಉಪಸರ್ಪಣೆ' ಮಾಡಿಕೊಂಡು ಹೋಗುವುದು ಅವರ ಸ್ವಭಾವದಲ್ಲಿರಲಿಲ್ಲ. ಅವರು ಎಲ್ಲ ವಿಷಯಗಳಲ್ಲಿಯೂ ನಿಯಮವಿರಿಸಿಕೊಂಡು ಸ್ವತಂತ್ರವಾಗಿ ನಡೆದವರು.

ನಾನು ಅವರ ಮನೆಗೆ ಹೋಗುತ್ತಿದ್ದದ್ದುಂಟು. ಅವರ ಒಬ್ಬ ಅಳಿಯಂದಿರಾದ ಕೃಷ್ಣಮೂರ್ತಿ ಎಂಬವರೂ, ಆತನ ದೊಡ್ಡಮ್ಮನ ಮಗ ಕೃಷ್ಣಮೂರ್ತಿ ಎಂಬ ಇನ್ನೊಬ್ಬರೂ ನಾನೂ ಸುಮಾರು ಸಮವಯಸ್ಸಿನವರಾಗಿ ಸ್ನೇಹಿತರಾಗಿದ್ದೆವು. ಇದು ನಾನು ಅವರ ಮನೆಗೆ ಹೋಗಿ ಬರುತ್ತಿದ್ದದ್ದಕ್ಕೆ ನೆವ. 'ನೆವ' ಎಂದೆ. ನಿಜವಾದ ಕಾರಣ ಬೇರೆ. ಆ ಕಾರಣ ಆ ಆಚಾರ್ಯ ಮಹನೀಯರನ್ನು ಹತ್ತಿರದಿಂದ ನೋಡಬೇಕೆಂಬ ಕುತೂಹಲ. ಆ ವೇಳೆಗೆ ನಾನು ಅವರ 'ಶಬ್ದರತ್ನಾವಳಿ', 'ಧಾತುರತ್ನಾವಳಿ' ಗ್ರಂಥಗಳನ್ನು ಪಾಠ ಮಾಡಿದ್ದೆ. ಅವುಗಳಲ್ಲಿಯ ಶ್ಲೋಕಗಳು ನನ್ನನ್ನು ಆಕರ್ಷಿಸಿದ್ದವು.

ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸ್ಥಾಪನೆಯ ಸಂದರ್ಭದಲ್ಲಿ (೧೯೧೫)ನಾನು ಅವರಿಗೆ ಸಮೀಪಸ್ಥನಾದೆ. ಅಂದಿನಿಂದೀಚೆಗೆ ಅವರು ನನ್ನನ್ನು ಬಳಕೆಯಿಂದ ಮಾತನಾಡಿಸುತ್ತಿದ್ದರು. ಅವರ ಪ್ರೀತಿವಾತ್ಸಲ್ಯಗಳು

ಒಂದು ಭಾಗ್ಯಸ್ಮೃತಿಯಾಗಿ ನನ್ನ ಮನಸ್ಸಿನಲ್ಲಿ ಉಳಿದುಕೊಂಡಿವೆ. ಆಕಾರದಲ್ಲಿ ಹೇಗೋ, ವಿದ್ವತ್ತಿನಲ್ಲಿ ಹೇಗೋ ಗುಣಶೀಲಗಳಲ್ಲಿಯೂ ಹಾಗೆಯೇ ಅವರು ಉನ್ನತರಾಗಿ, ಪರಿಶುದ್ಧರಾಗಿ, ತೇಜಸ್ವಿಗಳಾಗಿದ್ದರು.

# ೧೦

# ಎಂ.ಆರ್. ಶ್ರೀನಿವಾಸಮೂರ್ತಿ

ಶ್ರೀನಿವಾಸಮೂರ್ತಿಗಳು ಹುಟ್ಟು ರಸಿಕರು. ರಸಿಕತೆ ಎಂದರೆ ಜೀವನದ ಎಲ್ಲ ರಂಗಗಳಲ್ಲಿಯೂ ಸೊಗಸನ್ನು ಹುಡುಕುವ ಪ್ರವೃತ್ತಿ, ಮತ್ತು ಇರುವ ಸೊಗಸನ್ನು ಕಂಡು ಸವಿಯುವ ಶಕ್ತಿ. ಈ ಸಹಜ ಗುಣವು ಮೂರ್ತಿಗಳಲ್ಲಿ ಒಂದು ಕಡೆ ಸಾಹಿತ್ಯಕ್ಷೇತ್ರವನ್ನು ಆಶ್ರಯಿಸಿತು; ಇನ್ನೊಂದು ಕಡೆ ಅವರ ನಿತ್ಯಜೀವನದಲ್ಲಿ ವ್ಯಾಪಿಸಿಕೊಂಡಿತು.

೧೯೧೪ರ ಸುಮಾರಿನಲ್ಲಿ ಅವರು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದಾಗ "ಶ್ಯಾಮೂ" ಎಂಬ ಪುಸ್ತಕವನ್ನು ಅಚ್ಚುಮಾಡಿಸುವುದಕ್ಕಾಗಿ ನನ್ನ ಪತ್ರಿಕೆ ಅಚ್ಚಾಗುತ್ತಿದ್ದ ಮುದ್ರಣಾಲಯಕ್ಕೆ ಅವರು ಬಂದದ್ದು ನನಗೆ ನೆನಪಿದೆ. ಆಗ ಅವರು ನವಯೌವನದಲ್ಲಿದ್ದರು; ಎತ್ತರವಾದ ಆಳು, ಕೆಂಬಿಳುಪಿನ ಮೈಬಣ್ಣ, ನಗುಮುಖ, ಸರಿಗೆಯ ಪಂಚೆ, ಧೋರಣೆಯ ಮಾತು, ಕೈಯಲ್ಲಿ ಸಣ್ಣ ಬೆತ್ತ, ಠೀವಿಯ ನಡಿಗೆ. ಇದನ್ನೆಲ್ಲ ನಾನು ಹಾಗೆ ವಿಶೇಷವಾಗಿ ಗಮನಿಸಲು ಒಂದು ಕಾರಣವಿತ್ತು. ಅವರ ತಂದೆಗಳು ಎಂ. ಆರ್. ರಾಮಚಂದ್ರರಾಯರು ನಮ್ಮೂರಿನ ಅಮಲ್ದಾರರಾಗಿದ್ದರು; ಮತ್ತು ನನ್ನ ಹತ್ತಿರದ ಹಿರಿಯ ಬಂಧುಗಳೊಬ್ಬರ ಸ್ನೇಹಿತರಾಗಿದ್ದರು. ನಾನು ಕಂಡಿರುವ ಸ್ಫುರದ್ರೂಪಿಗಳಾದ ಗಂಡಸರಲೆಲ್ಲ ಗಣ್ಯರಾದವರೊಬ್ಬರು ಆ ರಾಮಚಂದ್ರರಾಯರು. ಅಂಥವರ ಮಗ ಈತನಾದದ್ದರಿಂದ ಈತನ ವಿಷಯದಲ್ಲಿ ನನಗೆ ಕುತೂಹಲವಿತ್ತು. ಆಗ ಬಹುಶಃ ಮೂರ್ತಿಗಳೇ ಬರೆದಿದ್ದ (ಅಥವಾ ಅವರ ಸ್ನೇಹಿತರು ಯಾರೋ ಬರೆದು ಅವರಿಂದ ಪರಿಷ್ಕಾರ ಮಾಡಿಸಿದ್ದ) ಆ 'ಶ್ಯಾಮೂ' ಕಥೆಯನ್ನು ನಾನು ಓದಿ ಅದರ ಶೈಲಿಯನ್ನು ಮೆಚ್ಚಿಕೊಂಡೆ. ಅದು ಬಲತಾಯಿಯಿಂದ ಒಬ್ಬ ಹೆಣ್ಣುಮಗಳು ಪಟ್ಟ ಕಿರುಕುಳದ ಕಥೆಯೆಂದು ನನ್ನ ಜ್ಞಾಪಕ. ಅದರ ವಿವರಗಳು ನನಗೆ ಮರೆತುಹೋಗಿವೆ.

ಶ್ರೀನಿವಾಸಮೂರ್ತಿಗಳು ಬಿ.ಎ. ಪ್ಯಾಸ್ ಮಾಡಿದ ಮೇಲೆ ಲಾ ವ್ಯಾಸಂಗಕ್ಕಾಗಿ ಕೆಲವು ಕಾಲ ಬೊಂಬಾಯಿಗೆ ಹೋಗಿದ್ದರೆಂದು ತೋರುತ್ತದೆ. ಆಗ ಅವರು ಅಲ್ಲಿ ನೋಡಿದ ಸಮುದ್ರತೀರದ ರಮಣೀಯ ದೃಶ್ಯವೊಂದನ್ನು ವರ್ಣಿಸಿ ಕೆಲವು ಪದ್ಯಗಳನ್ನು ಬರೆದಿದ್ದರು. ಅಲ್ಲಿಂದ ಅನೇಕ ವರ್ಷಗಳು ಕಳೆದಮೇಲೆ

ನನಗೆ ಆ ಪದ್ಯಗಳನ್ನು ತೋರಿಸಿದರು. ಅವು ಹಳೆಗನ್ನಡ ಚಂಪೂ ಕಾವ್ಯದ ಶೈಲಿಯ ಕಂದಪದ್ಯಗಳು ಮತ್ತು ವೃತ್ತಗಳು. ಆ ಪದ್ಯಗಳ ವಿಷಯ ವಾಯುವಿಹಾರಕ್ಕಾಗಿ ಬಂದಿದ್ದ ಪಾರ್ಸಿ ಗುಜರಾತಿ ಯುವತಿಯರ ರೂಪ ವಿಲಾಸಗಳ ವರ್ಣನೆ-ಯುವಕರಿಗೆ ಸಹಜವಾದದ್ದು.

ಮೇಲಿನ ಎರಡು ಲಘು ಸಾಹಿತ್ಯ ರಚನೆಗಳನ್ನು ನಾನು ಪ್ರಸ್ತಾವ ಮಾಡಿರುವುದರ ಉದ್ದೇಶವು ಮೂರ್ತಿಗಳಿಗೆ ಸಾಹಿತ್ಯ ರಸಿಕತೆ ಚಿಕ್ಕವಯಸ್ಸಿನಿಂದ ಬಂದಿತ್ತೆಂಬುದನ್ನು ತೋರಿಸುವುದು. ಈ ನೈಜವಾದ ಸಾಹಿತ್ಯೋತ್ಸಾಹ ಅವರು ಉಪಾಧ್ಯಾಯ ವೃತ್ತಿಯನ್ನು ಕೈಕೊಂಡಮೇಲೆ ಬೇರೆ ರೂಪವನ್ನು ತಾಳಿತು. ವಿದ್ಯಾರ್ಥಿಗಳಿಗೆ ಒಳ್ಳೊಳ್ಳೆಯ ಕಾವ್ಯಗಳನ್ನು ತೋರಿಸಿ ಅವರ ರಸಗ್ರಹಣ ಶಕ್ತಿಯನ್ನು ಅಭಿವೃದ್ಧಿಗೊಳಿಸುವ ಹವ್ಯಾಸಕ್ಕೆ ಮೂರ್ತಿಗಳು ಮನಸ್ಸು ಕೊಟ್ಟರು. ಅವರು ಪಾಠ ಹೇಳುತ್ತಿದ್ದದ್ದು ಫಿಸಿಕ್ಸ್ ಮತ್ತು ಕೆಮಿಸ್ಟ್ರಿ-ಭೌತ ರಾಸಾಯನಿಕ ಶಾಸ್ತ್ರಗಳನ್ನು. ಅವರ ಸಾಹಿತ್ಯ ವ್ಯಾಸಂಗ ಕೇವಲ ಆತ್ಮಸಂತೋಷಕ್ಕಾಗಿ ಆದದ್ದು. ಅವರು ಶಿವಮೊಗ್ಗದಲ್ಲಿದ್ದಾಗ ಹಾಸ್ಟೆಲಿನಲ್ಲಿ ವಿದ್ಯಾರ್ಥಿಗಳನ್ನು ಸೇರಿಸಿ ಕಾವ್ಯವಾಚನವನ್ನೂ ನಾಟಕಾಭ್ಯಾಸವನ್ನೂ ಪ್ರೋತ್ಸಾಹಿಸಿ ಹೇಗೆ ವಿನೋದಪಡುತ್ತಿದ್ದರೆಂಬುದನ್ನು ಆಗ ಅವರ ವಿದ್ಯಾರ್ಥಿಯಾಗಿದ್ದ ಶ್ರೀಮಾನ್ ನಿಟ್ಟೂರು ಶ್ರೀನಿವಾಸರಾಯರು ನನಗೆ ಹೇಳಿದ್ದಾರೆ.

ಮೂರ್ತಿಗಳ ಪ್ರಕೃತಿಯೇ ವಿನೋದದ್ದು, ಆ ಪ್ರಕೃತಿ ಸ್ನೇಹಗೋಷ್ಠಿಯಲ್ಲಿ ವಿಕಸಿತವಾಗುತ್ತಿತ್ತು. ಅವರು 'ಸ್ಕೌಟ್' ಸಮಾರಂಭದಲ್ಲಿ ಉತ್ಸಾಹವಂತಾಗಿದ್ದರು. ಸ್ಕೌಟ್ ಹುಡುಗರನ್ನು ಗುಂಪು ಕಟ್ಟಿಕೊಂಡು ಸಂಚಾರ ಹೋಗುವುದು, ಅವರಿಂದ ಸಾಹಸ ಕಾರ್ಯಗಳನ್ನು ಮಾಡಿಸುವುದು, ಅವರಿಗಾಗಿ ತಿಂಡಿ ತಯಾರು ಮಾಡುವುದು. ಅವರಿಗೆ ಭೋಜನ ಫಲಾಹಾರಾದಿಗಳನ್ನು ಮಾಡಿಸಿ ಅವರೊಡನೆ ಕುಳಿತು ಹರಟುವುದು- ಇದರಲ್ಲೆಲ್ಲ ಮೂರ್ತಿಗಳಿಗೆ ತುಂಬ ಇಷ್ಟ. ಅವರ 'ಕಂಠೀರವ' ನಾಟಕ ಸ್ಕೌಟ್ ವಿದ್ಯಾರ್ಥಿಗಳಿಗಾಗಿ ತಯಾರಾದದ್ದು. ಹೀಗೆ ಅವರು ಶಿಷ್ಯರೊಡನೆ ಒಡನಾಡಿಯಂತಿದ್ದರೂ ಶಿಸ್ತಿನ ಪ್ರಶ್ನೆ ಬಂದಾಗ ಮಾತ್ರ ನಿರ್ದಾಕ್ಷಿಣ್ಯರಾಗಿ ಕಟ್ಟುನಿಟ್ಟಾಗಿರುತ್ತಿದ್ದರು. ಈ ಕಾರಣದಿಂದ ಅವರ ವಿದ್ಯಾರ್ಥಿಗಳಿಗೆಲ್ಲಾ ಅವರ ವಿಷಯದಲ್ಲಿ ಪ್ರೀತಿ ಇದ್ದಂತೆಯೇ ಗೌರವವೂ ಇತ್ತು.

ಅವರು ನಾರ್ಮಲ್ ಸ್ಕೂಲಿನ ಮುಖ್ಯೋಪಾಧ್ಯಾಯರಾಗಿದ್ದಾಗಲೂ, ಬಳಿಕ ರೇಂಜ್ ಇನ್ ಸ್ಪೆಕ್ಟರಾಗಿದ್ದಾಗಲೂ, ಡಿಸ್ಟ್ರಿಕ್ಟ್ ಇನ್‌ಸ್ಪೆಕ್ಟರಾಗಿದ್ದಾಗಲೂ ತಮ್ಮ ಕೈ ಕೆಳಗಿನ ಉಪಾಧ್ಯಾಯರಲ್ಲಿ ಸ್ನೇಹಿತರಂತೆಯೇ ಸಲಿಗೆಯಿಂದಲೂ ಸರಸಿಗಳಾಗಿಯೂ ನಡೆದುಕೊಳ್ಳುತ್ತಿದ್ದರು. ಅವರ ಈ ಅನುಭವಗಳಲ್ಲಿ ಕೆಲವನ್ನು 'ರಂಗಣ್ಣನ ಕನಸಿನ ದಿನಗಳು' ಎಂಬ ಪುಸ್ತಕದಲ್ಲಿ ಚಿತ್ರಿಸಿದ್ದಾರೆ. ಆ ಪುಸ್ತಕ

ಆಧುನಿಕ ಕನ್ನಡ ಸಾಹಿತ್ಯದ ಜೀವಂತ ಗ್ರಂಥಗಳಲ್ಲೊಂದು. ನಮ್ಮ ದೇಶದಲ್ಲಿ ವಿದ್ಯಾಭ್ಯಾಸಕ್ರಮವನ್ನು ಪರಿಷ್ಕಾರಪಡಿಸಬೇಕೆಂದು ಈಚೆಗೆ ಉತಾವಣೆ ಎತ್ತಿರುವ ಜನದ ಪೈಕಿ ಎಷ್ಟು ಮಂದಿ ಆ ಗ್ರಂಥವನ್ನು ಚೆನ್ನಾಗಿ ಓದಿದ್ದಾರೋ! ಅವರು ಅದನ್ನು ಓದಿ ಅದರ ಭಾವವನ್ನು ಗ್ರಹಿಸಿದ್ದಿದ್ದರೆ ಅವರ ಕಾರ್ಯಮಾರ್ಗ ಬೇರೆಯದಾಗಿರುತ್ತಿತ್ತು.

ಗೃಹಜೀವನದಲ್ಲಿಯೂ ಮೂರ್ತಿಗಳು ಸರಸಹೃದಯರು. ಅವರು ದೊಡ್ಡ ಕುಟುಂಬವನ್ನು ಅಕ್ಕರೆಯಿಂದ ಪೋಷಿಸುತ್ತಿದ್ದವರು. ತಮ್ಮಂದಿರಲ್ಲಿಯೂ ತಂಗಿಯರ ವಿಷಯದಲ್ಲಿಯೂ ಅವರ ಕುಟುಂಬಗಳ ವಿಷಯದಲ್ಲಿಯೂ ನಿರತಿಶಯವಾದ ಮಮತೆಯನ್ನು ಇರಿಸಿಕೊಂಡು, ನಿರಾಶ್ರಯರಿಗೆ ಆಸರೆಯಾಗಿದ್ದರು. ಸಂಸಾರ ನಿರ್ವಹಣದಲ್ಲಿ ಸ್ವಾರ್ಥತ್ಯಾಗಿಗಳಾಗಿ ಕುಟುಂಬದ ಸಂತೋಷದಲ್ಲಿ ಸಂತೋಷಿಗಳಾಗಿದ್ದರು. ಬಂಧುಬಳಗದ ಕಷ್ಟನಿಷ್ಠುರಗಳಲ್ಲಿ ಕನಿಕರ, ಅತಿಥಿಗಳ ವಿಷಯದಲ್ಲಿ ಸಂತೋಷಪೂರ್ವಕ ಆದರಣೆ, ಹೆಂಗಸರು ಮಕ್ಕಳುಗಳ ಗೋಷ್ಠಿಯಲ್ಲಿ ಮಧುರ ಹಾಸ್ಯ ಮಯವಾದ ಮಾತುಕತೆ-ಇದು ಅವರ ಗೃಹಜೀವನ.

ಅವರ ಸಾಹಿತ್ಯ ಸಾಮರ್ಥ್ಯವನ್ನು ಕುರಿತು ನಾನು ಬರೆಯಬೇಕಾದದ್ದು ಅನಾವಶ್ಯಕವೆಂದು ತೋರುತ್ತದೆ. ಏಕೆಂದರೆ ಅವರ ಗ್ರಂಥಗಳು ಎಲ್ಲರಿಗೂ ಪ್ರತ್ಯಕ್ಷವಾಗಿವೆ. ಕಥೆ, ಪದ್ಯ, ನಾಟಕ, ತತ್ತ್ವ, ಇತಿಹಾಸ ಶೋಧನೆ-ಈ ನಾನಾ ಸಾಹಿತ್ಯಶಾಖೆಗಳಲ್ಲಿ ಅವರು ಚಿರಕಾಲ ನಿಲ್ಲುವ ಕೃತಿಗಳನ್ನು ನಮಗೆ ಕೊಟ್ಟಿದ್ದಾರೆ. ಬೆಳಿಗ್ಗೆ ಎರಡು ಪದ್ಯಗಳನ್ನು ಬರೆದು, ಅನಂತರ ಭೋಜನ ಕಾಲದವರೆಗೂ ಮನೆಗೆಲಸವನ್ನೋ ಸ್ಕೂಲಿನ ವ್ಯವಹಾರವನ್ನೋ ವಿಚಕ್ಷಣೆಯಿಂದ ನಡಸಿ, ಮಧ್ಯಾಹ್ನ (ಅವರ ಒಂದಾನೊಂದು ವಾಡಿಕೆಯ ಮಾತಿನಲ್ಲಿ) ‘ಪೊಗಡುದಸ್ತಾಗಿ’ ಪಾಠ ಹೇಳಿ, ಸಂಜೆ ಒಂದು ಸಭೆಯಲ್ಲಿ ಪರಿಣಾಮಕಾರಿಯಾಗುವ ‘ಪೌಂಛಾವಣೆ’ ಯಿಂದ ಉಪನ್ಯಾಸ ಕೊಟ್ಟು, ರಾತ್ರಿ ಮಲಗುವುದಕ್ಕೆ ಮುಂಚೆ ಒಂದು ಕಥೆಯನ್ನೋ ನಾಟಕದ ಒಂದೆರಡು ದೃಶ್ಯಗಳನ್ನೋ ಬರೆಯುವಷ್ಟು ಪ್ರತಿಭೆ ಚೈತನ್ಯಗಳು ಅವರಲ್ಲಿದ್ದುವು. ಅವರು ಯಾವುದನ್ನೇ ಬರೆಯಲಿ, ಅದು ರಸವತ್ತಾಗಿಯೂ ಹಾಗೆಯೇ ಬೋಧಗರ್ಭಿತವಾಗಿಯೂ ಇರುತ್ತಿತ್ತು.

ಕನ್ನಡ ವಾಗ್ಮಿಗಳಲ್ಲಿ ಮೂರ್ತಿಗಳಿಗಿಂತ ಮೇಲ್ಮಟ್ಟದವರು ಯಾರಾದರೂ ಇದ್ದರೆ ಅವರು ನನಗೆ ತಿಳಿಯದವರು. ಸುಸಂಸ್ಕೃತ ಜನರಿಗೆ ಭಾಷಣದಲ್ಲಿ ಬೇಕಾದ ಗುಣ ಬರಿಯವಾಗ್ಝರಿಯಲ್ಲ. ಪದಗಳಲ್ಲಿ ವಿಷಯಸ್ವಾರಸ್ಯವಿರಬೇಕು. ವಿಷಯಗೌರವ ಮತ್ತು ಶಬ್ದ ತೇಜಸ್ಸುಗಳ ಜೊತೆಗೆ ಉಚಿತವಾದ ಆಕಾರಭಾವ ಸೇರಿರಬೇಕು. ಇವೆರಡಕ್ಕೂ ಸಹಾಯಕವಾಗಿ ಶುದ್ಧವಾದ ಕಂಠಸ್ವರವಿರಬೇಕು. ಒಂದು ಉಪನ್ಯಾಸವು

ಕಳೆಕಟ್ಟಲು ಹೀಗೆ ಇನ್ನೂ ಎಷ್ಟೋ ಗುಣಗಳು ಬೇಕು. ಸುಸಂಸ್ಕೃತ ಜನರ ದೃಷ್ಟಿಯಿಂದ ಕನ್ನಡದಲ್ಲಿ ಅತ್ಯುತ್ತಮ ಭಾಷಣಕಾರರೆಂದರೆ ನನಗೆ ಪರಿಚಿತರಾದವರಲ್ಲಿ ವೆಂಕಣ್ಣಯ್ಯನವರೊಬ್ಬರು, ಶ್ರೀನಿವಾಸಮೂರ್ತಿಗಳೊಬ್ಬರು. ವೆಂಕಣ್ಣಯ್ಯನವರಲ್ಲಿ ವಿಚಾರಗಾಂಭೀರ್ಯ ಮತ್ತು ಶೈಲಿಯ ಓಜಸ್ಸು ಮುಖ್ಯ ಗುಣಗಳಾಗಿದ್ದವು. ಮೂರ್ತಿಯವರಲ್ಲಿ ಈ ಗುಣಗಳ ಜೊತೆಗೆ ಮೃದು ಹಾಸ್ಯವೂ ಸೇರಿರುತ್ತಿತ್ತು. ಕೆಲವು ವರ್ಷಗಳ ಹಿಂದೆ ಪರಿಷತ್ತಿನಲ್ಲಿ ರನ್ನ ಕವಿಯ ಸಹಸ್ರವರ್ಷೋತ್ಸವ ನಡೆದಾಗ ಮೂರ್ತಿಗಳು ಮಾಡಿದ ಭಾಷಣವನ್ನು ನಾನು ಎಂದಿಗೂ ಮರೆಯಲಾರೆ. ಆ ದಿನದ ಸಭೆಯಲ್ಲಿ ಮಹಿಳೆಯರ ಗುಂಪು ದೊಡ್ಡದಾಗಿತ್ತು. ಅವರಲ್ಲಿ ಮೂರ್ತಿಗಳವರ ಕುಟುಂಬವೂ ಇದ್ದರು. ಮೂರ್ತಿಗಳು ರನ್ನಕವಿಯ ಗದಾ ಯುದ್ಧ ಕಾವ್ಯವನ್ನು ಕುರಿತು ಮಾತನಾಡುತ್ತ ದ್ರೌಪದಿಯ ಸಮಾಚಾರವನ್ನೆತ್ತಿ ಆಗಾಗ ಆ ಸ್ತ್ರೀ ಶ್ರೋತೃಗಳ ಕಡೆ ತಿರುಗಿ- “ಹೆಂಗಸರು ತಮಗಿಷ್ಟವಾದ ಕಾರ್ಯಗಳಿಗಾಗಿ ಗಂಡಂದಿರನ್ನು ಪ್ರೇರಿಸುತ್ತಾರೆ. ಹಾಗೆ ಮಾಡುವುದರಲ್ಲಿ ಅನೇಕ ಉಪಾಯಗಳನ್ನು ಹೂಡುತ್ತಾರೆ. ದ್ರೌಪದಿ ಭೀಮಸೇನನನ್ನು ಕೆರಳಿಸುವುದಕ್ಕಾಗಿ ಅವನನ್ನು ಮೂದಲಿಸುತ್ತಾಳೆ. ಕೇಳಿರಿ ಆಕೆಯಾಡಿದ ಮಾತನ್ನು. ಗಂಡ ಉದಾಸೀನನಾಗಿದ್ದರೆ ಅವನನ್ನು ಚುಚ್ಚಿ ಎಬ್ಬಿಸಬೇಕೆಂದಿರುವಾಕೆ ದ್ರೌಪದಿಯ ಮೇಲ್ಪಂಕ್ತಿಯನ್ನು ನೋಡಬೇಕು.” ಹೀಗೆ ಹೇಳಿ ಆ ಪದ್ಯಗಳನ್ನು ಸ್ಫುಟವಾಗಿ ಮನಸ್ಸು ಹಿಡಿಯುವಂತೆ ಉದಾಹರಿಸಿದರು. ಉಪನ್ಯಾಸದ ಈ ಭಾಗವನ್ನು ಕೇಳುವಾಗ ಆ ಸಭೆಯಲ್ಲಿ ನಲಿದಾಡಿ ನಗದವರೇ ಇಲ್ಲ. ಆಮೇಲೆ ನಾನು- “ಮೂರ್ತಿ, ಬಲೆ ಜರ್ಬಾಗಿತ್ತು” ಎಂದೆ. ಅವರು, “ಹೌದು ಸಾರ್, ಅಲ್ಲಿ ಕಣ್ಣೆದುರಿಗೆ ಸ್ಫೂರ್ತಿ ಅದಕ್ಕೆ ಕುಳಿತಿತ್ತಲ್ಲ! ಅಂಥ ಒಳ್ಳೆಯ ವಸ್ತು ಎದುರಿಗಿದ್ದರೆ ಭಾಷಣ ಹ್ಯಾಗೆ ಜರ್ಬಾಗದೆ ಹೋಗುತ್ತೆ?” ಎಂದರು. ಇಂಥ ಸರಸ ಸಂಭಾಷಣೆಯಲ್ಲಿ ಮೂರ್ತಿಗಳು ನಿಸ್ಸೀಮರು.

ಮೂರ್ತಿಗಳು ಶಿವಶರಣರ ವಚನಗಳನ್ನು ನುಡಿಯುತ್ತಿದ್ದ ಧಾಟಿಯೂ ಹಾಗೆಯೇ. ಅವರು ಪದ್ಯವನ್ನೋ ಗದ್ಯವನ್ನೋ ವಚನವನ್ನೋ ನುಡಿದ ರೀತಿಯಿಂದಲೇ ಆ ಪ್ರಬಂಧದ ಅರ್ಥ ಕೇಳುವವರಿಗೆ ಕೂಡಲೆ ವಿಶದಪಡುತ್ತಿತ್ತು. ಸಾವಿರಾರು ವಚನಗಳು ಅವರಿಗೆ ಮುಖ್ಯಸ್ಥವಾಗಿದ್ದವು. ಅವರು ಇದುವರೆಗೆ ಅಚ್ಚಾಗಿರುವ ಎಲ್ಲ ಹಳೆಗನ್ನಡ ಕಾವ್ಯಗಳನ್ನೂ ಆಮೂಲಾಗ್ರವಾಗಿ ಓದಿದ್ದದ್ದು ಮಾತ್ರವಲ್ಲದೆ ಜ್ಞಾಪಕದಲ್ಲಿಯೂ ಇರಿಸಿಕೊಂಡಿದ್ದರು. ಆ ಗ್ರಂಥರಾಶಿಯ ಜೊತೆಗೆ ಇನ್ನೂ ಅಚ್ಚಾಗದಿರುವ ಎಷ್ಟೋ ತಾಳೆಯೋಲೆಯ ಗ್ರಂಥಗಳನ್ನೂ ನೋಡಿದ್ದರು. ಕಾವ್ಯವ್ಯಾಖ್ಯಾನದಲ್ಲಿ ಅವರಿಗಿದ್ದ ರಸ ದೃಷ್ಟಿ ತೀಕ್ಷ್ಣವಾದದ್ದು. ಅವರು ನಿರ್ಮತ್ಸರರಾದ ಗುಣಗ್ರಾಹಿಗಳು. ಯಾವ ಗ್ರಂಥದಲ್ಲಿಯೂ ಸ್ವಾರಸ್ಯವೆಲ್ಲೆಂದು ಹುಡುಕಿ ನೋಡುವುದೇ ಅವರ ಕೃಷಿ.

ಮೂರ್ತಿಗಳು ಪರಮ ಸಾತ್ತ್ವಿಕರು; ಅಂತರಂಗ ಭಕ್ತರು; ಮಾತಾಪಿತೃ ಪೂಜಕರು; ಗುರುಹಿರಿಯರಲ್ಲಿ ನಮ್ರರು; ನೀತಿ ಪ್ರಸಂಗಗಳಲ್ಲಿ ತತ್ತ್ವೈಕನಿಷ್ಠರು; ಲೌಕಿಕ ಕರ್ತವ್ಯಗಳಲ್ಲಿ ದಕ್ಷರು ಮತ್ತು ನಿಃಸ್ಪೃಹರು. ಅವರನ್ನು ಬಲ್ಲವರು ಯಾರೂ ಅವರ ಅಗಲಿಕೆಯಿಂದ ಎದೆನೋವು ಪಡದೆ ಇರರು. ಅವರ ಮರಣದಿಂದ ನಮ್ಮ ಸಾಹಿತ್ಯ ಪ್ರಪಂಚದಲ್ಲಿ ಹೇಗೋ ನಮ್ಮ ಸಾಧು ಸಜ್ಜನ ಪ್ರಪಂಚದಲ್ಲಿಯೂ ಹಾಗೆ ನಾವು ಇಂದು ಮತ್ತಷ್ಟು ಬಡವರಾಗಿದ್ದೇವೆ.

# ೧೧

# ಭಾಗವತದ ಶೇಷಾಚಾರ್ಯರೂ ಅಮಲ್ದಾರ್ ಮಹದೇವರಾಯರೂ

ಆಣೆಗೆ ಆರು ತೆಂಗಿನಕಾಯಿ, ರೂಪಾಯಿಗೆ ಹದಿನಾರು ಸೇರಕ್ಕಿ ಸಿಕ್ಕುತ್ತಿದ್ದ ಕಾಲದವರು ಹೆಬ್ಬಣಿ ಶೇಷಾಚಾರ್ಯರು. ಅವರು ಸಂಸ್ಕೃತ ಸಾಹಿತ್ಯದಲ್ಲಿಯೂ ದ್ವೈತ ವೇದಾಂತದಲ್ಲಿಯೂ ದೊಡ್ಡ ಯೋಗ್ಯತೆ ಪಡೆದಿದ್ದವರು. ನಾನು ನೋಡುವ ವೇಳೆಗೆ ಅವರು ವೃದ್ಧರಾಗಿದ್ದರು. ಆದರೂ ಅವರ ವ್ಯಕ್ತಿಸ್ವರೂಪ ಆ ವಯಸ್ಸಿನಲ್ಲಿಯೂ ದರ್ಶನೀಯವಾಗಿತ್ತು. ಅವರ ಮಾತಿನ ರೀತಿಯೂ ಹಾಗೆಯೇ ಆಪ್ಯಾಯನಕಾರಿಯಾಗಿತ್ತು. ಆದದ್ದರಿಂದ ಅವರ ಮೂರ್ತಿ ನನ್ನ ಸ್ಮೃತಿಪಥದಲ್ಲಿ ಉಳಿದಿದೆ.

ಶೇಷಾಚಾರ್ಯರವರಿಗೆ ಇದ್ದ ಲೌಕಿಕವಾದ ಆಸ್ತಿ ಒಂದು ಮಣ್ಣು ಮಾಳಿಗೆಯ ಮನೆ, ಒಂದು ಏಳೆಂಟೆಕರೆ ಜಮೀನು. ಆ ಜಮೀನು ಇದ್ದದ್ದು ಅವರು ವಾಸವಿದ್ದ ಊರಿನಿಂದ ೧೦-೧೨ ಮೈಲಿ ದೂರದ ಒಂದು ಹಳ್ಳಿಯ ಹತ್ತಿರ. ಅದರಿಂದ ಬರುತ್ತಿದ್ದ ಗುತ್ತಿಗೆಯ ಧಾನ್ಯದ ಜೊತೆಗೆ ಅವರಿಗಿದ್ದ ಸಂಪಾದನೆ (೧) ಪುರಾಣ ಹೇಳಿದ್ದಕ್ಕಾಗಿ ಪುರಾಣ ಮಾಡಿಸಿದವರು ಕೊಡುತ್ತಿದ್ದ ಸೂತ ಸಂಭಾವನೆ, (೨) ಶ್ರೀಮನ್ಮಧ್ವ ಸಿದ್ಧಾಂತೋನ್ನಾಹಿನೀ ಸಭೆಯವರು ತಿರುಪತಿಯಲ್ಲಿ ವಾರ್ಷಿಕ ಸದಸ್ಸಿನಲ್ಲಿ ಕೊಡುತ್ತಿದ್ದ ವಿದ್ವತ್ಸಂಭಾವನೆ-ಇವಿಷ್ಟೆ. ಶೇಷಾಚಾರ್ಯರು ಯಾರನ್ನೂ ಎಂದೂ ಯಾಚಿಸಿದವರಲ್ಲ; ತಮಗೆ ಉಪಪತ್ತಿ ಸಾಲದೆಂದು ಕೊರಗಿದವರಲ್ಲ. ಪತ್ನೀವಿಯೋಗವಾಗಿತ್ತು; ಮನೆ ತುಂಬ ಮಕ್ಕಳು ಮೊಮ್ಮಕ್ಕಳೂ ಉಪಜೀವಿಗಳೂ ಇರುತ್ತಿದ್ದರು. ಆಚಾರ್ಯರು ಈ ದೊಡ್ಡ ಕುಟುಂಬವನ್ನು ಪೋಷಿಸುವುದರಲ್ಲಿ ಜುಗುಪ್ಸೆಯನ್ನು ತೋರಿದವರಲ್ಲ. ಅದಕ್ಕಾಗಿ ಮನಸ್ಸನ್ನಾಗಲಿ ಮೈಯನ್ನಾಗಲಿ ವಿಕಾರಪಡಿಸಿಕೊಂಡವರೂ ಅಲ್ಲ.

ಎತ್ತರವಾದ ಆಳು, ದಂತದ ಮೈಬಣ್ಣ, ಸೌಮ್ಯವಾದ ಮುಖಭಾವ, ನಯವಾದ ಹಾಸ್ಯ ಬೆರೆತ ಸ್ನೇಹಧ್ವನಿಯ ಮಾತು, ಶುಚಿಯಾದ ಒಳಗು-ಹೊರಗುಗಳು-ಇದರಿಂದ ಶೇಷಾಚಾರ್ಯರು ಊರಿನಲ್ಲೆಲ್ಲರಿಗೂ ಪ್ರಿಯರಾಗಿ ಎಲ್ಲರ ಗೌರವಕ್ಕೂ ಪಾತ್ರರಾಗಿದ್ದರು.

ಶೇಷಾಚಾರ್ಯರಿಗಿದ್ದ ಪರಮನಿಧಿ ಅವರ ಮನೋದಾರ್ಢ್ಯ. ಅವರು ಒಂದಾನೊಂದು ವಸ್ತುವನ್ನು ದೃಢವಾಗಿ ನಂಬಿದ್ದರು. ಆ ವಸ್ತು ಭಾಗವತ. ಆ ವಿಸ್ತಾರವಾದ ಮನೋಹರಕಾವ್ಯದ ಯಾವ ಭಾಗವನ್ನಾದರೂ ಅವರು-ಗ್ರಂಥವನ್ನೆದುರಿಗಿರಿಸಿಕೊಳ್ಳದೆಯೇ-ಜ್ಞಾಪಕದಿಂದಲೇ ಹೇಳಬಲ್ಲವರಾಗಿದ್ದರು. ಅವರ ಮನೆಯಲ್ಲಿದ್ದ ಬೆಲೆಬಾಳುವ ಸ್ವತ್ತುಗಳಲ್ಲೆಲ್ಲ ಅತ್ಯಂತ ಮೌಲ್ಯವುಳ್ಳದ್ದೆಂದರೆ ಒಂದು ಹಳೆಯ ಕಾಲದ ಮರದ ಸಂದೂಕ. ಆ ಸಂದೂಕಿನಲ್ಲಿದ್ದದ್ದು ಒಂದು ಹಳೆಯ ತಾಳೆಯೋಲೆಯ ಪುಸ್ತಕ. ಅದು ಸಂಸ್ಕೃತ ಭಾಗವತ ಗ್ರಂಥ. ಅದರ ಜೊತೆಗೆ ಒಂದು ಅಚ್ಚಾದ ಬಾಲಬೋಧಾಕ್ಷರದ ಭಾಗವತದ ಪುಸ್ತಕವನ್ನೂ ಸಂಪಾದಿಸಿ ಇಟ್ಟುಕೊಂಡಿದ್ದರು. ಈ ಎರಡು ಪುಸ್ತಕಗಳನ್ನು ಒಳ್ಳೆಯ ಜರತಾರಿಯ ಶಾಲುಗಳಲ್ಲಿ ಸುತ್ತಿ. ಸಂದೂಕಿನಲ್ಲಿ ಇಟ್ಟಿರುತ್ತಿದ್ದರು. ಅವರಿಗೆ ವರ್ಷಕ್ಕೆ ಒಂದೆರಡು ಸಾರಿಯಾದರೂ ಹೊಸ ಶಾಲುವೂ ಜರತಾರಿ ಶಲ್ಯಗಳೂ ಉಡುಗೊರೆಯಾಗಿ ಬರುತ್ತಿದ್ದವು. ಹಾಗೆ ಬಂದ ನೂತನ ವಸ್ತ್ರವನ್ನು ಶೇಷಾಚಾರ್ಯರು ತಾವು ಧರಿಸಿಕೊಳ್ಳದೆ, ತಮ್ಮ ಮಕ್ಕಳಿಗೂ ಕೊಡದೆ, ಭಾಗವತ ಪುಸ್ತಕಕ್ಕೆ ಸುತ್ತಿಡುತ್ತಿದ್ದರು. ಒಂದು ಸಲ ನಾನು ಅವರ ಪುಸ್ತಕವನ್ನು ನೋಡಬೇಕೆಂದೆ. ಅಚಾರ್ಯರು ಸಂತೋಷವೆಂದು ಹೇಳಿ ಸಂದೂಕವನ್ನು ತೆರೆದು ತೋರಿಸಿದರು. ಒಂದೊಂದು ಪುಸ್ತಕಕ್ಕೂ ಒಂದೊಂದು ಮಗುಟ, ಅದರ ಮೇಲೆ ಕಲಾಬತ್ತಿನ ಶಲ್ಯ, ಅದರ ಮೇಲೆ ಜರತಾರಿ ಶಾಲು ಸುತ್ತಿದ್ದರು. ಅವರು ಆ ವಸ್ತ್ರಗಳನ್ನು ಒಂದೊಂದಾಗಿ ಬಿಚ್ಚಿ ಅದರ ಮೇಲಣ ಜರತಾರಿಯ ಚಿತ್ರವನ್ನೂ ನೆಯ್ಗೆಯ ನಾಜೂಕನ್ನೂ ತೋರಿಸಿದರು. ನಾನು ಹುಡುಗುತನಕ್ಕೆ ಸಹಜವಾದ ಹಾಸ್ಯ ಬುದ್ಧಿಯಿಂದ, “ಭಾಗವತಕ್ಕೆ ಇಷ್ಟು ಚಳಿಯಾಗುತ್ತದೆಯೆ?” ಎಂದು ಕೇಳಿದೆ. ಶೇಷಾಚಾರ್ಯರು ನಕ್ಕು, “ನೀ ಏನು ಹುಚ್ಚನ ಹಾಂಗೆ ಮಾತನಾಡ್ತಿ? ಭಾಗವತ ಅಂಬೋದು ದೇವರು, ಬೇರೆ ದೇವರನ್ನು ನಾವು ಕಂಡಿದ್ದೇವೆಯೇ? ನಮಗೆ ಒಳ್ಳೆಯದು ಏನು ಬಂದರೂ ಅದನ್ನು ದೇವರಿಗೆ ಅರ್ಪಣೆ ಮಾಡಬೇಕು. ಈ ಮುದಿ ಮೈಗೆ ಯಾಕೆ ಅಲಂಕಾರ? ಈಗ ನಾನು ಉಟ್ಟಿರುವ ಧೋತ್ರ ನನಗೆ ಸಾಲದೆ? ಇದೂ ಚೆನ್ನಾಗಿದೆ ನೋಡು” -ಎಂದರು ಶೇಷಾಚಾರ್ಯರು ಉಟ್ಟು ಹೊದ್ದಿದ್ದ ಬಟ್ಟೆಗಳು ಶುಭ್ರವಾಗಿ ಚೆನ್ನಾಗಿದ್ದವು. ಅದು ಆಡಂಬರವಿಲ್ಲದ ಸೊಗಸು.

ಪುರಾಣ ಹೇಳುವುದರಲ್ಲಿ ಆಚಾರ್ಯರು ನಿಸ್ಸೀಮರು. ಅವರ ಸಂಭಾಷಣೆಯೂ ಹಾಗೆಯೇ ರಸವತ್ತಾಗಿರುತ್ತಿತ್ತು. ಅದರಲ್ಲಿಯೂ ನವನಾಗರಿಕತೆಯ ವಿಲಕ್ಷಣಗಳನ್ನು ಚಿತ್ರಿಸುವುದರಲ್ಲಿ ಅವರದು ಎತ್ತಿದ ಕೈ. ಆಗ್ಗೆ ಬೆಂಗಳೂರು ಪಟ್ಟಣ ಈಗಿನದರೊಡನೆ ಹೋಲಿಸುವಂತಿರಲಿಲ್ಲ. ಚಾಮರಾಜಪೇಟೆ ಬಸವನಗುಡಿಗಳ ಬಡಾವಣೆಗಳು ಇನ್ನೂ ಹುಟ್ಟಿರಲಿಲ್ಲ. ಶೇಷಾಚಾರ್ಯರಿಗೆ ತಿಳಿದಿದ್ದ ಬೆಂಗಳೂರು

ಉಪ್ಪಾರಪೇಟೆಯಿಂದ ಸಿದ್ದೀ ಕಟ್ಟೆಯವರೆಗಿನದು. ಆ ಪಟ್ಟಣಕ್ಕೆ ಯಾವುದೋ ಸಣ್ಣ ಊರಿನಿಂದ ಬಂದು ಇಲ್ಲಿ ಚಾಕರಿ ಸಂಪಾದಿಸಿಕೊಂಡೋ, ಯಾಚನ ವೃತ್ತಿಯಿಂದಲೋ, ಬುದ್ಧಿ ಚಮತ್ಕಾರದಿಂದಲೋ ಜೀವನ ಮಾಡುತ್ತಿದ್ದವನು ಸಂಸಾರ ನಡಸುತ್ತಿದ್ದ ರೀತಿಯನ್ನು ಶೇಷಾಚಾರ್ಯರು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಿದ್ದರು. ಮನೆ ಬಾಡಿಗೆ ಹತ್ತು ರೂಪಾಯಿ. ಅವರಿಗೆ ಅದೇ ಭಾರಿ. ಆ ಮನೆಯಲ್ಲಿ ಇದ್ದದ್ದು ನಾಲ್ಕು ಸಂಸಾರ. ಅಷ್ಟಕ್ಕೂ ಒಂದು ನಡಮನೆ, ಒಂದು ಕಕ್ಕಸ್ಸು, ಒಂದು ಮುಟ್ಟುಹೆಂಗಸರ ಕೋಣೆ. ಒಂದೊಂದು ಸಂಸಾರಕ್ಕೂ ವಾಸಕ್ಕಿದ್ದದ್ದು ಎರಡೆರಡು ಕೋಣೆಗಳು. ಅದರಲ್ಲೊಂದು ಪಾಕಭೋಜನ ಶಾಲೆ, ಇನ್ನೊಂದು ಬೈಠಕ್ ಖಾನೆ-ಈ ಎರಡು ಕೊಠಡಿಗಳಲ್ಲಿಯೂ ಒಂದೊಂದು ಗೋಡೆಯಲ್ಲಿಯೂ ಐದೈದು ಗೂಡುಗಳು, ಗೂಡುಗಳ ಒಳಗೆ ಗೂಡುಗಳು, ಮೂರು ಮೂರು ಮಂಚಿಗೆಗಳು, ಮಂಚಿಗೆಯ ಮೇಲೆ ಮೆಟ್ಟಿಲುಗಳು, ಆ ಜಾಗಗಳಲ್ಲಿ ಡಬ್ಬಗಳು, ಡಬ್ಬಿಗಳು, ಭರಣಿಗಳು, ಸೀಸೆಗಳು-ಇಂಥ ಪಾತ್ರೆಗಳ ಸಾಲು. ಈ ಪಾತ್ರೆಗಳಲ್ಲಿ ಪದಾರ್ಥಗಳನ್ನು ಅಡಗಿಸಿಡುತ್ತಿದ್ದ ವಿಧಾನ; ಬಂದ ಅತಿಥಿಗಳನ್ನು ಹೋಗೆನ್ನಲಾರದೆ, ಇರಗೊಳಿಸಲಾರದೆ, ಆದರವಿಲ್ಲದ ಆತಿಥ್ಯವನ್ನು ತೋರುತ್ತಿದ್ದ ಬುದ್ದಿವಂತಿಕೆ-ಇದನ್ನೆಲ್ಲ ವರ್ಣಿಸಿ ನಗುವಿನ ತೆರೆಗಳನ್ನು ಎಬ್ಬಿಸುತ್ತಿದ್ದರು.

ಒಂದಾನೊಂದು ಸಾರಿ ಶೇಷಾಚಾರ್ಯರಿಗೆ ಗೃಹಕೃತ್ಯದಲ್ಲಿ ಸ್ವಲ್ಪ ಕಷ್ಟವಾಯಿತು. ಅವರ ಹಳ್ಳಿಯಿಂದ ಬರಬೇಕಾಗಿದ್ದ ಗುತ್ತಿಗೆ ಬರಲಿಲ್ಲ. ಅವರ ರೈತನು ಮೂರು ನಾಲ್ಕು ವರ್ಷಗಳಿಂದ ಸಲ್ಲಿಸಬೇಕಾಗಿದ್ದದ್ದನ್ನು ಸಲ್ಲಿಸದೆ ತಲೆ ತಪ್ಪಿಸಿಕೊಂಡು ತಿರುಗುತ್ತ, ಸುಳ್ಳುವಾಯಿದೆ ಹೇಳುತ್ತ, ಖಂಡಿತವಾಗಿ ಕೇಳಿದಾಗ ಮರ್ಯಾದೆ ಮೀರಿ ಮಾತನಾಡುತ್ತಿದ್ದ. ಶೇಷಾಚಾರ್ಯರಿಗೆ ಅವನ ಪುಂಡುತನವನ್ನು ಸಹಿಸಿ ಸಾಕಾಗಿತ್ತು. ಆಗ್ಗೆ ಆ ತಾಲ್ಲೂಕಿಗೆ ಟಿ.ಆರ್. ಮಹಾದೇವರಾವ್ ಎಂಬವರು ಅಮಲ್ದಾರರಾಗಿ ಬಂದರು. ಮಹಾದೇವರಾಯರು ಹರಿಹರದ ಕಡೆಯವರು. ಜಾತಿಯಲ್ಲಿ ದರ್ಜಿಯವರೆಂದು ಜನ ಹೇಳಿಕೊಳ್ಳುತ್ತಿದ್ದರು. ಮಹಾದೇವರಾಯರು ನಿಃಸ್ಪೃಹರೆಂದೂ ದಕ್ಷರೆಂದೂ ಖಡಾಖಂಡಿತದವರೆಂದೂ ಹೆಸರಾಗಿದ್ದರು. ಅವರ ಕೀರ್ತಿಯನ್ನು ಸ್ಥಿರಪಡಿಸುವ ಸಂದರ್ಭವೊಂದು ಆಗ ನಡೆಯಿತು.

ಊರಿನಲ್ಲಿ ಕೆಲಮಂದಿ ಸಾಹಸಿಗಳು ಹುಟ್ಟಿಕೊಂಡು ರಾತ್ರಿವೇಳೆ ಚಿಲ್ಲರೆ ಓಡಾಟ ನಡಸುತ್ತಿದ್ದರೆಂದು ಅಮಲ್ದಾರರಿಗೆ ಪುಕಾರು ತಲುಪಿತು. ಅಲ್ಲಲ್ಲಿ ಕಳ್ಳತನದ ಸುದ್ದಿಗಳೂ, ಮನೆ ಬಾಗಿಲು ಒಡೆದ ಸುದ್ದಿಗಳೂ ವರದಿಯಾಗಿದ್ದವು. ಹೀಗೆ ತುಂಟತನ ಪ್ರಬಲಿಸುವುದಕ್ಕೆ ಒಬ್ಬರಿಬ್ಬರು ಪೋಲಿಸಿನವರ ಕುಮ್ಮಕ್ಕು ಇದ್ದರೂ ಇದ್ದಿರಬಹುದೆಂದು ಮಹಾದೇವರಾಯರಿಗೆ ತೋರಿತು. ಅವರು ತಾವೇ ಖುದ್ದಾಗಿ ರಾತ್ರಿಯ ಹೊತ್ತು

ವೇಷಧರಿಸಿ ಗಸ್ತು ತಿರುಗಲಾರಂಭಿಸಿದರು. ತಲೆಗೆ ಲಪ್ಪಟ್ಟೆ, ಮೈಮೇಲೆ ಕಂಬಳಿ, ಮೊಣಕಾಲು ಮೇಲಕ್ಕೆ ಪಂಚೆ, ಕೈಯಲ್ಲಿ ದೊಣ್ಣೆ-ಇಂಥ ಉಪಾಯಗಳಿಂದ ಸ್ವರೂಪವನ್ನು ಬದಲಾಯಿಸಿಕೊಂಡಿದ್ದರು. ಒಂದಾನೊಂದು ರಾತ್ರಿ ಅವರು ಪಹರೆ ತಿರುಗುತ್ತಿದ್ದಾಗ ಯಾರೋ ಒಬ್ಬರು ಅವರನ್ನು ಗುರ್ತುಹಿಡಿದರು. ಅದಾದ ೧೦-೧೫ ದಿನಗಳೊಳಗಾಗಿ ಪೊಲೀಸ್ ಇನ್‌ಸ್ಪೆಕ್ಟರಿಗೂ ಜಮಾದಾರರಿಗೂ ಬೇರೆ ಊರಿಗೆ ವರ್ಗವಾಯಿತು. ಊರಿನಲ್ಲಿ ಪುಂಡಾಟದ ಕಥೆ ನಿಂತಿತು. ಈ ಸುದ್ದಿ ಶೇಷಾಚಾರ್ಯರಿಗೂ ತಿಳಿದು ಬಂತು.

ಆಗ್ಗೆ ಮಹಾದೇವರಾಯರು ಆ ಊರಿಗೆ ಬಂದು ಸುಮಾರು ಎರಡು ತಿಂಗಳಾಗಿತ್ತು: ಶೇಷಾಚಾರ್ಯರಿಗೆ ತಮಗೆ ರೈತನಿಂದ ಆಗಿದ್ದ ಕಷ್ಟವನ್ನು ಹೊಸ ಅಮಲ್ದಾರರಲ್ಲಿ ಅರಿಕೆ ಮಾಡಿಕೊಂಡರೆ ಕಷ್ಟಪರಿಹಾರವಾಗಬಹುದೆಂದು ತೋರಿತು, ಅದರಂತೆ ಅವರು ಒಂದು ದಿನ ಬೆಳಿಗ್ಗೆ ಒಂದು ತೆಂಗಿನಕಾಯನ್ನು ಕೈಯಲ್ಲಿ ಹಿಡಿದುಕೊಂಡು ಮಂತ್ರಾಕ್ಷತೆ ತೆಗೆದುಕೊಂಡು ಮಹಾದೇವರಾಯರ ಮನೆಗೆ ಹೋದರು. ರಾಯರು ಆಚಾರ್ಯರನ್ನು ಮರ್ಯಾದೆಯಿಂದ ಬರಮಾಡಿಕೊಂಡು ಪೀಠ ಕೊಟ್ಟು ಬಂದ ಕೆಲಸವೇನೆಂದು ಕೇಳಿದರು. ಆಗ ಆಚಾರ್ಯರವರು ಭಾಗವತದಿಂದ ಒಂದು ಶ್ಲೋಕವನ್ನು ಹೇಳಿ ಆಶೀರ್ವದಿಸಿ ಫಲ ಮಂತ್ರಾಕ್ಷತೆಗಳನ್ನು ರಾಯರ ಕೈಯಲ್ಲಿ ಕೊಟ್ಟು ಈ ಮುಂದಣ ಪದ್ಯವನ್ನು ಹೇಳಿ ಅರ್ಥ ವಿವರಣೆ ಮಾಡಿದರು;

ಮಹಾದೇವರಾದೇವ ಭೂದೇವತಾನಾಂ
ಮಹೀಕಂಟಕಾತಂಕ ನಿಶ್ಶಂಕಹರ್ತಾ
ದಯಾವಾನ್ ಸದಾ ವಾಸುದೇವಾದರಾಢ್ಯಃ
ಜನೇ ಯನ್ನದೇಯಂ ಮುದೇಯಂ ಮಮ ಸ್ಯಾತ್ ॥ [1]

"ಬ್ರಾಹ್ಮಣರಿಗೆ ಬೇಸಾಯಗಾರರಿಂದ ಆಗಿರುವ ಬಾಧೆಯನ್ನು ಸಂಪೂರ್ಣವಾಗಿ ಹೋಗಲಾಡಿಸಬಲ್ಲಾತನು ಮಹಾದೇವರಾಯನೇ; ಆತನು ದಯಶಾಲಿ; ಸಕಲಭೂತ ನಿವಾಸಿಯಾದ ಶ್ರೀ ವಾಸುದೇವನಲ್ಲಿ ಯಾವಾಗಲೂ ಭಕ್ತಿಯುಳ್ಳವನು. ಇತರರಿಂದ ಸಲ್ಲಬೇಕಾಗಿ ಇನ್ನೂ ಸಲ್ಲದಿರುವುದನ್ನು ಪದೆದುಕೊಳ್ಳುವ ಸಂತೋಷ ಈತನ ಮೂಲಕ ನನಗೆ ಉಂಟಾಗಲಿ."

ಈ ಶ್ಲೋಕಕ್ಕೆ ಅರ್ಥ ಹೇಳುವ ಸಂದರ್ಭದಲ್ಲಿ ತಮ್ಮ ರೈತನ ಸ್ವಭಾವವನ್ನೂ ಅವನ ಹುನ್ನರುಗಳನ್ನೂ ಶೇಷಾಚಾರ್ಯರು ವರ್ಣಿಸಿದ ರೀತಿಯಿಂದ ಮಹಾದೇವರಾಯರ ಮನಸ್ಸು ಸಹಾನುಭೂತಿಯುಳ್ಳದ್ದಾಯಿತು. ಕೂಡಲೆ ಅವರು ಹೆಬ್ಬಣಿ ಹೋಬಳಿಯ ಗುಮಾಸ್ತರಿಗೆ ಹೇಳಿಕಳುಹಿಸಿ, ಆತ ಬಂದೊಡನೆಯೇ- "ಯಾರು ಈ ಹೋಬಳಿಯ ಶೇಕದಾರರು? ಅವರನ್ನು ಈ ಹೊತ್ತು ಸಂಜೆಯೊಳಗಾಗಿ ಕರೆಸಿ ಆಚಾರ್ಯರ ಅಹವಾಲನ್ನು ಅವರಿಗೆ ತಿಳಿಸಿ, ನಾಳೆ ಸಂಜೆಯೊಳಗಾಗಿ ಆ ರೈತ ಆಚಾರ್ಯರಿಗೆ ಕೊಡಬೇಕಾದ ಬಾಕಿಯನ್ನು ಬೇಬಾಕಾಗಿ ಕೊಡುವಂತೆ ತಾಕೀತು ಮಾಡಿಸಿರಿ. ಇದು ಫೈಸಲಾಗಿದೆಯೆಂದು ನನಗೆ ನಾಳೆಯೇ ವರದಿಯಾಗಬೇಕು. ತಡವಾದರೆ ದಂಡಿಸಿಯೇವು" ಎಂದು ಕಟ್ಟಪ್ಪಣೆ ಮಾಡಿದರು. ಅದರಂತೆ ಕೆಲಸ ನಡೆದು ಶೇಷಾಚಾರ್ಯರಿಗೆ ಕಷ್ಟನಿವಾರಣೆಯಾಯಿತು.

ಅವರ ಜನ್ಮದಲ್ಲೆಲ್ಲ ಶೇಷಾಚಾರ್ಯರು ಇನ್ನೊಬ್ಬರ ಮೇಲೆ ಅಸಮಾಧಾನ ತೋರಿಸಿದ ಸಂದರ್ಭ ಇನ್ನೊಂದಿಲ್ಲ. ಅವರು ಭಾಗವತದಲ್ಲಿ ಸಂಪೂರ್ಣವಾಗಿ ಭಕ್ತಿಯಿಟ್ಟು ಭಗವಂತನನ್ನು ನಂಬಿಕೊಂಡಿದ್ದವರು. ಅವರು ಪದೇ ಹೇಳುತ್ತಿದ್ದ ಶ್ಲೋಕ ಇದು.

> ಕ್ಷೇಮಂ ವಿಧಾಸ್ಯತಿ ಸ ನೋ
> ಭಗವಾನನಂತಃ ।
> ತತ್ರಾಸ್ಮದೀಯ ವಿಮೃಶೇನ
> ಕಿಯಾನಿಹಾರ್ಥಃ

"ನಮಗೆ ಕ್ಷೇಮವನ್ನು ಉಂಟುಮಾಡುವವನು ಅನಂತನಾದ ಭಗವಂತ. ಹಾಗಿರುವಲ್ಲಿ ನಮ್ಮ ವಿಮರ್ಶನೆ ಆಲೋಚನೆಗಳಿಂದ ಏನು ಪ್ರಯೋಜನ?"

ಊರಿನಲ್ಲಿ ಯಾರ ಮನೆಯಲ್ಲಿ ರೋಗ ವಿಯೋಗ ಕಲಹ ಕಾರ್ಪಣ್ಯಾದಿ ಕಷ್ಟಗಳು ಬಂದರೂ ಅವರು ಶೇಷಾಚಾರ್ಯರ ಬಳಿಗೆ ಹೋಗಿ ಹಿತೋಕ್ತಿಯನ್ನು ಬೇಡುತ್ತಿದ್ದರು. ಆರ್ಚಾಯರ ಉಪದೇಶ ಈ ಶ್ಲೋಕದ ತಾತ್ಪರ್ಯವನ್ನು ತಿಳಿಸುವ ಕಥೆ ಉಪಾಖ್ಯಾನವಾಗಿರುತ್ತಿತ್ತು. ಆ ಉಪಕಥೆಯನ್ನು ಕೇಳಿದ ಬಳಿಕ ಆ ಜನ ಏನೋ ಒಂದು ಹೊಸ ಧೈರ್ಯದಿಂದ, ಹಿಂದಿರುಗುತ್ತಿದ್ದರು.

# ೧೨

# ಭಾಷ್ಯಂ ದೇವಡಿ

ನನ್ನ ವಿಶ್ವವಿದ್ಯಾನಿಲಯಗಳ ಪೈಕಿ ಒಂದು ಬಳೇಪೇಟೆಯ ಶ್ರೀ ನರಸಿಂಹಸ್ವಾಮಿ ಗುಡಿಯ ಮುಂದೆ ದಕ್ಷಿಣಾಭಿಮುಖವಾಗಿರುವ ಮೂಲೆಯ ಮನೆಯಲ್ಲಿತ್ತು. ಅದನ್ನು ಕನ್ನಡ ವರ್ತಮಾನ ಪತ್ರಿಕೆಯ ಜನ್ಮಗೃಹವೆನ್ನಬಹುದು. ಮೈಸೂರು ಅಮೆರಿಕವಾಗಿದ್ದಿದ್ದರೆ ಆ ಮನೆಯನ್ನು ಯಾರೋ ಧನಾಢ್ಯರು ಕೊಂಡುಕೊಂಡು, ಅದರಲ್ಲೊಂದು ಪುಸ್ತಕ ಭಂಡಾರವನ್ನೋ ಕಲಾವಸ್ತು ಸಂಗ್ರಹವನ್ನೋ ಇರಿಸಿ, ಸರಕಾರದ ಅನುಮತಿಯೊಡನೆ ಅದನ್ನು ಮಹಾಜನರ ಉಪಯೋಗಕ್ಕೆ ಬಿಟ್ಟುಕೊಟ್ಟು, ಆ ಮೂಲಕ ಮಹನೀಯರಾದ ಭಾಷ್ಯಂ ತಿರುಮಲಾಚಾರ್ಯರ ಹೆಸರನ್ನು ಶಾಶ್ವತಗೊಳಿಸುತ್ತಿದ್ದರು. ಆ ದೇಶ ಭಾಷಾ ಸೇವಕರದು ಆ ಮನೆ.

## ತಿರುಮಲಾಚಾರ್ಯರು

ಇದುವರೆಗೆ ತಿಳಿದು ಬಂದಿರುವ ಮಟ್ಟಿಗೆ 'ಮೈಸೂರು ವೃತ್ತಾಂತ ಬೋಧಿನೀ' ಎಂಬುದು ಮೈಸೂರಿನ ಮೊದಲನೆಯ ಕನ್ನಡ ಪತ್ರಿಕೆ. ವಿದ್ವಾನ್ ಭಾಷ್ಯಂ ಭಾಷ್ಯಾಚಾರ್ಯರು ಅದನ್ನು ೧೮೫೯ರ ಜೂನ್ ತಿಂಗಳಲ್ಲಿ ಹೊರಡಿಸಿದರು. ಅದು ಪ್ರತಿ ಶನಿವಾರ ಪ್ರಕಟವಾಗುತ್ತಿತ್ತು; ಮೈಸೂರು ಮಹಾರಾಜರವರ ಪೋಷಣೆಗೆ ಒಳಪಟ್ಟಿತ್ತು. ನಾಲ್ಕು ವರ್ಷ ಕಾಲ, ಎಂದರೆ ೧೮೬೩ರ ವರೆಗೆ ಅದು ನಡೆಯಿತು. ಭಾಷ್ಯಂ ಭಾಷ್ಯಾಚಾರ್ಯರು ಸಂಸ್ಕೃತ ವಿದ್ವಾಂಸರು. ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದದ್ದರಿಂದ ಅವರಿಗೆ ಇಂಗ್ಲಿಷೂ ಬರುತ್ತಿತ್ತು.

ಇವರ ತಂದೆ ವಿದ್ವಾನ್ ಭಾಷ್ಯಂ ತಿರುಮಲಾಚಾರ್ಯರು. ಇವರನ್ನು ಶ್ರೀಶೈಲ ದೀಕ್ಷಿತರೆಂದೂ ಕರೆಯುತ್ತಿದ್ದರು. 'ಶ್ರೀಶೈಲ' ಎಂಬುದು ಪ್ರಾಯಶಃ 'ತಿರುಮಲೈ' ಎಂಬುದರ ಸಂಸ್ಕೃತ ರೂಪ. ಭಾಷ್ಯಂ ಮನೆತನದವರು ಮೊದಲಿಗೆ ಮದರಾಸು ಪ್ರಾಂತದ ಚೆಂಗಲ್ಪಟ್ ಜಿಲ್ಲೆಯ ಪೊನ್ನೇರಿ ತಾಲ್ಲೂಕಿನ ಅಗರಂ ಗ್ರಾಮದವರು; ಶ್ರೀವೈಷ್ಣವರು. ಭಾಷ್ಯಂ ಮನೆತನದವರು ಶ್ರೀಭಾಷ್ಯ ವಾಖ್ಯಾನದಲ್ಲಿ ನಿಷ್ಣಾತರು.

ಭಾಷ್ಯಂ ತಿರುಮಲಾಚಾರ್ಯರು ‘ಕರ್ಣಾಟಕ ಪ್ರಕಾಶಿಕಾ’ ಪತ್ರಿಕೆಯ ಸಂಸ್ಥಾಪಕರು. ಆ ಪತ್ರಿಕೆಯು ೧೮೬೫ರ ಜುಲೈ ತಿಂಗಳಲ್ಲಿ ಪ್ರಾರಂಭವಾಯಿತು. ಅದು ವಾರದಲ್ಲಿ ಎರಡು ಬಾರಿ ಪ್ರಕಟವಾಗುತ್ತಿತ್ತು. ಅದನ್ನು ತಂದೆ ಮಗ ಇಬ್ಬರೂ ಸೇರಿ-(ತಂದೆ ತಿರುಮಲಾಚಾರ್ಯರು ಮಾಲೀಕರಾಗಿಯೂ, ಮಕ್ಕಳು ಭಾಷ್ಯಾಚಾರ್ಯರು ಸಂಪಾದಕರಾಗಿಯೂ ಇದ್ದುಕೊಂಡು)-ಸುಮಾರು ಒಂದು ವರ್ಷಕಾಲ, ೧೮೬೬ರ ಏಪ್ರಿಲ್‌ವರೆಗೆ ನಡೆಸಿದರು, ೧೮೬೬ರ ಏಪ್ರಿಲ್ ತಿಂಗಳಲ್ಲಿ ಭಾಷ್ಯಾಚಾರ್ಯರು ಮೈಸೂರು ಗೆಜೆಟ್ಟಿನ ಕನ್ನಡ ಭಾಷಾಂತರಕಾರರಾಗಿ ಸರಕಾರೀ ಉದ್ಯೋಗಕ್ಕೆ ಸೇರಿದರು. ಭಾಷ್ಯಾಚಾರ್ಯರು ಮೃತರಾಗುವವರೆಗೂ ಸರಕಾರದ ಉದ್ಯೋಗದಲ್ಲಿದ್ದರು. ಅವರು ತಮ್ಮ ೫೧ ನೆಯ ವಯಸ್ಸಿನಲ್ಲಿ ೯-೧೧-೧೮೮೪ರಲ್ಲಿ ಮೃತರಾದರು. ತಿರುಮಲಾಚಾರ್ಯರು 'ಕರ್ನಾಟಕ ಪ್ರಕಾಶಿಕೆ'ಯನ್ನು ಸುಮಾರು ಮೂರು ವರ್ಷಕಾಲ ನಡೆಸಿದರು. ೧೮೬೮ರಲ್ಲಿ ಅದು ನಿಂತುಹೋಯಿತು. ಐದು ವರ್ಷಗಳ ಅನಂತರ ಅದು ಪುನಃ ೨೯-೧೧-೧೮೭೩ರಲ್ಲಿ ಪ್ರತಿ ಸೋಮವಾರವೂ ಪ್ರಕಟವಾಗುವ ಇಂಗ್ಲೀಷ್ ಕನ್ನಡ ಪತ್ರಿಕೆಯಾಗಿ ಕಾಣಿಸಿಕೊಂಡು ೩೧-೧೦-೧೮೯೮ರ ವರೆಗೆ ಅವಿಚ್ಛಿನ್ನವಾಗಿ ನಡೆಯಿತು.

ಮಗನು ಸರಕಾರೀ ಉದ್ಯೋಗಕ್ಕೆ ಸೇರಿದ ಮೇಲೆ (ಏಪ್ರಿಲ್ ೧೮೬೬) ತಂದೆ ತಿರುಮಲಾಚಾರ್ಯರೇ ಪತ್ರಿಕೆಯನ್ನು ತಾವು ಸಾಯುವವರೆಗೆ ಎಂದರೆ, ೨೩-೨-೧೮೭೭ರ ವರೆಗೆ, ನಡಸಿಕೊಂಡುಬಂದರು. ತದನಂತರ ಭಾಷ್ಯಾಚಾರ್ಯರ ಮಕ್ಕಳಾದ ಟಿ.ವಿ.ವೆಂಕಟಾಚಾರ್ಯರೂ, ಟಿ.ಸಿ. ಶ್ರೀನಿವಾಸಾಚಾರ್ಯರೂ ಪತ್ರಿಕೆಯನ್ನು ನಡಸಿದರು. ಟಿ.ಸಿ.ಶ್ರೀನಿವಾಸಾಚಾರ್ಯರು ಪತ್ರಿಕೆಯ ಮಾಲೀಕರಾಗಿದ್ದರು.

ಮೈಸೂರು ಸಂಸ್ಥಾನದ ಸ್ವತಂತ್ರ ಕನ್ನಡ ವೃತ್ತಪತ್ರಿಕೆಗಳಲ್ಲಿ ಬಹುಶಃ ‘ಕರ್ಣಾಟಕದ ಪ್ರಕಾಶಿಕೆ’ ಯೇ ಅತ್ಯಂತ ಪುರಾತನವಾದದ್ದೆಂದು ತೋರುತ್ತದೆ. ಅದು ಪ್ರಥಮವಾದದ್ದು ಮಾತ್ರವೇ ಅಲ್ಲದೆ ಪ್ರಸಿದ್ಧವಾದದ್ದೂ ಆಗಿತ್ತು. ೧೮೮೦ ರಿಂದ ಈಚಿನ ಎರಡು ಮೂರು ವರ್ಷಗಳ ಸಂಚಿಕೆಗಳನ್ನು ನಾನು ನೋಡಿದ್ದೇನೆ. ಅದರಲ್ಲಿ ಕನ್ನಡ ಇಂಗ್ಲೀಷ್ ಎರಡು ಭಾಷೆಗಳಲ್ಲಿಯೂ ಲೇಖನಗಳು ಬರುತ್ತಿದ್ದವು. ಆ ಕಾಲದಲ್ಲಿ ಈ ಸಂಸ್ಥಾನದಲ್ಲಿ ಮೈಸೂರು ಪಾರ್ಟಿ, ಮದರಾಸು ಪಾರ್ಟಿ-ಎಂದು ಎರಡು ರಾಜಕೀಯ ಕಕ್ಷಿಗಳು ಹುಟ್ಟಿಕೊಂಡಿದ್ದವು. ‘ಕರ್ಣಾಟಕ ಪ್ರಕಾಶಿಕೆ’ ಮೈಸೂರು ಪಾರ್ಟಿಗೆ ಸೇರಿದ್ದು. ‘ಬ್ಯಾಂಗಳೂರ್ ಸ್ಪೆಕ್ಟೇಟರ್’ ಎಂಬುದು ಮದರಾಸು ಪಾರ್ಟಿಯದು. ‘ಕರ್ಣಾಟಕ ಪ್ರಕಾಶಿಕೆ’ ಯ ಇಂಗ್ಲೀಷ್ ಲೇಖನಗಳನ್ನು ಸರಕಾರದ ಅಧಿಕಾರದಲ್ಲಿದ್ದ ಕೆಲವರೂ ಅವರ ಆಪ್ತ ಸ್ನೇಹಿತರಾದ ಕೆಲಮಂದಿ ವಕೀಲರು

ಮೊದಲಾದವರೂ ಬರೆಯುತ್ತಿದ್ದರೆಂದು ವದಂತಿ. ಅಂಥವರ ಪೈಕಿ ವಿ.ಎನ್.(ಮೀಶೆ) ನರಸಿಂಹಯ್ಯಂಗಾರ್ಯರೂ ಒಬ್ಬರಿದ್ದಿರಬೇಕೆಂದು ಕೇಳಿದ್ದೇನೆ. ೧೮೮೦ರ ಸುಮಾರಿನಲ್ಲಿ ಈ ಪತ್ರಿಕೆಯ ಮೇಲೆ ಆಗ ತುಮಕೂರು ಡೆಪ್ಯುಟಿ ಕಮಿಷನರಾಗಿದ್ದ ಶೇಷಾದ್ರಿ ಅಯ್ಯರವರು ಮಾನನಷ್ಟದ ಮೊಖದ್ದಮೆಯನ್ನು ಹೂಡಿದ್ದರು. ಆ ವಿವಾದದಿಂದ ಪತ್ರಿಕೆ ನಷ್ಟಪಟ್ಟಿತೆಂದು ಕೇಳಿದ್ದೇನೆ. 'ಕರ್ಣಾಟಕ ಪ್ರಕಾಶಿಕೆ' ಧೈರ್ಯದಿಂದ ನಡೆದ ಪತ್ರಿಕೆ. ಧೈರ್ಯದೊಡನೆ ಘನತೆಯೂ ಇತ್ತು. ಅದರಲ್ಲಿ ತಂತೀ ವರ್ತಮಾನ ಸಂಗ್ರಹ, ಇತರ ವೃತ್ತಾಂತ, ಗೆಜೆಟ್ಟಿನ ಸಾರಾಂಶ, 'ಒಳದೇಶ ಮತ್ತು ತಾಲ್ಲೂಕ್ ಜಾತ್ ವೃತ್ತಾಂತಗಳು', 'ನೈಮಿತ್ತಿಕ ವಿಷಯನ್ಯಾಸವು' (Occasional Notes), ಸಂಪಾದಕೀಯ ಲೇಖನಗಳು ಇವು ಸಾಮಾನ್ಯವಾಗಿರುತ್ತಿದ್ದವು. ಪತ್ರಿಕೆ ನೋಟಕ್ಕೆ ಅಚ್ಚುಕಟ್ಟಾಗಿತ್ತು. ಬರವಣಿಗೆಯ ಶೈಲಿಯಾದರೋ ನಾದ ಗುಂಫನದಿಂದಲೂ ವರ್ಣವಿನ್ಯಾಸದಿಂದಲೂ ಕೂಡಿ ಗಂಭೀರವಾಗಿದ್ದು ನಡುಗನ್ನಡದ ಚಂಪೂ ಗದ್ಯವನ್ನು ಹೋಲುತ್ತಿತ್ತು. ಆಗಿನ ಕಾಲದವರ ಅಭಿರುಚಿಗೆ ತಕ್ಕದ್ದಾಗಿತ್ತು. ಮಾದರಿಗಾಗಿ ೧೮೮೦ರ ಸೆಪ್ಟೆಂಬರ್ ೨೭ರ ಸಂಚಿಕೆಯಿಂದ ಒಂದೆರಡು ವಾಕ್ಯಗಳನ್ನು ಉದಾಹರಿಸುತ್ತೇನೆ: ಮಹಾರಾಜರವರು ಇದುವರೆಗೆ ಈವೂರಲ್ಲಿ ಬಿಜ ಮಾಡಿ ಇದ್ದ ಅಂಶವನ್ನು ಕುರಿತು:

"ಎಲ್ಲ ವಿಷಯಗಳಲ್ಲಿಯೂ ನಾವು ದುರಾಕ್ಷೇಪ ಮಾಡತಕ್ಕವರೆಂಬ ಅಪಪ್ರಥೆಗೆ ವಳಗಾಗುವ ಅಪೇಕ್ಷೆ ನಮಗೆ ಯೆಂದಿಗೂ ಯಿಲ್ಲವು. ಅಂತಾ ಅಪಪ್ರಥೆ ಈ ದೇಶದಲ್ಲಿ ನಮಗೇನಾದರೂ ಯಿರುವುದಾದರೆ, ಅದು ಸರ್ವಾತ್ಮನಾ, ಸ್ವಾರ್ಥಪರರಾದ ನಮ್ಮ ಅಹಿತರು ಹೇಳುವ ಮಾತುಗಳೆಂದು ಸರ್ವರೂ ತಿಳಿಯಬಹುದು. ಮುಖ್ಯವಾಗಿ, ವರ್ಧಿಷ್ಣುಗಳಾದ ಶ್ರೀಮನ್ಮಹಾರಾಜರವರ ವಿಷಯದಲ್ಲಿ ಮೊದಲಿನಿಂದ ನಾವು ತಿಳಿಸುವ ಅಂಶವೆಲ್ಲ ಅವರ ಶ್ರೇಯಸ್ಸನ್ನು ಕುರಿತದ್ದಾಗಿಯೂ ಅವರ ಪುರೋವೃದ್ಧಿಯನ್ನು ಉದ್ದೇಶಿಸಿದ್ದಾಗಿಯೂ ಅವರ ವೈಭವ ಪ್ರಾಭವಗಳನ್ನು ಅವಲಂಬಿಸಿದ್ದಾಗಿಯೂ ಯಿರುವದೆಂದು ನಾವು ಕರಣತ್ರಯ ಶುದ್ಧಿಯಿಂದ ಹೇಳುತ್ತೇವೆ...(ಮಹಾರಾಜರವರು) ಯೂರೋಪಿಯನ್‌ಗಳನ್ನು ಬಹುವಾಗಿಯೂ ಸ್ವದೇಶೀಯರನ್ನು ಸಕೃತ್ತಾಗಿಯೂ ನೋಡುತ್ತಿದ್ದರು...ಇಂತಾ ಸಂದರ್ಭದೊಳು ತಮ್ಮಲ್ಲಿ ವಾಲ್ಲಭ್ಯವುಂಟಾದವರು ಕೆಲವರು ವಿನಾ ಮಿಕ್ಕ ತಮ್ಮ ಪ್ರಜೆಗಳ ಸಂಪರ್ಕವೇ ಆತ್ಯಂತಿಕವಾಗಿ ತಪ್ಪಿಸಲ್ಪಟ್ಟಿತು. ಇವರ ಗಾರ್ಡಿಯನ್‌ರವರು ಮಹಾರಾಜರನ್ನು ಮುಖ್ಯ ಮುಖ್ಯರಾದ ಯಿಲ್ಲಿನ ಯೂರೋಪಿಯನ್‌ರೊಳು ವಿಶೇಷವಾಗಿ ಬಳಕೆಗೊಳಿಸುವುದಕ್ಕೆ ಸರ್ವ ಪ್ರಯತ್ನವನ್ನು ಮಾಡಿದರು...ದರ್ಬಾರ್‌ಗಳು ವಗ್ಯೆರೆ ಪ್ರಬಲ ಸಂದರ್ಭಗಳಲ್ಲಿ ಮಹಾರಾಜರು ಕೆಲವು ಮಾತುಗಳನ್ನು ಸ್ವಭಾಷೆಯಲ್ಲಾಗಲಿ ಇಂಗ್ಲೀಷ್‌ನೊಳಗಾಗಲಿ ನುಡಿಯುವರಾದರೆ ಬಹಳ ಶ್ಲಾಘ್ಯವಾಗಿರುವದು. ಅಷ್ಟಕ್ಕೆ ಅವಕಾಶವಿಲ್ಲದೆ ಅವರು ಮೌನವಾಗಿದ್ದದ್ದರಿಂದ

ಅವರಿಗೆ ವಿದ್ಯಾಭ್ಯಾಸಮಾಡಿದ ಕ್ರಮದಲ್ಲಿವುಂಟಾದ ಲೋಪವೇ ಕಾರಣವೆಂದು ಯೆಣಿಸಬೇಕಾಯಿತು. ಮೊದಲಿಂದ ಯುಕ್ತವಾಗಿ ವಿದ್ಯಾಭ್ಯಾಸ ನಡೆದಿದ್ದರೆ ಅವರು ತಮ್ಮ ಹೃದಯಸ್ಥವಾದ ಭಾವವನ್ನು ಕೆಲವು ಶಬ್ದಗಳಿಂದ ತಿಳಿಸುವದಕ್ಕೆ ಶಕ್ತರಾಗದೆ ಇರಲಾರರು. ಮುಖ್ಯವಾಗಿ ರಾಜ್ಯಾಧಿಪತ್ಯ ಮಾಡ ತಕ್ಕವರಿಗೆ ಮೊದಲನೆಯದಾಗಿಯೂ ಅತ್ಯಂತ ಆವಶ್ಯಕವಾಗಿಯೂ ಇರುವ ವಿಷಯ ಅಧಿಕಾರಿಗಳಿಂದ ಉಪೇಕ್ಷಿಸಲ್ಪಟ್ಟಿತಲ್ಲಾ ಯೆಂದು ಬಹಳ ಚಿಂತಿಸುತ್ತೇವೆ. ಈ ವಿಷಯ ಬಾರ್ ಬಾರ್ ಸರ್ವ ವೃತ್ತಾಂತ ಪತ್ರಿಕಾಕಾರರಿಂದಲೂ ಚರ್ಚಿಸಲ್ಪಟ್ಟಾಗ್ಯೂ ಅದಕ್ಕೆ ಅವಧಾನ ಕೊಡದೆಯೂ ತಮ್ಮ ಶೀಕ್ಷಾಕ್ರಮವನ್ನು ತಿದ್ದಿಕೊಳ್ಳದೆಯೂ ಇದ್ದ ಅಧಿಕಾರಿಗಳ ಔದಾಸೀನ್ಯಕ್ಕೋಸ್ಕರ ವಿಷಾದಿಸುತ್ತೇವೆ."

ಭಾಷ್ಯಂ ತಿರುಮಲಾಚಾರ್ಯರವರು ಗಣ್ಯರಾದ ಸಂಸ್ಕೃತ ಪಂಡಿತರು. ಆ ಕಾಲದ ಎಲ್ಲ ವಿದ್ವದ್ಗೋಷ್ಠಿಗಳಲ್ಲಿಯೂ ಅವರು ಮನ್ನಣೆ ಪಡೆದಿದ್ದವರು. ಆ ಕಾಲದ ಪ್ರಮುಖರಲ್ಲಿ ಪ್ರಭಾವಶಾಲಿಗಳಾಗಿದ್ದವರು. ಅವರು ಅನೇಕ ಪುಣ್ಯಕಾರ್ಯಗಳನ್ನು ನಡೆಸಿದರಲ್ಲದೆ ಒಂದು ಯಾಗವನ್ನು ಸಹ ಮಾಡಿದರು. ಒಳ್ಳೆ ಕೆಲಸಗಳಿಗೆಲ್ಲ ಇವರ ಒತ್ತಾಸೆಯಿತ್ತು. ಬೆಂಗಳೂರಲ್ಲಿ ಮೊದಲನೆಯ ಸಂಸ್ಕೃತ ಪಾಠಶಾಲೆಯ ಸ್ಥಾಪನೆ ಇವರಿಂದ ಇವರ ಮನೆಯಲ್ಲಿ ನಡೆಯಿತು. ಆಮೇಲೆ ಅದು ತುಳಸೀತೋಟದ ದೇವಸ್ಥಾನಕ್ಕೆ ವರ್ಗವಾಯಿತು. ಸ್ವಲ್ಪ ಕಾಲಾನಂತರ ಮುನಿಸಿಪಲ್ ಉಪವನದ ಹತ್ತಿರದ ತೋಟದಲ್ಲಿ ಶಾಲೆ ನಡೆದು ಕಡೆಗೆ ಸರಕಾರದ ವಶವಾಗಿ ಶ್ರೀ ಜಯಚಾಮರಾಜೇಂದ್ರ ಸಂಸ್ಕೃತ ಪಾಠಶಾಲಾ ಎಂಬ ಹೆಸರನ್ನು ತಳೆದು ಕೋಟೆಯಲ್ಲಿರುವ ಟಿಪ್ಪುಸುಲ್ತಾನ್ ಅರಮನೆಯ ಮುಂಭಾಗದ ಕಟ್ಟಡದಲ್ಲಿ ನಡೆಯುತ್ತಿತ್ತು. ಈಗ ಅಲ್ಲಿ ಹೆರಿಗೆ ಆಸ್ಪತ್ರೆಯ ಒಂದು ಭಾಗವಿದೆ. ಹೀಗೆ ತಿರುಮಲಾಚಾರ್ಯರು ಸಾರ್ವಜನಿಕ ವಿಚಾರ ಚಿಂತನ ಮಾಡತಕ್ಕವರಾಗಿ ಶ್ರೀಮುಮ್ಮಡಿ ಕೃಷ್ಣರಾಜ ಒಡೆಯರವರ ಮೆಚ್ಚಿಕೆಗೂ ಪಾತ್ರರಾಗಿದ್ದರು. ಆದರೆ ಅವರ ವಿಷಯವನ್ನು ನಾನು ಕೇಳಿರುವವನೇ ಹೊರತು ಅವರನ್ನು ಕಂಡವನಲ್ಲ. ಅವರ ತರುವಾಯ, ಹಿಂದೆಯೇ ತಿಳಿಸಿದಂತೆ, ಟಿ.ಬಿ. ವೆಂಕಟಾಚಾರ್ಯರೂ ಟಿ.ಸಿ.ಶ್ರೀನಿವಾಸಾಚಾರ್ಯರೆಂಬವರೂ 'ಕರ್ಣಾಟಕ ಪ್ರಕಾಶಿಕೆ' ಯನ್ನು ನಡೆಸುತ್ತಿದ್ದರು. ಇವರ ವಿಷಯ ನನಗೇನೂ ತಿಳಿದು ಬಂದಿಲ್ಲ. ಒಟ್ಟಿನಲ್ಲಿ, ಸಂಸ್ಥಾನದ ಚರಿತ್ರೆಯಲ್ಲಿ, ಭಾಷ್ಯಂ ಮನೆತನಕ್ಕೆ ಒಂದು ಗೌರವಾರ್ಹ ಸ್ಥಾನವಿದೆಯೆಂಬುದರಲ್ಲಿ ಸಂದೇಹವಿಲ್ಲ.

# ತಕ್ಕ ಮೊಮ್ಮಗ-ಭಾಷ್ಯಂ ರಾಮಾಚಾರ್ಯರು

ಭಾಷ್ಯಂ ತಿರುಮಲಾಚಾರ್ಯರವರ ಮೊಮ್ಮಕ್ಕಳಲ್ಲಿ ಹಿರಿಯರು ಭಾಷ್ಯಂ ವೆಂಕಟಾಚಾರ್ಯರು. ಇವರು ಸಬ್ ರಿಜಿಸ್ಟ್ರಾರ್ ಕೆಲಸದಲ್ಲಿದ್ದರು. ಕಿರಿಯರು ಭಾಷ್ಯಂ ರಾಮಾಚಾರ್ಯರು. ಈ ರಾಮಾಚಾರ್ಯರೇ ನನ್ನ ವಿಲಕ್ಷಣ ಯೂನಿವರ್ಸಿಟಿಯ ಚಾಲಕರು.

ಭಾಷ್ಯಂ ರಾಮಾಚಾರ್ಯರ ಪರಿಚಯ ನನಗೆ ಆದದ್ದು ೧೯೦೯-೧೦ರ ಸುಮಾರಿನಲ್ಲಿ. ಆಗ ಕೊಟ್ಟಿಗೆ ಎಂಬ ಪ್ರದೇಶದಲ್ಲಿ (ಚಿಕ್ಕಪೇಟೆ-ಅಕ್ಕಿಪೇಟೆಗಳು ಸೇರುವ ಕಡೆ) ಮೂಲೆಯ ಮಹಡಿ ಕಟ್ಟಡದಲ್ಲಿ 'ಐರಿಷ್ ಪ್ರೆಸ್' ಎಂಬ ಮುದ್ರಾಕ್ಷರ ಶಾಲೆಯಿತ್ತು. ಅದರ ಆಗಿನ ಮಾಲೀಕರಲ್ಲಿ ಒಬ್ಬರು ಭಾಷ್ಯಂ ರಾಮಾಚಾರ್ಯರ ಆಪ್ತ ಮಿತ್ರರಾಗಿದ್ದರು. ರಾಮಾಚಾರ್ಯರಿಗೆ ವಂಶಾನುಪೂರ್ವಿಯಿಂದ ಮುದ್ರಣ ಪ್ರಕಟನ ಕಾರ್ಯಗಳ ವಾಸನೆ ಬಂದಿದ್ದರಿಂದ "ಐರಿಷ್ ಮುದ್ರಾಕ್ಷರ ಶಾಲೆ" ಅವರನ್ನು ಆಕರ್ಷಿಸುತ್ತಿತ್ತು. ಐರಿಷ್ ಮುದ್ರಾಕ್ಷರ ಶಾಲೆಯಲ್ಲಿ ಆಗ (೧೯೦೯-೧೦) 'ಮೈಸೂರ್ ಟೈಮ್ಸ್' ಎಂಬ ಇಂಗ್ಲಿಷಿನ ವಾರಾರ್ಧ ಪತ್ರಿಕೆ ಅಚ್ಚಾಗುತ್ತಿತ್ತು. ನಾನು ಆ ಪತ್ರಿಕೆಯ ಸಹಾಯ ಸಂಪಾದಕನಾಗಿ ಅಲ್ಲಿದ್ದದ್ದರಿಂದ ರಾಮಾಚಾರ್ಯರಿಗೂ ನನಗೂ ಪರಿಚಯಕ್ಕೆ ಅವಕಾಶವಾಯಿತು.

ಭಾಷ್ಯಂ ರಾಮಾಚಾರ್ಯರ ವಿಷಯದಲ್ಲಿ ಎಲ್ಲರೂ ಗೌರವದಿಂದ ನಡೆದುಕೊಳ್ಳುತ್ತಿದ್ದದ್ದು ಮೊದಲು ನನ್ನ ಮನಸ್ಸಿನ ಮೇಲೆ ಪರಿಣಾಮ ಮಾಡಿದ ಸಂಗತಿ. ಅವರು ಅಲಹಾಬಾದ್ ವಿಶ್ವವಿದ್ಯಾನಿಲಯದಲ್ಲಿ ಎಂ.ಎ.ಪಟ್ಟ ಪಡೆದಿದ್ದವರು; ಬಹುಶ್ರುತರಾದ ಸಂಸ್ಕೃತ ವಿದ್ವಾಂಸರು; ಸಂಪ್ರದಾಯನಿಷ್ಠರು; ಒಳಗೂ ಹೊರಗೂ ಪರಿಶುದ್ಧರು. ಅವರ ಮಾತಿನಲ್ಲಿ ಒಂದೊಂದು ಬಾರಿ ಸ್ವಲ್ಪ ಹುಳಿ ಖಾರ ಇರುತ್ತಿತ್ತು. ಅದಕ್ಕೆ ಕಾರಣ ಲೋಕದಲ್ಲಿ ಅವರು ಕಂಡಿದ್ದ ಅಪನೀತಿಗಳಿಂದ ಅವರ ಮನಸ್ಸಿಗೆ ಆಗಿದ್ದ ಬೇಸರ. ಆದರೆ ಆ ಹುಳಿ ಘಾಟು ಉತ್ತರಕ್ಷಣದಲ್ಲಿಯೇ ಒಂದು ಲಘು ಹಾಸ್ಯದಲ್ಲಿ ತೇಲಿ ಹೋಗುತ್ತಿತ್ತು.

ರಾಮಾಚಾರ್ಯರಿಗೆ ತಮ್ಮ ಪೂರ್ವಿಕರು ಪ್ರಕಟಿಸಿದ್ದ ಕೆಲವು ಗ್ರಂಥಗಳ ಸ್ವಾಮ್ಯ ಬಂದಿತ್ತು. ಆ ಗ್ರಂಥಗಳಲ್ಲಿ ಮುಖ್ಯವಾದವು 'ಸಂಕ್ಷೇಪ ರಾಮಾಯಣ', 'ಶಿವಾನಂದ ಲಹರಿ', 'ಶುಕಸಪ್ತತಿ ಕಥೆಗಳು' -ಇಷ್ಟು ನನಗೆ ಈಗ ಜ್ಞಾಪಕವಿದೆ. ಈ ಗ್ರಂಥಗಳನ್ನು ಪರಿಶೋಧಿಸಿ ಒಳ್ಳೆಯ ಆಕಾರದಲ್ಲಿ ಪ್ರಕಟಿಸಬೇಕೆಂದು ಅವರು ಪ್ರಯತ್ನ ಮಾಡುತ್ತಿದ್ದರು.

ರಾಮಾಚಾರ್ಯರಿಗೆ ಸರಕಾರದ ಸೆಕ್ರೆಟೇರಿಯೆಟ್‌ನಲ್ಲಿ ಉದ್ಯೋಗವಿತ್ತು. ಉದ್ಯೋಗದ ವೇಳೆ ಹೊರತು ಮಿಕ್ಕ ಕಾಲವನ್ನು ಅವರು ಗ್ರಂಥವ್ಯಾಸಂಗದಲ್ಲಿಯೂ ಆಹ್ನಿಕದಲ್ಲಿಯೂ ಮಿತ್ರ ಸಂಭಾಷಣೆಯಲ್ಲಿಯೂ ಕಳೆಯುತ್ತಿದ್ದರು.

ಸಾಮಾನ್ಯವಾಗಿ ಪ್ರತಿದಿನವೂ ಸಂಜೆ ಅವರ ಮನೆಯಲ್ಲಿ ಒಂದು ಗೋಷ್ಠಿ ಸೇರುತ್ತಿತ್ತು. ನಾನು ಆಗಾಗ ಅದರಲ್ಲಿ ಇರುತ್ತಿದ್ದೆ. ಆ ಗೋಷ್ಠಿಯ ಮುಖ್ಯ ಸದಸ್ಯರು ಶ್ರೀಮಾನ್ ಜಿ.ಜಿ.ನರಸಿಂಹಾಚಾರ್ಯರು, ಅವರ ತಮ್ಮಂದಿರು ಶ್ರೀಮಾನ್ ಆರ್. ಎ. ಕೃಷ್ಣಮಾಚಾರ್ಯರು (ಇವರಿಬ್ಬರೂ ಶ್ರೀ ವಿವೇಕಾನಂದಸ್ವಾಮಿಗಳವರ ಅವಿಚ್ಛಿನ್ನ ಭಕ್ತರು), ಶ್ರೀಮಾನ್ ಪಂಡಿತ ಆಸೂರೀ ಆನಂದಾಳ್ವಾರ್ ಅವರು (ಇವರು ಮುಂದೆ ಯದುಗಿರಿ ಯತಿರಾಜ ಮಠದ ಪೀಠಾಧಿಪತಿಗಳಾಗಿದ್ದವರು), ಎಸ್.ಜಿ.ನರಸಿಂಹಾಚಾರ್ಯರ ಮಗ ರಂಗಸ್ವಾಮಿ ಅವರು, ಅರಮನೆ ಧರ್ಮಾಧಿಕಾರಿ ಧರ್ಮಪ್ರವರ್ತಕ ಶ್ರೀ ನವೀನಂ ರಾಮಾನುಜಾಚಾರ್ಯರು, ಫಾರೆಸ್ಟ್ ಕನ್ಸರ್ವೇಟರು ಎಚ್. ಶ್ರೀನಿವಾಸರಾಯರು, ಆಗಾಗ ಅಡ್ವೊಕೇಟ್ ಸಿ.ಶೇಷಾಚಾರ್ಯರವರು, ಮತ್ತು ಇತರರು. ಇವರೆಲ್ಲ ವೇದಾಂತ ಸಾಹಿತ್ಯ ವಿಚಾರಗಳನ್ನೂ ಪ್ರಪಂಚದ ರೀತಿ ನೀತಿಗಳನ್ನೂ ಕುರಿತು ಚರ್ಚಿಸುತ್ತಿದ್ದರು. ಇವರಲ್ಲಿ ಕೆಲವರ ವಿಷಯವನ್ನು ತಿಳಿದ ಮಟ್ಟಿಗೆ ಹೇಳುತ್ತೇನೆ.

## ಜಿ.ಜಿ

ಜಿ.ಜಿ.ನರಸಿಂಹಾಚಾರ್ಯರ ಪ್ರಸ್ತಾವವನ್ನು ಹಿಂದೆ ಮಾಡಿದ್ದೇನೆ (ಪುಟ ೪೩). ಶ್ರೀಸ್ವಾಮಿ ವಿವೇಕಾನಂದರ ಪ್ರಭಾವವನ್ನು ಸ್ವಾನುಭವದಿಂದ ಕಂಡುಕೊಂಡಿದ್ದ ಪುಣ್ಯ ಅವರದು. ಸ್ವಾಮಿ ವಿವೇಕಾನಂದರ ಅಭಿಮಾನಕ್ಕೆ ಪಾತ್ರರಾಗಿದ್ದವರೊಬ್ಬರು ಅಳಸಿಂಗ ಪೆರುಮಾಳ್ ಎಂಬವರು. ಇವರು ಮದರಾಸಿನ ಪಚ್ಚಿಯಪ್ಪ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದರು. ಅವರು ವಿದ್ವಾಂಸರು, ದೇಶಾಭಿಮಾನಿಗಳು, ಸಾತ್ತ್ವಿಕರು. ಅವರು ಕೆಲ ಮಂದಿ ಸ್ನೇಹಿತರ ಸಹಕಾರದಿಂದ, ವಿವೇಕಾನಂದರವರ ಪ್ರೇರಣೆಯಂತೆ, 'ಬ್ರಹ್ಮವಾದಿನ್' ಎಂಬ ಇಂಗ್ಲೀಷ್ ಮಾಸಪತ್ರಿಕೆಯನ್ನು ನಡಸುತ್ತಿದ್ದರು. ಅದು ಬಹು ಪ್ರೌಢವಾದ ಪತ್ರಿಕೆ. ಅದರಲ್ಲಿ ಬರೆಯುತ್ತಿದ್ದವರು ಮಹಾ ವಿದ್ವಾಂಸರು. ಗಹನವಾದ ವೇದ ವೇದಾಂತ ತತ್ತ್ವಗಳನ್ನು ಅವರು ಚರ್ಚಿಸಿ ವಿವರಿಸುತ್ತಿದ್ದರು. ಇಂಥ ದೊಡ್ಡ ಕೆಲಸವನ್ನು ನಡಸಿ ಸರ್ವಸಮಾನ್ಯರಾಗಿದ್ದ ಅಳಸಿಂಗ ಪೆರುಮಾಳ್ ಅವರು ಜಿ.ಜಿ.ನರಸಿಂಹಾಚಾರ್ಯರ ಬಂಧುಗಳು ಮತ್ತು ಸ್ನೇಹಿತರು. ಹೀಗೆ ಜಿ.ಜಿ.ನರಸಿಂಹಾಚಾರ್ಯರಲ್ಲಿ ವೇದಾಂತ ವಿಚಾರ ಕುತೂಹಲವೂ ಉಜ್ವಲವಾದ ದೇಶಾಭಿಮಾನವೂ ಎದ್ದು ಕಾಣುತ್ತಿದ್ದವು. ಒಂದಾನೊಂದು ಸಂದರ್ಭದಲ್ಲಿ ಜಿ.ಜಿ. ಅವರ ಮೇಲಧಿಕಾರಿ ಡೆಪ್ಯುಟಿ ಕಮಿಷನರವರು ಸ್ವದೇಶೀಯರನ್ನೂ ಸ್ವಮತವನ್ನೂ ಕುರಿತು ಒಂದು ಸಣ್ಣ ಮಾತನ್ನು ಆಡಿದಾಗ ಜಿ.ಜಿ. ಯವರಿಗೆ ಕೋಪ ಕೆರಳಿ, ಇಬ್ಬರಿಗೂ ವಾಗ್ವಾದ ನಡೆಯಿತೆಂದೂ ಆಗ ಆ ಅಧಿಕಾರಿ ಅವಮರ್ಯಾದೆಯಿಂದ ನಡೆಯಲು ಜಿ.ಜಿ. ಯವರು ಕೋಟಿನ ತೋಳುಗಳನ್ನು ಮೇಲಕ್ಕೆ ಸೆಳೆದುಕೊಂಡು, ತಾವು ಮುಷ್ಟಾಮುಷ್ಟಿಗೆ ಸಿದ್ಧವಾಗಿರುವುದನ್ನು ತೋರಿಸಿದರೆಂದೂ ನಾನು ಕಥೆ ಕೇಳಿದ್ದೇನೆ. ಜಿ.ಜಿ. ಯವರು ಅಂಥವರೇ. ಸ್ನೇಹದಲ್ಲಿ ಪರಮ ಮೃದು. ಆದರೆ ದುಶ್ಚೇಷ್ಟೆಯನ್ನು ಕಂಡಾಗ ಭೀಮಸೇನನಂತೆ. ಅವರೇನೂ ಬಹಳ ಮಾತಿನವರಲ್ಲ. ಆದರೆ ಅವರು ನಗುಮುಖದಿಂದ ಹತ್ತಿರ ಕುಳಿತಿದ್ದರೆ ನಮಗೊಂದು ಉತ್ಸಾಹ ಮತ್ತು ಧೈರ್ಯ.

# ಆರ್.ಎ.ಕೆ

ಆರ್.ಎ. ಕೃಷ್ಣಮಾಚಾರ್ಯರು ಅಣ್ಣಂದಿರಂತೆಯೇ ಬಿ.ಎ., ಪ್ಯಾಸ್ ಮಾಡಿದ್ದರೆಂಬುದು ಸಣ್ಣ ಅಂಶ. ನಾನು ಕಂಡಿರುವವರಲ್ಲಿ ತತ್ತ್ವಜೀವಿ ಎಂದರೆ ಇವರೊಬ್ಬರು, ಅವರ ಪಾಂಡಿತ್ಯ ಬಹುಮುಖವಾದದ್ದು. ಇಂಗ್ಲೀಷಿನಲ್ಲಿ ಓಜಸ್ವಿಯಾದ ವಾಗ್ಧೋರಣೆ, ವೇದಾಂತ ವಿಜ್ಞಾನಗಳಲ್ಲಿ ವಿಸ್ತಾರವಾದ ಗ್ರಂಥ ಪರಿಚಯ, ತರ್ಕದಲ್ಲಿ ನಿಶಿತವಾದ ಮತ್ತು ನಿರ್ಣಾಯಕವಾದ ವಾದ ಸರಣಿ. ಪ್ರತಿಪಾದನ ಕ್ರಮದಲ್ಲಿ ವಿಷಯವನ್ನು ವಿಶದ ಪಡಿಸಿ ಬೋಧನೆಕೊಡಬೇಕೆಂಬ ಶ್ರದ್ಧೆ-ಇವಿಷ್ಟು ಆರ್.ಎ.ಕೃಷ್ಣಮಾಚಾರ್ಯರ ವಿದ್ವತ್ತಿನ ಲಕ್ಷಣಗಳು.

'ಬ್ರಹ್ಮವಾದಿನ್' ಪತ್ರಿಕೆಗಾಗಿ ಬಂದಿದ್ದ ಲೇಖನಗಳು ಶೋಧನೆ ಪರಿಷ್ಕರಣೆಗಳಿಗಾಗಿ ಆರ್.ಎ.ಅವರ ಬಳಿಗೆ ಬರುತ್ತಿದ್ದವು. ಈ ಕೆಲಸವನ್ನು ಅವರು ಹೆಸರಿನ ಆಸೆ ಕಿಂಚಿತ್ತೂ ಇಲ್ಲದೆ ನಡಸುತ್ತಿದ್ದರು. ಅವರು ಜಿಜ್ಞಾಸಾವಸರದಲ್ಲಿ-

"ವಿಜ್ಞಾನಭಿಕ್ಷು ಹೀಗೆ ಹೇಳಿದ್ದಾನೆ. ವಾಚಸ್ಪತಿ ಅದಕ್ಕೆ ಹೀಗೆ ಪ್ರತ್ಯುತ್ತರ ಕೊಡುತ್ತಾನೆ. ಆದರೆ ವಿಜ್ಞಾನಭಿಕ್ಷುವಿನ ಒಂದಂಶವನ್ನು ವಾಚಸ್ಪತಿ ಗಮನಕ್ಕೆ ತೆಗೆದು ಕೊಂಡಂತಿಲ್ಲ. ಅದಕ್ಕೆ ಸಮಾಧಾನ ಸುರೇಶ್ವರ ವಾರ್ತಿಕದಲ್ಲಿ ಹೀಗಿರುತ್ತದೆ."

-ಈ ರೀತಿ ಹೇಳಿ ನಾನಾ ತಾತ್ತ್ವಿಕರ ವಾದಪ್ರತಿವಾದಗಳನ್ನು ಸಿಕ್ಕು ಬಿಡಿಸಿ ತಿಳಿಸುವುದರಲ್ಲಿ ಗಟ್ಟಿಗರು. ಅವರು ಸಭೆಯಲ್ಲಿ ಭಾಷಣ ಮಾಡಲು ನಿಂತರಂತೂ ಆ ಮಾತಿನ ಜೋರೂ, ಅದರೊಳಗಿನ ಕಾವೂ ಎಂಥವರನ್ನೂ ಕೆರಳಿಸಬಲ್ಲದ್ದಾಗಿತ್ತು.

ನಡತೆಯಲ್ಲಿ ಆರ್.ಎ.ಅವರು ಹಸು ಮಗು. ಆಕಾರದಲ್ಲಿ ಉನ್ನತರಾಗಿ ದರ್ಶನೀಯರಾಗಿದ್ದರೂ ವಸ್ತ್ರ ವೇಷಗಳ ಮೇಲೆ ಸ್ವಲ್ಪವೂ ಲಕ್ಷ್ಯವಿಲ್ಲದವರಂತೆ ಕಾಣುತ್ತಿದ್ದರು. ಹಳೆಯ ಬಟ್ಟೆ, ಅದೂ ಮಾಸಿದ್ದು. ಅದನ್ನು ಹೇಗೆ ಹೇಗೆಯೋ ಮೈಮೇಲೆ ಹಾಕಿಕೊಂಡು ಬರುತ್ತಿದ್ದರು. ದೂರದಿಂದ ನೋಡುವವರಿಗೆ ಅವರು ಯಾರೋ ಸೋಮಾರಿ ಎಂದೇ ಅನಿಸುತ್ತಿತ್ತು. ಊಟ ಉಪಚಾರಗಳ ವಿಷಯದಲ್ಲಿಯೂ ಅವರು ಹಾಗೆಯೇ ತುಂಬಾ ಉದಾಸೀನರು. ಯಾದೃಚ್ಛಿಕರಾಗಿಯೇ ಬಾಳಿದರು.

ಚಿಕ್ಕವರನ್ನು ಕಂಡರೆ ಅವರಿಗೆ ತುಂಬ ಅಕ್ಕರೆ. ವಿದ್ಯಾರ್ಥಿಗಳು ಪರೀಕ್ಷೆಗೆ ಹೋಗಿದ್ದಾಗ ಆರ್.ಎ.ಅವರು ಸೊಗಸಾದ ಅಡಿಗೆಗಳನ್ನು ಮಾಡಿಸಿ ಮೂಟೆ ಕಟ್ಟಿ ತಾವೇ ಹೆಗಲಮೇಲೆ ಹೊತ್ತು ಪರೀಕ್ಷಾ ಸ್ಥಳಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ವಿದ್ಯಾರ್ಥಿಗಳಿಗೆ ಕೈತುತ್ತು ಹಾಕಿ ಕಾಫಿ ನೀರು ಕೊಟ್ಟು ಧೈರ್ಯ ಉತ್ಸಾಹಗಳನ್ನು ತುಂಬುತ್ತಿದ್ದರು. ಹೀಗೆ ಅವರಿಂದ ಆಹಾರವನ್ನೂ ಧೈರ್ಯವನ್ನೂ ಪಡೆಯುತ್ತಿದ್ದವರು ಅವರ ಮನೆಯ ಅಥವಾ ಬಂಧು ಮಿತ್ರರ ಹುಡುಗರು ಮಾತ್ರವಲ್ಲ. ಅಲ್ಲಿ ತಿಂಡಿ ಇರುವವರೆಗೂ ಯಾರು ಯಾರು ಬರುತ್ತಿದ್ದರೋ ಅವರಿಗೆಲ್ಲ ಅದು ದೊರೆಯುತ್ತಿತ್ತು.

ನನಗೆ ಅವರ ವಿಷಯ ಪದೇಪದೇ ನೆನಪಿಗೆ ಬರುತ್ತದೆ. ಅಂಥ ಪ್ರತಿಭಾಶಾಲಿಗಳು ಯಾವುದಾದರೊಂದು ಶಾಶ್ವತವಾಗಿ ನಿಲ್ಲುವ ಕೆಲಸವನ್ನು ಮಾಡಲಿಲ್ಲವಲ್ಲ-ಎಂಬ ಕೊರತೆ ಆ ನೆನಪಿನಲ್ಲಿ ಅಂಟಿಕೊಂಡಿರುತ್ತದೆ. ಆದರೆ ಆರ್.ಎ.ಅವರು ನಿಜವಾದ ವೇದಾಂತಿಗಳು. ಇದನ್ನು ಮಾಡಲೇಬೇಕು, ಅದನ್ನು ಮುಗಿಸಿಯೇ ತೀರಬೇಕು-ಎಂಬ ಹಟವಾಗಲಿ ಚಪಲವಾಗಲಿ ಅವರಿಗೆ ಇರಲಿಲ್ಲ. ಯಾವ ಯಾವ ಕ್ಷಣ ತಮ್ಮ ಕೈಗೆ ಯಾವ ಯಾವ ಕೆಲಸವನ್ನು ಒದಗಿಸಿಡುತ್ತದೆಯೋ ಆಗಾಗ ಅದನ್ನು ಆದಷ್ಟು ಚೆನ್ನಾಗಿ ಮಾಡಿದರೆ ಆಯಿತೆನ್ನುವುದು ಅವರ ಮನೋಧರ್ಮ. ಈ ಹೊತ್ತು ಅರಳಿದ ಹೂವು ಈ ಹೊತ್ತಿನ ಪೂಜೆಗೆ-ಈ ಹೊತ್ತಿನ ಸಂತೋಷಕ್ಕೆ. ನಾಳೆಯ ಯೋಚನೆ ನನಗೇಕೆ? ಎಂಬುದು ಅವರ ತತ್ತ್ವವಿದ್ದಂತೆ ತೋರುತ್ತದೆ. ಅದೂ ನಾವು ಕಲಿಯಬೇಕಾದ ಒಂದು ನೀತಿ. ಅತಿಕೀರ್ತಿಕಾಮನೆಯಿಂದ ಎಷ್ಟು ಮಂದಿ ಇದ್ದ ಕೀರ್ತಿಯನ್ನು ಮುರಿದುಕೊಂಡಿಲ್ಲ! ಕೀರ್ತಿಗೆಂದೆ ಕೆಲಸ ಮಾಡುವುದು?

# ಆಸೂರೀ ಆನಂದಾಳ್ವಾರ್

ಇವರೊಬ್ಬ ಮಹಾವ್ಯಕ್ತಿ. ಆಸೂರೀ ಎಂಬುದು ಅವರ ಮನೆತನದ ಹೆಸರು. 'ಆಸೂರ್ಯನಂತಾಹ್ವಯಃ'. ಶಾಸನದ (ಆರ್ಕಿಯಾಲಜಿ) ಇಲಾಖೆಯಲ್ಲಿ ಪಂಡಿತರಾಗಿದ್ದರು. ಸಂಸ್ಕೃತ ಸಾಹಿತ್ಯದಲ್ಲಿಯೂ, ಅಲಂಕಾರ ವ್ಯಾಕರಣ ತರ್ಕಶಾಸ್ತ್ರಗಳಲ್ಲಿಯೂ, ವೇದಾಂತದಲ್ಲಿಯೂ, ಮಹಾ ವಿದ್ವತ್ಪಂಕ್ತಿಗೆ ಸೇರಿದವರು, ಮೇಲ್ಮೈಯಾದವರು. ಸಂಸ್ಕೃತದಲ್ಲಿ ಪ್ರೌಢ ಶೈಲಿಯಲ್ಲಿ ಕವಿತ್ವ ಮಾಡಬಲ್ಲವರು. ಮಾತಿನಲ್ಲಿ ಸರಸಿಗಳು; ವಾದದಲ್ಲಿ ತೀಕ್ಷ್ಣರು; ವ್ರತನಿಷ್ಠೆಯಲ್ಲಿ ನಿಶ್ಚಲರು. ಇವರು ಶೃಂಗೇರಿಯ ಜಗದ್ಗುರು ಶ್ರೀ ಶಿವಾಭಿನವ ನೃಸಿಂಹಭಾರತೀ ಸ್ವಾಮಿಗಳವರಿಗೆ ಪರಮಪ್ರಿಯವಾಗಿದ್ದರು. ಆ ಸ್ವಾಮಿಗಳವರು ಇವರನ್ನು ಪದೇ ಪದೇ ಕರೆಯಿಸಿಕೊಂಡು ಮಾತುಕಥೆಯಾಡಿ ಬಹುಮಾನಿಸುತ್ತಿದ್ದರು.

ಆಸೂರೀ ಆನಂದಾಳ್ವಾರ್ ಅವರು ಮೈಸೂರಿನ ಸದ್ವಿದ್ಯಾ ಪಾಠಶಾಲೆಯ ಪೆರಿಯ ಸ್ವಾಮಿ ತಿರುಮಲಾಚಾರ್ಯರವರ ಶಿಷ್ಯರು. ಇವರು ಆರ್ಕಿಯೊಲಾಜಿಕಲ್ (ಶಾಸನದ) ಇಲಾಖೆಯಲ್ಲಿ ಪಂಡಿತರಾಗಿದ್ದು ನಿವೃತ್ತರಾದ ಕೆಲವು ಕಾಲದ ಮೇಲೆ ಮೇಲುಕೋಟೆಯ ಯತಿರಾಜ ಮಠದ ಗುರುಪೀಠವನ್ನಾರೋಹಿಸಿದರು. ಇವರು ವಾದಸಂದರ್ಭದ ವಿನಾ ಯಾವಾಗಲೂ ಹಸನ್ಮುಖಿಗಳಾಗಿ ಹಾಸ್ಯಪ್ರಿಯರಾಗಿ ಕರುಣಾಪರಿಪೂರ್ಣರಾಗಿ ಮಹಾಸ್ವತಂತ್ರರಾಗಿ ಪರಮ ಸಾತ್ತ್ವಿಕರಾದ ಭಾಗವತರಾಗಿದ್ದರು.

೧೯೦೮-೯ರ ಸುಮಾರಿನಲ್ಲಿ ಶೃಂಗೇರಿಯ ಸ್ವಾಮಿಗಳು ಶ್ರೀ ಶಂಕರಾಚಾರ್ಯರ ಜನ್ಮ ಸ್ಥಳವಾದ ಕಾಲಟಿಯಲ್ಲಿ ಆಚಾರ್ಯ ಮೂರ್ತಿಯನ್ನು ಪ್ರತಿಷ್ಠೆಮಾಡಿಸಿದ ಕಾಲದಲ್ಲಿ ಆನಂದಾಳ್ವಾರ್ ಅವರನ್ನು ಅಲ್ಲಿಗೆ ಬರಮಾಡಿಕೊಂಡಿದ್ದರು. ಆ ಸಂದರ್ಭದಲ್ಲಿ ಆನಂದಾಳ್ವಾರ್ ಅವರು ರಚಿಸಿದ್ದ ಕೆಲವು ಸಂಸ್ಕೃತ ಕವಿತೆಗಳ ಪುಸ್ತಕ-ಅವರೇ ಸ್ವತಃ ನನಗೆ ಕೊಟ್ಟದ್ದು-ನನ್ನ ಬಳಿ ಇತ್ತು. ಅದರಲ್ಲಿಯ ಮುಖ್ಯ ವಿಷಯಗಳನ್ನು ಹೇಳಿದರೆ ಆನಂದಾಳ್ವಾರವರದು ಎಂಥ ಉದಾರವಾದ ದೃಷ್ಟಿ, ಎಷ್ಟು ವಿಶಾಲವಾದ ಹೃದಯ-ಎಂಬುದು ಸ್ಪಷ್ಟವಾದೀತು. ಆ ವಿಷಯಗಳು ಹೀಗಿವೆ:

- ಸರಸ್ವತೀ ಮಣಿಹಾರಯಷ್ಟಿಃ
- ಶ್ರೀ ಚಂದ್ರಮೌಳೀಶ್ವರ ಸ್ತುತಿಃ
- ಶ್ರೀ ರತ್ನಗರ್ಭ ಗಣಪತಿಃ

- ಶ್ರೀ ಗುರುವರ ನುತಿಃ
- ಶ್ರೀ ಶಂಕರಾಚಾರ್ಯ ಮೂರ್ತಿಷ್ಠಾಭಿನಂದನಂ
- ಶ್ರೀ ಶೃಂಗಗಿರಿ ಶಾರದಾಸ್ತುತಿಃ
- ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿನಃ
- ಸ್ಫಟಿಕ ಶಿಲಾಮೂರ್ತಿಃ
- ಶ್ರೀ ಚಂದ್ರಶೇಖರ ಭಾರತೀ ಸ್ವಾಮಿನಃ

ಈ ಶೈವ ಅದ್ವೈತಗಳ ಪ್ರಶಂಸೆಗಳನ್ನು ಬರೆದವರು ಪರಮ ಶ್ರೀ ವೈಷ್ಣವರು-ಅದರಲ್ಲಿಯೂ ಉತ್ತರೋತ್ತರ ಮೇಲುಕೋಟೆಯ ಶ್ರೀಮದ್ರಾಮಾನುಜೀಯ ಮಠದ ಪೀಠಾಧಿಪತಿಗಳಾದವರು. ಅವರು ಮುಕ್ತಕಂಠರಾಗಿ ಅನ್ಯದೈವವನ್ನೂ ಶೈವಮತವನ್ನೂ ಕೊಂಡಾಡಿರುವ ಪರಿಪಾಠಿಯನ್ನು ನೋಡಿದರೆ ನಮ್ಮ ದೇಶದಲ್ಲಿ ಮತನಿಷ್ಠೆಯಲ್ಲಿಯೂ ದೊಡ್ಡತನವೆಂಬುದು ಒಂದಾನೊಂದು ಕಾಲದಲ್ಲಿತ್ತೆಂದು ಮನಸ್ಸಿಗೆ ಚೆನ್ನಾಗಿ ತೋರಿಬರುತ್ತದೆ. ಇಂದಿನ ಶೈವ ವೈಷ್ಣವ ಕಲಹಗಳನ್ನೂ ದ್ವೈತಾದ್ವೈತ ವಿವಾದಗಳ ಕೋಲಾಹಲವನ್ನೂ ನೋಡಿ ಬೇಸತ್ತವರು ಆನಂದಾಳ್ವಾರ್ ಅವರ ಮಹೋದಾರತೆಯನ್ನು ನೆನಪಿಗೆ ತಂದುಕೊಂಡರೆ ಕೊಂಚವಾದರೂ ಸಮಾಧಾನ ಬರಬಹುದು. ಮನುಷ್ಯನು ಪರಮತತ್ತ್ವಕ್ಕೆ ಹತ್ತಿರಹತ್ತಿರವಾದಂತೆಲ್ಲ ಅವನ ಮನಸ್ಸಿನ ಸಣ್ಣ ತನಗಳೂ ಹಟಗಳೂ ಕಳಚಿಬೀಳುತ್ತವೆ. ಪರಮಾರ್ಥವನ್ನು ಪ್ರತ್ಯಕ್ಷವಾಗಿ ಕಂಡವರು ಮನುಷ್ಯಲೋಕದಲ್ಲಿ ಯಾರು? ಮತ್ತು ಪರಮಾರ್ಥವು ನೋಡುವವನ ಕಣ್ಣಿಗೆ ತಕ್ಕಂತೆ ಕಾಣಿಸಿ ಕೊಳ್ಳಲಾರದೇನು? ಸತ್ಯದ ದೃಶ್ಯರೂಪ ಸಾಧಕನ ಭಾವದಂತೆ. ದ್ವೈತವಾಗಲಿ, ಅದ್ವೈತವಾಗಲಿ, ವಿಶಿಷ್ಟಾದ್ವೈತವಾಗಲಿ, ಅದರ ಸತ್ಯತೆಗೆ ಪ್ರಮಾಣವಿರುವುದು ಉಪಾಸಕನ ಹೊರಗಡೆ ಅಲ್ಲ, ಅವನ ಒಳಗಡೆ-ಅವನ ಜೀವನನೀತಿಯಲ್ಲಿ-ಅವನ ಅನುಭವದಲ್ಲಿ. ಆದದ್ದರಿಂದ ಪರಮತ ಅಸಹನೆಯು ಸತ್ಯಕ್ಕೆ ಗೌರವವೇನೂ ಅಲ್ಲ! ಪರಮತದಲ್ಲಿಯೂ ಸತ್ಯಾಂಶವಿದ್ದೀತೆಂದು ಭಾವಿಸುವುದು ಸತ್ಯಕ್ಕೆ ಸಲ್ಲಿಸಿದ ಗೌರವ. ಇದನ್ನು ನಾವು ರಾಮಾನುಜೀಯರಾದ ಆನಂದಾಳ್ವಾರ್ ಅವರು ಶಾಂಕರ ಪೀಠದ ವಿಷಯದಲ್ಲಿ ತೋರಿಸಿದ ಮರ್ಯಾದೆಯಿಂದ ತಿಳಿದುಕೊಳ್ಳಬಹುದು.

ಆಸೂರೀ ಆನಂದಾಳ್ವಾರ್ ಅವರು ಪೂರ್ಣ ಸರಸಿಗಳು. ಅವರು ಶೃಂಗೇರಿಯ ಜಗದ್ಗುರು ಶ್ರೀ ಶಿವಾಭಿನವ ಸಚ್ಚಿದಾನಂದ ನೃಸಿಂಹ ಭಾರತೀ ಸ್ವಾಮಿಗಳವರಿಗೆ ಬಹು ಪ್ರಿಯರಾದವರೆಂದು ಮೇಲೆ ಹೇಳಿದೆಯಷ್ಟೆ. ಜಗದ್ಗುರುಗಳವರು ಕಾಲಟಿಯಲ್ಲಿ ಶ್ರೀಶಂಕರ ಜನ್ಮಸ್ಥಲದಲ್ಲಿ ಆಚಾರ್ಯ ವಿಗ್ರಹವನ್ನು

ಪ್ರತಿಷ್ಠೆಮಾಡಿದ ಉತ್ಸವ ಕಾಲಕ್ಕೆ ವಿದ್ವಾನ್ ಆನಂದಾಳ್ವಾರ್ ಅವರನ್ನು ಕರೆಯಿಸಿಕೊಂಡಿದ್ದರಷ್ಟೆ. ಕಾಲಟಿ ಪ್ರವಾಸದ ಸಂದರ್ಭದಲ್ಲಿ ಆಳ್ವಾರ್ ಅವರು ತಿರುವಾಂಕೂರು-ಕೊಚ್ಚಿ ಪ್ರದೇಶಗಳ ಸ್ತ್ರೀಯರ ಉಡುಪನ್ನು ಕುರಿತು ಒಂದು ಪದ್ಯವನ್ನು ಬರೆದಿದ್ದರು. ಅದು ಅಚ್ಚಾಗಿಲ್ಲ, ಸ್ನೇಹಿತರಿಗೆ ಬರೆದ ಕಾಗದದಲ್ಲಿತ್ತು. ಆ ಪದ್ಯದ ಮುಪ್ಪಾಗ ಭಾಗ ನನ್ನ ಜ್ಞಾಪಕದಲ್ಲಿ ನಿಂತಿದೆ. ಅದು ಹೀಗೆ:

ನಿರ್ಮೋಕೋ ಯದಿ ಶಾರದೇಂದು ಮಹಸಾ ಮಾಯಸ್ಯ ಸಂಗೃಹ್ಯತೇ ।
ದಿವ್ಯೈಸ್ತೇನ ಕುವಿಂದತಂತು ಕುಶಲೈರ್ಯಜ್ಜಾಲಿಕಾ ಕಲ್ಪ್ಯತೇ ॥
ಆಸೇಕೋ ಹಿಮವಾಲುಕಾಂಬು ಪೃಷತಸ್ತತ್ರಾಸಕೃತ್ತನ್ಯತೇ ।
ಶಕ್ಯಂ ಕೇರಳ ಸುಭ್ರುವಾಂ ಸ್ತನತಟಂ ಕರ್ತುಂ ನಿಚೋಲಾಂಚಿತಂ ॥

ಶರಚ್ಚಂದ್ರನ ಕಾಂತಿಯ ಪೊರೆಯನ್ನು ಕಷ್ಟಪಟ್ಟು ಬೇರೆ ತೆಗೆದು; ಆ ಪೊರೆಯನ್ನು ದೇವಲೋಕದ ನೆಯ್ಗೆಯವರಿಂದ ಜಾಲದ ಬಲೆಯಂತೆ ನೇಯಿಸಿ, ಆ ಬಲೆಯನ್ನು ಪಚ್ಚ ಕರ್ಪೂರದ ನೀರಿನಲ್ಲಿ ನೆನೆಯಿಸಿ, ಆದರಿಂದ ಬಟ್ಟೆಮಾಡಿಕೊಟ್ಟರೆ ಆಗ ಕೇರಳ ಸುಂದರಿಯರು ಕುಪ್ಪಸ ತೊಡುವಂತೆ ಮಾಡುವುದು ಸಾಧ್ಯವಾದೀತು. -ಎಂದರೆ ಅದುವರೆಗೂ ಇಲ್ಲ-ಎಂದು ಭಾವ.

ಈ ಪದ್ಯವನ್ನು ನನಗೆ ತೋರಿಸಿದಾಗ ನಾನು ಒಂದು ತಿದ್ದಾವಣೆ ಸೂಚಿಸುವ ಸಾಹಸ ಮಾಡಿದೆ. ಕಡೆಯ ಚರಣದಲ್ಲಿಯ "ನಿಚೋಲಾಂಚಿತಂ" (ನಿಚೋಲ ಎಂದರೆ ಕುಪ್ಪಸ) ಎಂಬುದರ (ನಿಚೋಲ+ಅಂಚಿತಂ ಎರಡು ಪದಗಳ) ಸ್ಥಾನದಲ್ಲಿ "ನ ಚೇಲಾಂಚಿತಂ" ಎಂದು (ನ+ಚೇಲ+ಅಂಚಿತಂ) ಮೂರು ಪದಗಳನ್ನೇಕೆ ಹಾಕಬಾರದು? (ಚೇಲ ಎಂದರೆ ಬಟ್ಟೆ.) ಹಾಗೆ ಬದಲಾಯಿಸಿದಲ್ಲಿ "ಅಂಥ ಬಟ್ಟೆ ಕೊಟ್ಟರೂ ಕೇರಳ ಸುಂದರಿಯರನ್ನು ಕುಪ್ಪಸ ತೊಡುವಂತೆ ಒಡಂಬಡಿಸಲಾಗದು; ಅಷ್ಟೆಲ್ಲ ಮಾಡಿದರೂ ಅವರು ಎದೆಯ ಮೇಲೆ ಬಟ್ಟೆ ಹೊದೆಯುವಂತೆ ಮಾಡಲು ಆಗಲಾರದು" ಎಂದು ಅರ್ಥವಾಗುತ್ತದಲ್ಲವೆ?-ಹೀಗೆಂದು ನಾನು ವಿವರಿಸಿದೆ. ಆ ರಸಿಕ ಹಿರಿಯರು- "ಭಲೆ ಹುಡುಗ! ನಿನ್ನಿಷ್ಟವನ್ನು ನೀನು ಸೂಚಿಸುತ್ತಿ!" ಎಂದು ನನ್ನನ್ನು ಮೃದುವಾಗಿ ಲೇವಡಿಮಾಡಿದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ.

ನನ್ನ ಸ್ನೇಹಿತರೊಬ್ಬರು ನನಗೆ ತಿಳಿಸಿದ ಒಂದು ಸಂಗತಿ ಈಗ ಸ್ಮರಣೆಗೆ ಬರುತ್ತದೆ. ಆ ಸ್ನೇಹಿತರು ಆಂಧ್ರರು, -ಲಿಂಗನ ಸೋಮಯಾಜಿ ಎಂಬುವರು-ಕಸಬಿನಲ್ಲಿ ವಕೀಲರು, ಆದರೆ ಸಂಸ್ಕೃತದಲ್ಲಿ ಒಳ್ಳೆಯ ಪಂಡಿತರು. ಅವರು ಅದ್ವೈತ ವೇದಾಂತ ಸಾಹಿತ್ಯದಲ್ಲಿ ನಿಷ್ಣಾತರು; ಅನೇಕ ಪ್ರಸಿದ್ಧ ಗ್ರಂಥಗಳ ಮೇಲೆ ಸಂಸ್ಕೃತದಲ್ಲಿ

ಆದರಣೀಯಗಳಾದ ವ್ಯಾಖ್ಯಾನಗಳನ್ನೂ ತೆಲುಗಿನಲ್ಲಿ ಉಪನಿಷತ್ತುಗಳ ಮೇಲೆ ಸುಲಭ ಟೀಕೆಗಳನ್ನೂ ರಚಿಸಿರುವರು. ಶಾಂಕರಮತಸ್ಥರಾದ ಇವರಿಗೆ ಆನಂದಾಳ್ವಾರ್ ಸ್ವಾಮಿಗಳವರಲ್ಲಿ ತುಂಬಾ ಗೌರವ ಮತ್ತು ಭಕ್ತಿ. (ಆನಂದಾಳ್ವಾರ್ ಅವರನ್ನು ಪೂರ್ವಾಶ್ರಮದಲ್ಲಿಯೂ "ಆನಂದಾಳ್ವಾರ್‌ಸ್ವಾಮಿ" ಎಂದು ಕರೆಯುವುದೇ ನಮಗೆ ವಾಡಿಕೆಯಾಗಿತ್ತು.)

ಆನಂದಾಳ್ವಾರ್ ಸ್ವಾಮಿಯವರು ಕಾವ್ಯಸಾಹಿತ್ಯದಲ್ಲಿ ಮೊದಲಿನಿಂದಲೂ ಅತಿಶಯವಾದ ಆಸಕ್ತಿಯನ್ನು ತೋರಿಸುತ್ತಿದ್ದವರು; ಎಷ್ಟೋ ಅಲಂಕಾರ ಗ್ರಂಥಗಳನ್ನು ಪರಿಶೀಲಿಸಿ ಪರಿಷ್ಕಾರಗೊಳಿಸಿದ್ದವರು. ಅವರು ಶ್ರೀ ಯತಿರಾಜ ಮಠದಲ್ಲಿ ಸಂನ್ಯಾಸಾಶ್ರಮ ಸ್ವೀಕಾರ ಮಾಡಿದ ಮೇಲೂ ಒಂದೆರಡು ಕಾವ್ಯಗಳನ್ನೂ ಅಲಂಕಾರ ಗ್ರಂಥಗಳನ್ನೂ ಸಂಪಾದಿಸಿ ಪ್ರಚುರಪಡಿಸಿದ್ದರು.

ನಾನು ಮೇಲೆ ಹೇಳಿರುವ ಲಿಂಗನ ಸೋಮಯಾಜಿಯವರು ಒಂದು ದಿನ ಶ್ರೀ ಸ್ವಾಮಿಗಳವರಲ್ಲಿಗೆ ಹೋಗಿ ಮಾತನಾಡುತ್ತಿದ್ದಾಗ ಸ್ವಾಮಿಗಳವರ ಕಾವ್ಯ ಪ್ರಕಟನೆಯ ವಿಚಾರ ಬಂತು. ಆಗ ನನ್ನ ಸ್ನೇಹಿತರು ಸಂಸ್ಕೃತದಲ್ಲಿ ಸ್ವಾಮಿಗಳನ್ನೂ ಹೀಗೆ ಕೇಳಿದರಂತೆ:

"ವಿರಕ್ತರಿಗೆ ಕಾವ್ಯಾಸಕ್ತಿ ಸರಿಯೆ? 'ಕಾವ್ಯಾಲಾಪಾಂಶ್ಚ ವರ್ಜಯೇತ್' ಎಂದಲ್ಲವೆ ವಿಧಿ? ಯತಿಗೆ ರಸದ ಬಯಕೆಯೆ?"

ಅದಕ್ಕುತ್ತರವಾಗಿ ಸ್ವಾಮಿಗಳು ತಮ್ಮ ಮಾತನ್ನೊಂದನ್ನೂ ಹೇಳದೆ ಈ ಕೆಳಗಣ ಉಪನಿಷದ್ವಾಕ್ಯವನ್ನು ಉದಾಹರಿಸಿದರಂತೆ:

ರಸೋ ವೈ ಸಃ । ರಸಗ್ಂ ಹ್ಯೇವಾಯಂ
ಲಬ್ಧ್ವಾ ಆನಂದೀ ಭವತಿ ॥
(ಈಶ್ವರನು ರಸಸ್ವರೂಪಿ. ಆದದ್ದರಿಂದಲೇ ರಸಾಸ್ವಾದನೆಯಿಂದ ಸುಖ.)

ಸೋಮಯಾಜಿಗಳಿಗೆ ಸಮಾಧಾನವಾಯಿತು. ಎದ್ದು ಮೂರುಸಲ ಪ್ರದಕ್ಷಿಣ ಮಾಡಿ ನಮಸ್ಕಾರಗಳನ್ನು ಅರ್ಪಿಸಿದರು, ಕ್ಷಮೆ ಬೇಡಿದರು. ಸ್ವಾಮಿಗಳು ನಗುತ್ತ ಬಹುಮಾನ ಮಾಡಿದರು.

ಇಂಥ ಮಹನೀಯರು ಆನಂದಾಳ್ವಾರ್ ಅವರು; ಮನುಷ್ಯ ಬಾಂಧವ್ಯದಲ್ಲಿ ಪರಮ ಸರಳರು, ಜೀವನ ವಿಷಯದಲ್ಲಿ ಪರಮ ಸಹೃದಯರು, ತತ್ತ್ವದರ್ಶನದಲ್ಲಿ ವಿಶಾಲನಯನರು, ಚಾರಿತ್ರದಲ್ಲಿ ಪರಮ ಪರಿಶುದ್ಧರು.

# ಒಂದು ಕುಚೋದ್ಯ

ಭಾಷ್ಯಂ ದೇವಡಿಯಲ್ಲಿ ಅಗಾಗ ಕಾಣಲಾಗುತ್ತಿದ್ದ ಪಂಡಿತರಲ್ಲಿ ನವೀನಂ ರಾಮಾನುಜಾಚಾರ್ಯರೊಬ್ಬರು. ಅವರು ಮಹಾಪಂಡಿತರು; ಪದೇ ಪದೇ ಉತ್ತರದೇಶದಲ್ಲಿ- ಬರೋಡಾ, ಜಯಪುರ ಪ್ರಾಂತಗಳಲ್ಲಿ, ಸಂಚಾರ ಮಾಡಿದ್ದವರು. ಅವರಿಗೆ ಹಿಂದೀ, ಮರಾಠಿ, ಬಂಗಾಳಿ, ಗುಜರಾತಿ ಮೊದಲಾದ ಔತ್ತರೇಯ ಭಾಷೆಗಳ ಪರಿಚಯ ಚೆನ್ನಾಗಿತ್ತು, ಅವರು ಒಂದು ಸಂದರ್ಭದಲ್ಲಿ ಉದಾಹರಿಸಿದ ಪದ್ಯ ಇದು:

> ಅನುದಿತಯವಷಸಕಾರೈರ್ಯೇಷಾಂ ಭಾಷಾ ಸಮುಲ್ಲಸತಿ ।
> ಗುದವದನ ವಿವರ ಭೇದಃ ಕೇವಲಮನುಮೀಯತೇ ದನ್ತೈಃ ॥

“ಯಾರ ಭಾಷೆಯಲ್ಲಿ ಯಕಾರ, ವಕಾರ, ಷಕಾರ, ಸಕಾರಗಳ ಉಚ್ಚಾರಣೆಯಿಲ್ಲವೋ ಅವರಿಂದ ಶಬ್ದ ಕೇಳಬಂದಾಗ ಅದು ಯಾವ ಅವಯವದಿಂದ ಹೊರಟಿದ್ದೆಂಬುದನ್ನು ಹಲ್ಲು ನೋಡಿ ಗೊತ್ತು ಮಾಡಬೇಕಾಗುತ್ತದೆ.”

# ರಾಮಾಚಾರ್ಯರು

ಇಂಥವರು ಸೇರುತ್ತಿದ್ದ ಮನೆ ಭಾಷ್ಯಂ ರಾಮಾಚಾರ್ಯರದು, ಅಲ್ಲಿ ಚರ್ಚೆಗೆ ಬಾರದಿದ್ದ ದೈವಮಾನುಷ ವಿಚಾರಗಳೇ ಇಲ್ಲ. ಎಲ್ಲ ವಿಚಾರಗಳಲ್ಲಿಯೂ ನಿಶಿತಜ್ಞಾನವೂ ಶೋಧನಬುದ್ಧಿಯೂ ಆಲೋಚನಾ ಸ್ವಾತಂತ್ರ್ಯವೂ ಮೇಲೆದ್ದು ಕಾಣುತ್ತಿದ್ದವು.

ರಾಮಾಚಾರ್ಯರು ಸಂಸ್ಕೃತ ವಿದ್ವಾಂಸರೂ ಪೂರ್ವಾಚಾರಶೀಲರೂ ಆಗಿದ್ದರೂ ಅವರಿಗೆ ಪಾಶ್ಚಾತ್ಯ ವಿದ್ಯೆ ವಿಜ್ಞಾನಗಳು ಅಪರಿಚಿತವಾದವುಗಳಲ್ಲ. ನಾನು ಒಂದು ಸಲ ಪ್ರಸಿದ್ಧ ಇಂಗ್ಲೀಷ್ ತತ್ತ್ವವಿಚಾರಿಯಾದ ಜಾನ್ ಸ್ಟೂಅರ್ಟ್ ಮಿಲ್ ಲೇಖನ ಸ್ವಾತಂತ್ರ್ಯ ವಿಷಯಕ (On Liberty) ಗ್ರಂಥದ ಸಾರಾಂಶವನ್ನು ಕನ್ನಡದಲ್ಲಿ ಸಂಗ್ರಹಿಸಬೇಕೆಂದು ಸಂಕಲ್ಪಿಸಿ ಅದನ್ನು ರಾಮಾಚಾರ್ಯರಿಗೆ ತಿಳಿಸಿದೆ. ಆಗ ಅವರು ತಮ್ಮ ಹಳೆಯ ಕಾಗದಗಳಲ್ಲಿ ಸೇರಿಸಿದ್ದ ಟಿಪ್ಪಣಿಯನ್ನು (Notes) ನನ್ನ ಕೈಗೆ ಕೊಟ್ಟರು. ಆ ಟಿಪ್ಪಣಿಯಲ್ಲಿ ಮಿಲ್ ಲೇಖಕನನ್ನೂ ಹರ್ಬರ್ಟ್ ಸ್ಪೆನ್ಸರ್ ಎಂಬ ಮತ್ತೊಬ್ಬ ತತ್ತ್ವವಿಚಾರಿಯನ್ನೂ ಕುರಿತ ಸಂಗ್ರಹ ವಿಮರ್ಶೆಗಳಿದ್ದವು. ಅದನ್ನು ನೋಡಿ ರಾಮಾಚಾರ್ಯರ ಪ್ರಜ್ಞೆ ಎಷ್ಟು ವಿಸ್ತಾರವಾದದ್ದೆಂದು ನಾನು ತಿಳಿದುಕೊಂಡೆ.

ಅಂದಿನಿಂದೀಚೆಗೆ ನಾನು ನೋಡಿರುವ ಮತ್ತು ನೋಡುತ್ತಿರುವ ದೊಡ್ಡ ಮನುಷ್ಯರಲ್ಲಿ ಆ ಬಗೆಯ ಜ್ಞಾನ ಕುತೂಹಲವೂ ಶೋಧನಶ್ರದ್ಧೆಯೂ ಏಕೆ ಕಾಣಬರುತ್ತಿಲ್ಲ? ಎಂದುಕೊಳ್ಳುತ್ತಿದ್ದೇನೆ. ಅಥವಾ ಅಂಥ ಜನ ವಾಸ್ತವವಾಗಿ ಈಗಲೂ ಇದ್ದು, ಅಂಥವರನ್ನು ಕಾಣುವ ಭಾಗ್ಯ ಮಾತ್ರ ನನ್ನ ಪಾಲಿಗೆ ಬಂದಿಲ್ಲವೋ!

# ೧೩

# ನತ್ತಿ ಶಾಸ್ತ್ರಿಗಳು

ವೆಂಕಟರಾಮಶಾಸ್ತ್ರಿಗಳಿಗೆ ಭಾಷಾಧಿಕಾರದ ವರವನ್ನು ಕೊಡುವಾಗ ಉದಾರಿಯಾಗಿದ್ದ ಬ್ರಹ್ಮನು ನಾಲಿಗೆಯ ವರವನ್ನು ಕೊಡುವಾಗ ಕುಚೇಷ್ಟಿಯಾದಂತೆ ತೋರುತ್ತದೆ. ಹಾಗಲ್ಲದಿದ್ದರೆ ಅಂಥ ವಿದ್ವಾಂಸರಿಗೆ ವಾಗ್ಧೋರಣೆ ಸಾಧ್ಯವಿಲ್ಲದೆ ಮಾತುಮಾತಿಗೂ ಉಗ್ಗು ಹೇಗೆ ಬರಬೇಕು? ಈ ಕಾರಣದಿಂದ ಶಾಸ್ತ್ರಿಗಳವರನ್ನು ಊರಿನವರೆಲ್ಲ ನತ್ತಿಶಾಸ್ತ್ರಿಗಳೆಂದೇ ವ್ಯವಹರಿಸುತ್ತಿದ್ದರು. ಅದು ಗುರುತನ್ನು ಸುಲಭಮಾಡಿದ್ದ ವಾಸ್ತವಾಂಶ ಸ್ಮರಣೆಯೇ ಹೊರತು ಅಪಹಾಸ್ಯವಲ್ಲ. ಶಾಸ್ತ್ರಿಗಳವರ ವಿಷಯದಲ್ಲಿ ಎಲ್ಲರಿಗೂ ತ್ರಿಕರಣ ಪೂರ್ವಕವಾದ ಪ್ರೀತಿ ಗೌರವಗಳೇ ಇದ್ದವು.

ಶಾಸ್ತ್ರಿಗಳವರಿಗೆ ಇದ್ದ ಆಸ್ತಿ ಒಂದು ಮಣ್ಣು ಮಾಳಿಗೆಯ ಮನೆ, ಒಂದು ಸಣ್ಣ ಹೊಲ, ಕೆಲವು ತಾಳೆಯೋಲೆಯ ಪುಸ್ತಕಗಳು-ಇವಿಷ್ಟೆ. ಅವರಿಗೆ ಇಬ್ಬರು ಗಂಡು ಮಕ್ಕಳು ಇದ್ದರು. ಅವರಲ್ಲಿ ಹಿರಿಯಾತನು ವೈದ್ಯವೃತ್ತಿಯನ್ನು ಹಿಡಿದು, ಅದರ ಜೊತೆಗೆ ಪಿಟೀಲು ವಿದ್ಯೆಯನ್ನು ಕಲಿತಿದ್ದ. ಎರಡನೆಯಾತನು ಒಬ್ಬ ಅನುಕೂಲಸ್ಥರ ಅಳಿಯನಾಗಿ ಅವರ ಮನೆಯಲ್ಲಿಯೇ ಬಹುಮಟ್ಟಿಗೆ ಇರುತ್ತಿದ್ದ. ಅವರ ಮಗಳು ಬೇರೆ ಊರಿನಲ್ಲಿ ಗಂಡನೊಡನೆ ಇದ್ದಳು. ಶಾಸ್ತ್ರಿಗಳು ಸಂಸಾರದ ಯೋಚನೆಗಳನ್ನು ತಮ್ಮ ಹೆಂಡತಿ ಮಕ್ಕಳಿಗೆ ಬಿಟ್ಟು, ತಾವೂ ಮನೆಗೆ ಒಬ್ಬ ಅತಿಥಿ ಎಂಬಂತೆ ಇದ್ದರು.

ಶಾಸ್ತ್ರಿಗಳ ಮನೆಮಾತು ಕನ್ನಡವಾದರೂ ಅವರು ಆ ಪ್ರಾಂತದಲ್ಲೆಲ್ಲ ಹೆಸರುವಾಸಿಯಾದ ಸಂಸ್ಕೃತಾಂಧ್ರ ಪಂಡಿತರು. ಅವರ ಬಳಿ ಸಂಸ್ಕೃತ ಪಾಠಕ್ಕಾಗಿ ಯಾವಾಗಲೂ ನಾಲ್ವರೈವರು ವಿದ್ಯಾರ್ಥಿಗಳು ಇರುತ್ತಿದ್ದರು. ಶಾಸ್ತ್ರಿಗಳು ಸಾಮಾನ್ಯವಾಗಿ ಬೆಳಗಿನ ಜಾವ ನಾಲ್ಕು ನಾಲ್ಕೂವರೆ ಘಂಟೆಯ ವೇಳೆಗೆ ಎದ್ದು ತಮ್ಮ ಸುತ್ತಮುತ್ತ ಮಲಗಿರುತ್ತಿದ್ದ ವಿದ್ಯಾರ್ಥಿಗಳಲ್ಲಿ ಒಬ್ಬನನ್ನು ತಮ್ಮ ಕೈಗೋಲಿನಿಂದ ಚುಚ್ಚಿ ಎಬ್ಬಿಸಿ ಅವನು ಮಿಕ್ಕವರನ್ನು ಎಬ್ಬಿಸುವಂತೆ ಮಾಡುತ್ತಿದ್ದರು. ಶಾಸ್ತ್ರಿಗಳ ಕೈಯಲ್ಲಿ ಯಾವಾಗಲೂ ಒಂದು ಸಣ್ಣ ಕೋಲು ಇರುತ್ತಿತ್ತು. ಅವರು ಮಲಗಿದಾಗ ಆ ಕೋಲನ್ನು ಪಕ್ಕದಲ್ಲಿರಿಸಿ ಕೊಂಡಿರುತ್ತಿದ್ದರು. ಅವರು ಇತರರಿಗೆ

ಏನಾದರೂ ತಿಳಿಸಬೇಕಾದ ಸಂದರ್ಭ ಬಂದಾಗ ಉದ್ದಿಷ್ಟ ಮನುಷ್ಯನನ್ನು ಆ ಕೋಲಿನಿಂದ ತಿವಿದು ಗಮನವನ್ನು ತಮ್ಮ ಕಡೆಗೆ ಸೆಳೆದುಕೊಳ್ಳುತ್ತಿದ್ದರು.

ಹೀಗೆ ಕೋಲು ತಿವಿತದಿಂದ ಎಚ್ಚರಗೊಂಡ ವಿದ್ಯಾರ್ಥಿಗಳು ಮುಖ ಪ್ರಕ್ಷಾಳನ ಮಾಡಿಕೊಂಡು ಬಂದು ಒಂದು ಸಣ್ಣ ಹೊಂಗೆ ಎಣ್ಣೆಯ ದೀಪದ ಬೆಳಕಿನಲ್ಲಿ ಕುಳಿತ ಮೇಲೆ ಒಬ್ಬನು ಪುಸ್ತಕ ತೆರೆದು ಆ ದಿನದ ಪಾಠವನ್ನು ಓದುತ್ತಿದ್ದನು. ಅದು ರಘುವಂಶವೋ ಮಾಘವೋ ಉತ್ತರರಾಮಚರಿತೆಯೋ!-ಶಾಸ್ತ್ರಿಗಳಿಗೆ ಪುಸ್ತಕದ ಆವಶ್ಯಕತೆ ಇರಲಿಲ್ಲ. ಗ್ರಂಥ ಅವರಿಗೆ ಕಂಠಸ್ಥವಾಗಿತ್ತು. ಶಿಷ್ಯ ಓದುವಾಗ ಅಕ್ಷರವೋ ಪದ ವಿಭಾಗವೋ ತಪ್ಪಿದರೆ ಶಾಸ್ತ್ರಿಗಳು ಕೋಲಿನಿಂದ ಚುಚ್ಚುತ್ತಿದ್ದರು. ಓದುವವನು ಏನೋ ತಪ್ಪಾಗಿರಬೇಕೆಂದು ತಿಳಿದುಕೊಂಡು ತಾನೇ ತಿದ್ದಿಕೊಂಡು ಮತ್ತೊಮ್ಮೆ ಓದುವನು, ಅಥವಾ ಸಹಪಾಠಿಗಳು ಯಾರಾದರೂ ತಿದ್ದುಪಡಿ ಸೂಚಿಸುವರು. ಸಾಮಾನ್ಯವಾಗಿ ಓದಿಕೆ ಸರಿಯಾಗಿ ಬರುವವರೆಗೂ ಅವರಿಗೆ ತಿವಿತ ತಪ್ಪುತ್ತಿರಲಿಲ್ಲ.

ವಿದ್ಯಾರ್ಥಿಗಳ ಯೋಗ್ಯತೆಗೆ ಆ ಪ್ರಸಂಗ ಅಸಾಧ್ಯವೆಂದು ಶಾಸ್ತ್ರಿಗಳಿಗೆ ತೋರಿದಾಗ ಮಾತ್ರ, ಅಥವಾ ಪ್ರಕರಣವು ಕಷ್ಟವಾದದ್ದೆಂದು ಅವರೇ ಭಾವಿಸಿದಾಗ ಮಾತ್ರ, ಶಾಸ್ತ್ರಿಗಳು ಬಾಯಿಬಿಡುತ್ತಿದ್ದರು, ಮೊದಲೆರಡು ಮಾತುಗಳು ಹೊರಡುವುದರಲ್ಲಿ ಅವರಿಗೆ ಬಹಳ ಕಷ್ಟವಾಗುತ್ತಿತ್ತು. ಆಮೇಲೆ ಧಾರಾಳವಾಗಿಯೇ ಬರುತ್ತಿತ್ತು. ಬಾಯಿ ಬಿಡಲು ಹೀಗೆ ಸ್ವಾಭಾವಿಕವಾದ ಅಡಚಣೆ ಇದ್ದದ್ದರಿಂದ ಶಾಸ್ತ್ರಿಗಳ ಬೋಧನೆ ಮುಕ್ಕಾಲುಪಾಲು ಆ ಕೋಲಿನ ಮೂಲಕವೇ ಸಾಗಬೇಕಾಗಿತ್ತು, ಪದವಿಭಾಗ, ಶಬ್ದ, ಸಮಾಸ, ಅನ್ವಯ, ಆಕಾಂಕ್ಷೆ-ಇವೆಲ್ಲ ಸಾಮಾನ್ಯವಾಗಿ ವಿದ್ಯಾರ್ಥಿಯ ಸ್ವಪ್ರಯತ್ನದಿಂದಲೇ ನಡೆಯಬೇಕಾಗಿತ್ತು. ಹಾಗೆ ನಡೆಯುವುದೇ ಒಳ್ಳೆಯದೆಂದು ಶಾಸ್ತ್ರಿಗಳ ಅಭಿಪ್ರಾಯವೂ ಆಗಿತ್ತು. ಅವರ ನಾಲಿಗೆಯಲ್ಲಿ ನತ್ತಿ ಇಲ್ಲದೆ ಇದ್ದಿದ್ದರೂ ಬಹುಶಃ ಅವರು ಅದೇ ಶಿಕ್ಷಣಕ್ರಮವನ್ನು ಅನುಸರಿಸಿರುತ್ತಿದ್ದರೆಂದು ತೋರುತ್ತದೆ. ಪೂರ್ವಕಾಲದ ಉಪಾಧ್ಯಾಯರಿಗೆ ವಿದ್ಯಾರ್ಥಿಗಳ ಕೆಲಸವನ್ನು ಸುಲಭ ಮಾಡಬೇಕೆಂಬ ಹೊಸ ತತ್ತ್ವದ ಹುಚ್ಚು ಹಿಡಿದಿರಲಿಲ್ಲ. ವಿದ್ಯಾರ್ಥಿ ತಾನಾಗಿ ಕಷ್ಟಪಡಬೇಕು; ಅವನ ಕಷ್ಟದಂತೆ ಅವನಿಗೆ ಫಲ-ಇದು ಪೂರ್ವಿಕರ ತತ್ತ್ವ. ಜ್ಞಾನವೆಂಬುದೇನಿದ್ದರೂ ವಿದ್ಯಾರ್ಥಿಯ ಒಳಗೇ ಕುಳಿತಿದೆ. ಅದರ ಬೆಳಕಿಗೆ ಅಡ್ಡಗಟ್ಟಿರುವ ಸುತ್ತಮುತ್ತಲಿನ ಗೋಡೆಗಳನ್ನು ಕದಲಿಸುವುದೆಷ್ಟೋ ಅಷ್ಟೇ ಉಪಾಧ್ಯಾಯನ ಕೆಲಸ. ಅವರು ಅಷ್ಟು ಮಾಡಿದರೆ ಅಲ್ಲಿರುವ ದೀಪದ ಬೆಳಕು ತಾನಾಗಿ ಹೊರಕ್ಕೆ ಹರಡುತ್ತದೆ. ವಿದ್ಯೆಯನ್ನು ಹೊರಗಿನಿಂದ ಒಳಕ್ಕೆ ತುರುಕುವುದಲ್ಲ; ಒಳಗಿನಿಂದ ಹೊರಕ್ಕೆ ಕರೆಯುವುದು; ಇದು ಬೋಧಕನ ಕೆಲಸ. ಈ ಸೂತ್ರವನ್ನು

ವೆಂಕಟರಾಮಶಾಸ್ತ್ರಿಗಳವರು ಅನುಸರಿಸಿದ್ದದ್ದರಿಂದ ಅವರ ಶಿಷ್ಯರ ಸಾಹಿತ್ಯಜ್ಞಾನ ವ್ಯಾಕರಣ ಜ್ಞಾನಗಳು ನಿರ್ದುಷ್ಟವಾಗಿ, ಸಮ್ಯಕ್ಕಾಗಿರುತ್ತಿದ್ದವು.

ಶಾಸ್ತ್ರಿಗಳು ಕವಿತ್ವ ಮಾಡುತ್ತಿದ್ದದ್ದೂ ಉಂಟು. ತಮ್ಮ ಸ್ವಂತ ಸಂತೋಷಕ್ಕಾಗಿಯೂ ಅನುಸಂಧಾನಕ್ಕಾಗಿಯೂ ಸ್ತೋತ್ರಗಳನ್ನೂ ಕೀರ್ತನೆಗಳನ್ನೂ ರಚಿಸಿಕೊಂಡಿದ್ದರು. ಅವರು "ಪೂರ್ವದ್ವಾರಪುರೀ ಮಾಹಾತ್ಮ್ಯಮು" ಎಂಬ ಚಂಪೂಕಾವ್ಯವನ್ನೂ ತೆಲುಗಿನಲ್ಲಿ ಬರೆದಿದ್ದರು. ಅದರಲ್ಲಿ ಪ್ರೌಢವಾದ ಗದ್ಯ, ನಾನಾ ಜಾತಿಯ ವೃತ್ತಗಳು, ಕಂದ ಪದ್ಯ ಸೀಸಪದ್ಯಗಳು, ಕೋಲಾಟದ ಪದಗಳು- ಇವೆಲ್ಲ ಇದ್ದವು. ಆ ಕಾವ್ಯದ ಚೊಕ್ಕ ಪ್ರತಿ ತಯಾರುಮಾಡುವ ಕೆಲಸವನ್ನು ನನ್ನ ಸ್ನೇಹಿತ ವ್ಯಾಸರಾಯನಿಗೂ ನನಗೂ ಒಪ್ಪಿಸಿದ್ದರು. ನಾನು ಆತನಿಗೆ ಓದಿ ಹೇಳತಕ್ಕದ್ದು; ಆತ ಲಿಪಿಮಾಡತಕ್ಕದ್ದು. ಅದನ್ನು ಹಾಲುಕಾಗದದ ಮೇಲೆ ಹೊಳೆ ಹೊಳೆಯುವ ನೀಲಿ ಶಾಯಿಯಲ್ಲಿ ವ್ಯಾಸರಾಯ ಮುಕ್ತಾಫಲಾಕ್ಷರದಿಂದ ಬರೆದಿಟ್ಟ. ಅದು ಸುಮಾರು ೫೩ ವರ್ಷಗಳ ಹಿಂದೆ. ಆ ಪುಸ್ತಕ ಎಲ್ಲಿ ಹೋಯಿತೋ ಯಾರಿಗೂ ಗೊತ್ತಿಲ್ಲ. ಅದಕ್ಕಾಗಿ ನಾನು ಹುಡುಕಾಡಿದ್ದೂ ಸಾರ್ಥಕವಾಗುವಂತೆ ತೋರಲಿಲ್ಲ.

ಶಾಸ್ತ್ರಿಗಳವರು ರಾಮೋಪಾಸಕರು. ಪ್ರತಿ ವರ್ಷವೂ ಚೈತ್ರ ಮಾಸದಲ್ಲಿ ರಾಮೋತ್ಸವ ನಡಸಿ ಪಟ್ಟಾಭಿಷೇಕದ ದಿವಸ ಸಹಸ್ರ ಜನಕ್ಕೆ ಸಂತರ್ಪಣೆ ಮಾಡಿಸುತ್ತಿದ್ದರು. ಆ ಸಂತರ್ಪಣೆಗಾಗಿ ವರ್ಷವೆಲ್ಲ ಆಗಾಗ ಊರೂರು ಸುತ್ತಿ ಸಾಮಗ್ರಿಯನ್ನು ಶೇಖರ ಮಾಡುತ್ತಿದ್ದರು. ಅವರು ಎಲ್ಲಿ ಹೋದರೂ ಒಂದು ಗೋಣಿ ಚೀಲವನ್ನು ಹಿಡಿದಿರುತ್ತಿದ್ದರು. ಯಾರು ಏನು ಕೊಟ್ಟರೂ "ಶ್ರೀರಾಮಾರ್ಪಣ" ಎಂದು ಹೇಳಿಕೊಂಡು ಅದರಲ್ಲಿ ತುಂಬಿ ಸೋಮೇಶ್ವರ ದೇವಸ್ಥಾನದ ಬಳಿಯ ತಮ್ಮ ಮಂಟಪಕ್ಕೆ ತರುತ್ತಿದ್ದರು. ಶಾಸ್ತ್ರಿಗಳು ಬಂದು ಕೇಳಿದರೆ ಯಾರೂ ಇಲ್ಲವೆನ್ನುತ್ತಿರಲಿಲ್ಲ. ಕೆಲ ಕೆಲವರು ಅಕ್ಕಿ, ಬೇಳೆ, ಗೋಧಿಹಿಟ್ಟು, ಬೆಲ್ಲ ಮೊದಲಾದ ದಿನಸುಗಳನ್ನು ತಮ್ಮ ತಮ್ಮ ಶಕ್ತಿಯಿದ್ದಂತೆ ಕೊಡುತ್ತಿದ್ದರು. ಕೆಲವರು ಸೌದೆ ತರಕಾರಿ ಮೊದಲಾದವನ್ನು ಕೊಡುತ್ತಿದ್ದರು. ಕೆಲವರು ಹಚ್ಚಿದೆಲೆ ದೊನ್ನೆ ಕಟ್ಟುಗಳನ್ನು ಕೊಡುತ್ತಿದ್ದರು. ಕೆಲವರು ದ್ರವ್ಯವನ್ನು ಕೊಡುತ್ತಿದ್ದರು. ಕೆಲವರು ಎರಡುಮೂರು ಬೆಲ್ಲದ ಮುದ್ದೆಯನ್ನೋ, ಎರಡು ಕೊಳಗ ಬತ್ತವನ್ನೋ, ಹತ್ತು ತೆಂಗಿನಕಾಯನ್ನೋ ಮೂಟೆ ಕಟ್ಟಿರಿಸಿ ಅದರ ಮೇಲೆ "ಶಾಸ್ತ್ರಿಗಳದು-ಶ್ರೀರಾಮಾರ್ಪಿತ" ಎಂದು ಅರ್ಧಾಣೆ ದಕ್ಷಿಣೆಯೊಡನಿಟ್ಟು ಕಾದಿರುತ್ತಿದ್ದರು. ಹೀಗೆ ಸಂಗ್ರಹಿಸಿ ಬಂದದ್ದನ್ನೆಲ್ಲ ಶಾಸ್ತ್ರಿಗಳವರು ಸೋಮೇಶ್ವರ ದೇವಸ್ಥಾನದ ಬಳಿಯ ಒಂದು ಮಂಟಪದಲ್ಲಿ ದಾಸ್ತಾನು ಇರಿಸುತ್ತಿದ್ದರು.

ಸಂತರ್ಪಣೆಯ ದಿವಸ ಸಾವಿರಕ್ಕಿಂತ ಹೆಚ್ಚಾಗಿಯೇ ಜನ ಸೇರುತ್ತಿತ್ತು. ಅದರಲ್ಲಿ ಹೆಂಗಸರೂ ಮಕ್ಕಳು ಇರುತ್ತಿದ್ದರು. ಅಡಿಗೆ ಮಾಡುವವರು ತಮ್ಮ ಮಾಮೂಲು ಕೂಲಿಯನ್ನು ತೆಗೆದುಕೊಳ್ಳದೆ ಶಾಸ್ತ್ರಿಗಳು ಕೊಟ್ಟಷ್ಟರಿಂದ ಸಂತುಷ್ಟರಾಗುತ್ತಿದ್ದರು. ಊಟಕ್ಕಾಗಿ ಬಂದವರಲ್ಲಿಯೇ ಕೆಲವರು ಬಡಿಸಲು ಸಿದ್ಧರಾಗುತ್ತಿದ್ದರು. ಮೂರು ನಾಲ್ಕು ಸಾರಿ ಪಂಕ್ತಿ ಬೀಳುತ್ತಿತ್ತು. ಹೋಳಿಗೆ ಪಾಯಸ ಚಿತ್ರಾನ್ನ ಸಹಿತವಾಗಿ ಒಳ್ಳೆಯ ಭೋಜನವಾಗುತ್ತಿತ್ತು. ಶಾಸ್ತ್ರಿಗಳು ಸಾಲು ಸಾಲಿಗೂ ಹೋಗಿ ಉಪಚಾರ ಹೇಳಿ ಅತಿಥಿಗಳನ್ನು ಆದರಿಸುತ್ತಿದ್ದರು. ಭೋಜನಾನಂತರ ಎಲ್ಲರೂ ಗುಡಿಯ ಹೊರಗಡೆ ತಾಂಬೂಲಕ್ಕಾಗಿ ದಯಮಾಡಿಸಬೇಕೆಂದು ಪ್ರಾರ್ಥಿಸುತ್ತಿದ್ದರು. ಬಂದವರಿಗೆಲ್ಲ ದೊಡ್ಡವರಿಗೆ ತಾಂಬೂಲದೊಡನೆ ಅರ್ಧರ್ಧಾಣೆ ದಕ್ಷಿಣೆ, ಹುಡುಗರಿಗೆಲ್ಲ ತಲಾ ಕಾಲು ಕಾಲಾಣೆ ದಕ್ಷಿಣೆ ಕೊಡುತ್ತಿದ್ದರು. ಅದು ಮುಗಿದ ಮೇಲೆ ಶಾಸ್ತ್ರಿಗಳು ತಮ್ಮ ಉಗ್ರಾಣದ ಕೊಠಡಿಯಲ್ಲಿದ್ದ ಸಾಮಾನುಗಳು ಯಾವದ್ವಿಶಿಷ್ಟವನ್ನೂ ಹೊರಗೆ ತಂದಿರಿಸಿಕೊಂಡು-

“ಬೆಲ್ಲ ಒಂದು ಮುದ್ದೆ ಮಿಕ್ಕಿದೆ. ಯಾರಾದರೂ ತೆಗೆದುಕೊಳ್ಳಬಹುದು” -ಎನ್ನುವರು.

ಯಾರು ಕೈ ಹಿಡಿದದ್ದು ಅವರಿಗೆ ಮೊದಲು ಕಾಣಿಸಿತೋ ಅವರ ಕೈಯಲ್ಲಿ ಅದನ್ನಿಟ್ಟು ಒಂದು ಕಾಲಾಣೆ ಇಟ್ಟು “ಶ್ರೀರಾಮಾರ್ಪಣ” ಎನ್ನುವರು.

“ಇಲ್ಲಿದೆ ಒಂದು ಹಳೆಯ ಛತ್ರಿ. ಕಡ್ಡಿ ಮುರಿದುಹೋಗಿದೆ. ಅದನ್ನು ಹಾಕಿಸಿ ಕೊಂಡರೆ ಉಪಯೋಗಕ್ಕೆ ಬರುತ್ತದೆ. ಯಾರಿಗಾದರೂ-”

ಕೈ ಹಿಡಿದವರಿಗೆ ಅದನ್ನು ದಕ್ಷಿಣೆ ಸಹಿತ ಕೊಟ್ಟು “ಶ್ರೀರಾಮಾರ್ಪಣ" ಎನ್ನುವರು.

“ದೊನ್ನೆ ಕಟ್ಟು ಅರ್ಧ ಮಿಕ್ಕಿದೆ. ಹತ್ತು ಹನ್ನೆರಡು ದೊನ್ನೆ ಇರಬಹುದು. ಬೇಕಾದರೆ-”

ಮೇಲಿನಂತೆ “ಶ್ರೀರಾಮಾರ್ಪಣ”

“ಇದೊಂದು ಪಾದರಕ್ಷೆ. ಮಡಿಪಲ್ಲಿಯಲ್ಲಿ ಯಾರಲ್ಲೊ ಕೇಳಿ ತಂದದ್ದು. ಸ್ವಲ್ಪ ಕಿತ್ತುಹೋಗಿದೆ. ಸರಿಮಾಡಿಸಿಕೊಂಡರೆ ಉಪಯೋಗಕ್ಕೆ ಬರುತ್ತದೆ-”

ಇದೂ ಮೇಲಿನಂತೆ “ಶ್ರೀರಾಮಾರ್ಪಣ.”

“ಹತ್ತು ಬೆರಣಿ ಮಿಕ್ಕಿದೆ. ಬೇಕಾದವರು-”

ಯಥಾಪ್ರಕಾರ ಶ್ರೀರಾಮಾರ್ಪಣ.

ಶಾಸ್ತ್ರಿಗಳು ಹೀಗೆ ಎಲ್ಲ ಸಾಮಾನನ್ನೂ ಕೈಯಲ್ಲಿದ್ದ ಎಲ್ಲ ಕಾಸುಗಳನ್ನೂ ಅಲ್ಲಿಯೇ ಹಂಚಿಬಿಟ್ಟು ಕೈತೊಳೆದುಕೊಳ್ಳುವರು.

ಒಂದಾನೊಂದು ವರ್ಷ ಸಂತರ್ಪಣೆಯ ದಿವಸ ಶಾಸ್ತ್ರಿಗಳ ಕುಟುಂಬ ಪಾರ್ವತಮ್ಮನವರು ಅವರ ಸಮಾರಾಧಾನೆಯ ಉಗ್ರಾಣದಲ್ಲಿದ್ದ ಒಂದು ಬೆಲ್ಲದುಂಡೆಯನ್ನು ಒಡೆದು ತಮ್ಮ ಮೊಮ್ಮಗುವಿಗೆ ಕೊಟ್ಟರು. ಅದನ್ನು ಶಾಸ್ತ್ರಿಗಳು ನೋಡಿ- “ಇದೇನು, ಯಾಚನೆ ಮಾಡಿ ತಂದು ಮುಡುಪಾಗಿಟ್ಟಿದ್ದ ಪದಾರ್ಥವನ್ನು ಹಾಗೆ ಸ್ವಂತಕ್ಕೆ ಉಪಯೋಗಿಸಿಕೊಳ್ಳಬಹುದೆ?” ಎಂದು ಆಕ್ಷೇಪಿಸಿದರು.

ಆಕೆ- “ನೀವಂತೂ ಮಕ್ಕಳ ಕೈಯಲ್ಲಿ ಒಂದು ಕಾಸಿಟ್ಟ ಪಾಪಕ್ಕೆ ಹೋಗಲಿಲ್ಲ. ಒಂದು ಚೂರು ತಿಂಡಿ ಕೊಟ್ಟವರಲ್ಲ. ಯಾರೋ ಕೊಟ್ಟದನ್ನು ನಾನು ಮಗುವಿಗೆ ಕೊಟ್ಟರೆ ನಿಮಗೇನು ನಷ್ಟ ಆದದ್ದು? ಮಕ್ಕಳು ದೇವರ ಹಾಗಲ್ಲವೆ?” -ಎಂದು ಕೇಳಿದಳು.

ಶಾಸ್ತ್ರಿಗಳು- “ನಿನ್ನ ಮೊಮ್ಮಕ್ಕಳು ಮಾತ್ರವೇ ದೇವರೋ?” -ಎಂದು ಹೇಳುತ್ತಾ ಆ ಸುತ್ತಮುತ್ತ ಇದ್ದ ಹತ್ತು ಹದಿನೈದು ಹುಡುಗರನ್ನು ಕಲೆ ಹಾಕಿ, “ಇವರು ದೇವರಲ್ಲವೋ?” ಎಂದು ಕೇಳಿದರು.

ಮುದುಕ ಮುದುಕಿಯರಿಬ್ಬರಿಗೂ ಕೊಂಚ ಬಿಸಿಬಿಸಿ ಮಾತಾಯಿತು. ಕಡೆಗೆ ಶಾಸ್ತ್ರಿಗಳು- “ನಿನ್ನ ಬಾಯಿ ಈ ನಡುವೆ ಬಿರುಸಾಗತ್ತ ಬಂತು. ಇನ್ನು ನಿನ್ನ ಕೈಯ ಊಟ ಉಪಚಾರ ನನಗೆ ಬೇಕಾಗಿಲ್ಲ” ಎಂದು ಬಿಟ್ಟರು.

ಅಂದಿನಿಂದ ಮುಂದಕ್ಕೆ ಶಾಸ್ತ್ರಿಗಳು ಸ್ವಯಂಪಾಕಿಗಳಾದರು.

ಬೆಳಿಗ್ಗೆ ೫ ಘಂಟೆಯಿಂದ ೮-೯ ಘಂಟೆಯವರೆಗೆ ಪಾಠ ಹೇಳುವರು. ಅನಂತರ ಕುಂಟೆಗೆ ಹೋಗಿ ಬಟ್ಟೆಯೊಗೆದು ಸ್ನಾನಮಾಡಿ ಕೃಷ್ಣಾಜಿನದಲ್ಲಿದ್ದ ಮಡಿಯನ್ನುಟ್ಟು ಸಂಧ್ಯಾದಿ ನಿತ್ಯಕರ್ಮ ಮುಗಿದ ಬಳಿಕ ಅಂಜನೇಯ ದೇವಾಲಯಕ್ಕೆ ಹೋಗುವರು. ಅಲ್ಲಿ ಒಂದು ವಿವಿಕ್ತವಾದ ಸ್ಥಳದಲ್ಲಿ ಕುಳಿತು ೧೨ ಘಂಟೆಯವರೆಗೆ ಶ್ರೀಮದ್ರಾಮಾಯಣ ಪಾರಾಯಣ ಮಾಡುವರು. ಪಾರಾಯಣ ಕಾಲದಲ್ಲಿ ಅವರನ್ನು

ನೋಡಿದವರು ಅವರಿಗೆ ನತ್ತಿ ಇತ್ತೆಂಬುದನ್ನು ನಂಬುತ್ತಿರಲಿಲ್ಲ. ಹಾಗೆ ಅವಿಚ್ಛಿನ್ನ ಧಾರೆಯಾಗಿ ಹರಿದು ಬರುತ್ತಿತ್ತು ಅವರ ಮುಖದಿಂದ ಕಾವ್ಯೋಚ್ಚಾರಣೆ.

ಇಷ್ಟರೊಳಗಾಗಿ ಆ ಗುಡಿಗೆ ಬರುತ್ತಿದ್ದ ವೈಶ್ಯರೂ ಇತರ ಭಕ್ತರುಗಳೂ ಶಾಸ್ತ್ರಿಗಳವರ ಬಳಿಗೆ ಬಂದು ನಮಸ್ಕಾರ ಮಾಡಿ ಒಂದು ಕುಂಬಳಕಾಯಿ ಹೋಳು, ಒಂದು ತೆಂಗಿನ ಹೋಳು, ಎರಡು ಬಾಳೆಹಣ್ಣು, ನಾಲ್ಕು ಚೇಪೆಹಣ್ಣು-ಹೀಗೆ ಅವರವರಿಗೆ ಶಕ್ಯವಿದ್ದದ್ದನ್ನು ಶಾಸ್ತ್ರಿಗಳಿಗೆ ಒಪ್ಪಿಸುತ್ತಿದ್ದರು. ಶಾಸ್ತ್ರಿಗಳು ಅದನ್ನು ಮನೆಗೆ ತಂದು, ತಮಗೆ ಬೇಡವಾದದ್ದನ್ನು ಇತರರಿಗೆ ಕೊಟ್ಟುಬಿಟ್ಟು ತಮ್ಮ ಸ್ವಂತಕ್ಕೆ ಒಂದು ಕುಂಬಳ ಹೋಳು, ಅದರ ಜೊತೆಗೆ ಒಂದಿಷ್ಟು ಕೊಬ್ಬರಿ; ಅಥವಾ ಒಂದೆರಡು ಬಾಳೆಹಣ್ಣು, ಒಂದು ತೆಂಗಿನ ಹೋಳು, ಒಂದಿಷ್ಟು ಬೆಲ್ಲ-ಇಷ್ಟು ಮಾತ್ರವನ್ನು ಇರಿಸಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಪ್ರತಿನಿತ್ಯವೂ ಆ ಕುಂಬಳಕಾಯನ್ನು ಬೇಯಿಸಿ ಪಲ್ಯಮಾಡಿ ಸೇವಿಸಿ ಅದರಮೇಲೆ ಕೊಂಚ ಮಜ್ಜಿಗೆ ತೆಗೆದುಕೊಳ್ಳುತ್ತಿದ್ದರು. ಅವರಿಗೆ ವೈದ್ಯಶಾಸ್ತ್ರದ ಜ್ಞಾನವೂ ಇದ್ದದ್ದರಿಂದ, ಯಾವುದೋ ಒಂದು ಚೂರ್ಣವನ್ನು ತಯಾರುಮಾಡಿಟ್ಟು ಕೊಂಡು ಕುಂಬಳಕಾಯಿ ಪಲ್ಯದ ಜೊತೆಗೆ ಬೆರೆಸಿಕೊಳ್ಳುತ್ತಿದ್ದರು. ಇಷ್ಟೇ ಅವರ ಆಹಾರ; ಅದು ೨೪ ಘಂಟೆಗೆ ಒಂದು ಸಲ.

ಇಲ್ಲಿಗೆ ಅಪರಾಹ್ನ ೩ ಘಂಟೆಯಾಗುತ್ತಿತ್ತು. ಆಮೇಲೆ ಅವರು ಅರ್ಚಕ ಕೃಷ್ಣಪ್ಪನವರ ಮನೆಗೆ ಬರುತ್ತಿದ್ದರು.

ಅರ್ಚಕ ಕೃಷ್ಣಪ್ಪನವರು ಆಂಜನೇಯ ದೇವಸ್ಥಾನದಲ್ಲಿ ಹಿಂದೆ ಅರ್ಚನೆ ಮಾಡುತ್ತಿದ್ದು ಈ ಕಾಲಕ್ಕೆ ನಿವೃತ್ತರಾಗಿದ್ದ ವೃದ್ಧರು. ಅವರೂ ಸಂಸ್ಕೃತ ಆಂಧ್ರಗಳಲ್ಲಿಯೂ ಆಗಮ ಶಾಸ್ತ್ರಗಳಲ್ಲಿಯೂ ಪಾಂಡಿತ್ಯ ಪಡೆದಿದ್ದವರು. ಅವರ ಮಗ ಶಾಮದಾಸರೆಂಬವರು ನಮ್ಮ ಶಾಸ್ತ್ರಿಗಳವರಲ್ಲಿ ಸಾಹಿತ್ಯ ಪಾಠ ಮಾಡಿ, ಹರಿಕಥೆ ಪುರಾಣಗಳಲ್ಲಿ ಹೆಸರು ಮಾಡಿಕೊಂಡಿದ್ದರು.

ಕೃಷ್ಣಪ್ಪನವರ ಮನೆಯ ಮುಂದುಗಡೆ ಒಂದು ಕಲ್ಲು ಬೆಂಚು ಇರುತ್ತಿತ್ತು. ಆ ಮನೆ ಪೂರ್ವಾಭಿಮುಖವಾಗಿದ್ದದ್ದರಿಂದ ಅಪರಾಹ್ಣದಲ್ಲಿ ಆ ಬೆಂಚಿನ ಮೇಲೆ ನೆರಳು ಬಿದ್ದು ತಂಪಾಗಿರುತ್ತಿತ್ತು. ಕೃಷ್ಣಪ್ಪನವರೂ ಶಾಸ್ತ್ರಿಗಳೂ ಅದರ ಮೇಲೆ ಪಕ್ಕಪಕ್ಕದಲ್ಲಿ ಕುಳಿತುಕೊಳ್ಳುತ್ತಿದ್ದರು. ಅವರ ಮುಂದೆ ಎರಡು ಸಣ್ಣ ಜಾಯಿಕಾಯಿ ಪೆಟ್ಟಿಗೆ; ಇವರ ಮುಂದೆಯೂ ಅಂಥಾದ್ದೆರಡು ಪೆಟ್ಟಿಗೆ. ಇವರ ಮುಂದಿನ ಒಂದು ಪೆಟ್ಟಿಗೆಯಲ್ಲಿಯೂ ಅವರ ಮುಂದಿನ ಒಂದು ಪೆಟ್ಟಿಗೆಯಲ್ಲಿಯೂ ಗಜ್ಜುಗಕ್ಕಿಂತ ಕೊಂಚ ದೊಡ್ಡದಾದ ಜೇಡಿಮಣ್ಣಿನ ಒಣ ಗುಳಿಗೆಗಳು ತುಂಬಿರುತ್ತಿದ್ದವು. ಬಹುಶಃ ಒಂದೊಂದು ಸಾವಿರ ಇರಬಹುದು.

ಕೃಷ್ಣಪ್ಪನವರೂ ಶಾಸ್ತ್ರಿಗಳವರೂ ಒಂದೊಂದಾಗಿ ಗುಳಿಗೆಯನ್ನೆತ್ತಿ "ಓಂ ಶ್ರೀರಾಮಾಯನಮಃ" ಎಂದು ಹೇಳಿ ಖಾಲಿಯಿದ್ದ ಪೆಟ್ಟಿಗೆಗೆ ಹಾಕುವರು. ಅದು ಭರ್ತಿಯಾದ ಮೇಲೆ ಆದರಿಂದ ಪುನಃ "ಓಂ ಶ್ರೀ ರಾಮಾಯ ನಮಃ" ಎಂದು ಹೇಳುತ್ತ ಒಂದೊಂದು ಗುಳಿಗೆಯನ್ನಾಗಿ ತೆಗೆದು ಮೊದಲನೆಯ ಪೆಟ್ಟಿಗೆಗೆ ಹಾಕುವರು. ಹೀಗೆ ದಿನಕ್ಕೆ ಐದು ಸಲವೋ ಆರು ಸಲವೋ ಹತ್ತು ಸಲವೋ ಈ ಪೆಟ್ಟಿಗೆಯಿಂದ ಆ ಪೆಟ್ಟಿಗೆಗೆ, ಅದರಿಂದ ಇದಕ್ಕೆ ಗುಳಿಗೆಗಳು ಬದಲಾಯಿಸುತ್ತಿದ್ದುವು. ಅಷ್ಟು ಸಾವಿರ ಸಾರಿ ರಾಮ ಮಂತ್ರೋಚ್ಚಾರಣೆಯಾಯಿತೆಂದು ಅವರಿಗೆ ಲೆಕ್ಕ. ಈ ಜಪದ ನಡುನಡುವೆ ಬೀದಿಯಲ್ಲಿ ಹೋಗುತ್ತಿದ್ದ ಯಾರಾದರೂ ಮಾತನಾಡಿಸಿದರೆ ಅವರೊಡನೆ ಮಾತು, ಕುಶಲ ಪ್ರಶ್ನೆ, ಹಿತಬೋಧನೆ ನಡೆಯುತ್ತಿತ್ತು. ಒಂದೊಂದು ಸಾರಿ ಅವರಿಬ್ಬರೇ ಯಾವುದೋ ಒಂದು ಶ್ಲೋಕವನ್ನೋ ಶ್ರುತಿವಾಕ್ಯವನ್ನೋ ಪುರಾಣ ಸಂದರ್ಭವನ್ನೋ ಎತ್ತಿಕೊಂಡು ವ್ಯಾಖ್ಯಾನ ಮಾಡುತ್ತಿದ್ದದ್ದೂ ತರ್ಕಿಸುತ್ತಿದ್ದದ್ದೂ ಉಂಟು. ಹೀಗೆ ಆ ಜಪದ ನಡುನಡುವೆ ಲೋಕಹಿತ ಪ್ರಸಂಗವೂ ಶಾಸ್ತ್ರಜಿಜ್ಞಾಸೆಯೂ ಕಾವ್ಯರಸಾಸ್ವಾದನೆಯೂ ಜರುಗುತ್ತಿದ್ದವು.

ಶಾಸ್ತ್ರಿಗಳೂ ಕೃಷ್ಣಪ್ಪನವರೂ ಕಡೆಯವರೆಗೂ ಹೀಗೆಯೇ ಬಾಳಿದರು. ಶಾಸ್ತ್ರಿಗಳು ಸ್ವಯಂಪಾಕಿಗಳಾದಮೇಲೆ ಎರಡು ಮೂರು ವರ್ಷಗಳೊಳಗಾಗಿ ಅವರ ಪತ್ನಿ ತೀರಿಕೊಂಡರು. ಶಾಸ್ತ್ರಿಗಳು ಆಮೇಲೆ ೧೦-೧೨ ವರ್ಷ ಇದ್ದರು. ಹಿಂದಿನಂತೆ ಸ್ವಯಂ ಭೃತ್ಯರಾಗಿಯೇ-ಅನ್ಯಾಪೇಕ್ಷೆಯಿಲ್ಲದೆಯೇ-ನಿಯಮ ನಿಷ್ಠರಾಗಿ ಬದುಕಿದರು. ಅವರು ಹಣ ಸಂಪಾದಿಸಲಿಲ್ಲ, ಮನೆ ಕಟ್ಟಿಕೊಳ್ಳಲಿಲ್ಲ, ಶಾಲು ಹೊದೆಯಲಿಲ್ಲ. ಬಿರುದು ಹೊರಲಿಲ್ಲ, ಯಾವುದಕ್ಕೂ ಆಶೆಪಡಲಿಲ್ಲ; ಯಾವುದೂ ಅವರಿಗೆ ಬೇಕೆನಿಸಲಿಲ್ಲ. ಮುರುಕು ಮನೆ, ಹರಕು ಪಂಚೆ-ಅಷ್ಟರಲ್ಲಿಯೇ ನೆಮ್ಮದಿಯಾಗಿದ್ದರು. ಅದು ಅಪ್ರಸಿದ್ಧ ಜೀವನ. ಅಂಥ ಅಪ್ರಸಿದ್ಧ ನೆಮ್ಮದಿಯನ್ನು ಬಯಸುವವರು ಯಾರಾದರೂ ಇಂದಿನ ಲೋಕದಲ್ಲುಂಟೆ? ಮಿಕ್ಕವರಿಗೆ ಈ ಶಾಸ್ತ್ರಿಗಳ ಚರಿತ್ರೆ ಒಣ ಹುಚ್ಚಿನ ಕಥೆ ತಾನೆ?

# ೧೪

# ಶಿವಪಿಚ್ಚೈ ಮೊದಲಿಯಾರ್

ಸುಮಾರು ೩೫ ವರ್ಷಗಳ ಹಿಂದೆ ನಾನು ಒಂದು ಹಳೆಯ ಮನೆಯನ್ನು ದುರಸ್ತು ಮಾಡಿಸುತ್ತಿದ್ದೆ. ಮನೆಯ ಮುಂಭಾಗದ ಮಾಳಿಗೆ ಶಿಥಿಲವಾಗಿತ್ತು. ಅದನ್ನು ಕೀಳಿಸಿ ಸರಿಪಡಿಸುವ ಕೆಲಸವನ್ನು ಒಬ್ಬ ಒಟ್ಟು ಗುತ್ತಿಗೆದಾರನಿಗೆ ಒಪ್ಪಿಸಿದ್ದೆ. ಆ ಮನೆಯ ಕೆಲವು ಭಾಗಗಳು ಅತಂತ್ರವಾಗಿದ್ದರೂ, ತಲಬಾಗಲು ಭದ್ರವಾಗಿ ಲಕ್ಷಣವಾಗಿತ್ತು. ಅದು ೫೦-೬೦ ವರ್ಷಗಳ ಹಿಂದಿನಿಂದ ಬಂದಿದ್ದದ್ದು. ಆ ಬಾಗಿಲನ್ನು ಕದಲಿಸದೆ ಇದ್ದಂತೆಯೇ ಬಿಡಬೇಕೆಂದು ಆ ಕಂಟ್ರಾಕ್ಟುದಾರನಿಗೂ ನನಗೂ ಒಪ್ಪಿಗೆಯಾಗಿತ್ತು. ಆದರೆ ಕೆಲಸದ ಅವಸರದಲ್ಲಿ ಆತನು ಆ ಬಾಗಿಲನ್ನೂ ಅದರ ಚೌಕಟ್ಟನ್ನೂ ಹೊರಕ್ಕೆ ತೆಗೆಯಬೇಕಾದ ಕಾರಣ ತೋರಿಬಂತು. ಹಾಗೆ ತೆಗೆದಮೇಲೆ ಅದನ್ನು ಹಿಂದಿದ್ದಂತೆಯೇ ಮರಳಿ ಕೂಡಿಸಿ ಕೊಡುವುದಾಗಿ ಆತ ಭರವಸೆಕೊಟ್ಟಿದ್ದ.

ಬಾಗಿಲನ್ನು ಪುನಃ ಸೇರಿಸಬೇಕಾದ ವೇಳೆ ಬಂದಾಗ ಕೆಲಸಗಾರರು ಬಾಗಿಲ ಚೌಕಟ್ಟನ್ನು ಅದರ ಸ್ಥಳದಲ್ಲಿ ನಿಲ್ಲಿಸಿ ಅದರ ಎರಡು ಪಕ್ಕಗಳಲ್ಲಿಯೂ ಗೋಡೆ ಕಟ್ಟುತ್ತಿದ್ದರು. ಗೋಡೆ ಒಂದು ಮೊಳದುದ್ದ ಎದ್ದಮೇಲೆ ನಾನು ಚೌಕಟ್ಟಿನೊಳಕ್ಕೆ ಅದರ ಹಳೆಯ ಕದಗಳು ಹಿಂದಿನಂತೆ ಹೊಂದಿಕೊಳ್ಳುತ್ತವೋ ಇಲ್ಲವೋ ನೋಡಬೇಕೆಂದೆ. ಕಂಟ್ರಾಕ್ಟುದಾರನು "ಹೊಂದಿಕೊಳ್ಳದೆ ಏನು ಮಾಡುತ್ತದೆ ಸ್ವಾಮಿ?" ಎಂದು ಹೇಳಿ ಕೆಲಸವನ್ನು ಮುಂದೆ ಸಾಗಿಸಬೇಕೆಂದಿದ್ದ. ನಾನು ಅದಕ್ಕೆ ಒಪ್ಪದೆ ಅಡ್ಡಿಮಾಡಿದಮೇಲೆ ಕೆಲಸಗಾರರು ಆ ಎರಡು ಕದಗಳನ್ನೂ ತಂದು ಬಾಗಿಲವಾಡದ ಕೂರುಗಳಿಗೆ ಸೇರಿಸಿದರು.

ಕದಗಳನ್ನು ಮುಚ್ಚಹೋದಾಗ ಅವು ಹಿಂದಿನಂತೆ ಕೂಡಲಿಲ್ಲ. ಬಾಗಿಲ ಚೌಕಟ್ಟನ್ನು ನಿಲ್ಲಿಸುವುದರಲ್ಲಿ ಏನೋ ತಪ್ಪಿರಬೇಕೆಂದು ನಾನು ಅನುಮಾನಿಸಿದೆ. ಕಂಟ್ರಾಕ್ಟುದಾರನು "ಅದರಲ್ಲೇನೂ ತಪ್ಪಿಲ್ಲ; ಬಾಗಿಲ ರೆಕ್ಕೆಗಳಲ್ಲಿ ಹೆಚ್ಚು ಕಡಮೆ ಇರಬಹುದು. ಅದನ್ನು ಉಳಿ ಸವರಿಯೋ, ತೋಪಡಾ ಹಿಡಿದೋ ಸರಿಪಡಿಸಿದರಾಯಿತು" ಎಂದ. ಈ ಸಲಹೆ ನಾನು ಒಪ್ಪಲಾರದ್ದು. ಆ ಬಾಗಿಲುಗಳು ಭಾರವಾದ ದಪ್ಪನೆಯ ತ್ಯಾಗದ ಮರದವು. ಒಳ್ಳೆಯ ಕೆತ್ತನೆಯ ಕೆಲಸದಿಂದ ಅಂದವಾಗಿದ್ದವು. ೬೦-೭೦ ವರ್ಷಗಳಿಂದ

ಸುಲಭವಾಗಿ ಕೆಲಸಮಾಡುತ್ತಿದ್ದ ಆ ವಸ್ತುವಿಗೆ ಈಗ ರೂಪ ವಿಕಾರಮಾಡಬೇಕೆಂಬುದು ನನಗೆ ಸರಿ ತೋರಲಿಲ್ಲ.

ಮಾತುಗಳು ಕೊಂಚ ಬಿರುಸಾಗಿ ನಡೆದವು. ಆ ಹೊತ್ತಿಗೆ ಸರಿಯಾಗಿ ಬೀದಿಯಲ್ಲಿ ಒಂದು ಸಣ್ಣ ಗುಂಪು ನೆರೆಯಿತು. ಆ ಗುಂಪಿನಲ್ಲಿ ಒಬ್ಬ ಮುದುಕ ನಗುಮುಖದಿಂದ ನಿಂತು ನೋಡುತ್ತಿದ್ದ. ನಾನು ಒಂದು ಕ್ಷಣ ಆತನನ್ನು ದೃಷ್ಟಿಸಿ ನೋಡಿ, ಆತನ ಬಳಿಗೆ ಹೋಗಿ- "ನೀವು ಪಿಚ್ಚೈ ಮೊದಲಿಯಾರ್ರು ಅಲ್ಲವೆ?" ಎಂದು ಕೇಳಿದೆ. ಆತ "ಹೌದು ಸ್ವಾಮಿ, ನಿಮಗೆ ಗುರ್ತು ತಿಳಿಯಿತೆ?" ಎಂದು ಹೇಳಿದರು. ನಾನು "ಸುಲಭವಾಗಿ ತಿಳಿಯಲಿಲ್ಲ, ಸ್ವಲ್ಪ ಯೋಚಿಸಿದ ಮೇಲೆ ತಿಳಿಯಿತು. ಬನ್ನಿ ಈ ಬಾಗಿಲನ್ನು ಸ್ವಲ್ಪ ನೋಡಿ" ಎಂದು ಕರೆದೆ. ಆತ, "ಆಗಿನಿಂದ ನೋಡುತ್ತಿದ್ದೇನೆ ಸ್ವಾಮಿ" ಎಂದು ಹೇಳಿ ಬಾಗಿಲವರೆಗೆ ಬಂದು ಕಂಟ್ರಾಕ್ಟ್‌ದಾರನ ಕಡೆ ತಿರುಗಿ, "ಒಂದು ದಾರ ಇದ್ದರೆ ಕೊಡಿ" ಎಂದು ಕೇಳಿದರು. ದಾರ ತನ್ನ ಕೈಗೆ ಬಂದಕೂಡಲೆ ಮೊದಲಿಯಾರರು ಅದನ್ನು ಬಾಗಿಲುವಾಡದ ಎಡಗಡೆಯ ಕೆಳಮೂಲೆಯಿಂದ ಬಲಗಡೆಯ ಮೇಲ್ಮೂಲೆಗೆ ಅಳತೆ ಹಿಡಿದು, "ಮೇಸ್ತ್ರಿಗಳೇ ಗುರ್ತುಮಾಡಿಕೊಳ್ಳಿ" ಎಂದರು. ಮೇಸ್ತ್ರಿ ಆಯಿತು ಎನ್ನುತ್ತಲೆ, ಮೊದಲಿಯಾರರು ಅದೇ ದಾರವನ್ನು ಬಲಗಡೆಯ ಕೆಳಮೂಲೆಯಿಂದ ಎಡಗಡೆಯ ಮೇಲ್ಮೂಲೆಗೆ ಹಿಡಿದು, "ಮೇಸ್ತ್ರಿಗಳೇ, ಈಗ ನೋಡಿ" ಅಂದರು. ಆ ಎರಡು ಅಳತೆಗಳಿಗೂ ಒಂದು ಅರೆಕಾಲು ಅಂಗುಲದಷ್ಟು ವ್ಯತ್ಯಾಸವಿತ್ತೆಂದು ಗೋತ್ತಾಯಿತು. ಕಂಟ್ರಾಕ್ಟುದಾರನು ಒಪ್ಪಿಕೊಂಡು ಹಳೆಯ ಗೋಡೆಕಟ್ಟನ್ನು ಕೀಳಿಸಿ ಪುನಃ ಅ ದ್ವಾರಬಂಧವನ್ನು ಅಲ್ಲಿರಿಸಿ ಗೋಡೆ ಕಟ್ಟಿಸಿದ. ಕದಗಳು ಆಗ ಸರಿಯಾಗಿ ಕುಳಿತವು. ಪಿಚ್ಚೈ ಮೊದಲಿಯಾರರ ಕೆಲಸದ ಮರ್ಮಜ್ಞತೆ ಅಷ್ಟು ದೊಡ್ಡದು. ದೂರದ ನೋಟದಿಂದಲೇ ಅವರು ಚೌಕಟ್ಟಿನ ಸರಿ ಮಟ್ಟವನ್ನು ಅಳೆಯಬಲ್ಲವರಾಗಿದ್ದರು. ಅದು ಕಣ್ಣಿನ ಸೂಕ್ಷ್ಮ; ಬಹುಕಾಲದ ಕೆಲಸದ ಅನುಭವದಿಂದ ಅವರಿಗೆ ಬಂದಿದ್ದದ್ದು. ಆತ್ಮಸಾಕ್ಷಿ ಬಿಟ್ಟು ನೂರು ವರ್ಷ ಕೆಲಸ ಮಾಡಿದ್ದರೂ ಆ ದೃಷ್ಟಿ ಸೂಕ್ಷ್ಮತೆ ಬರಲಾರದು. ಕಾರ್ಯಯೋಗ್ಯತೆ ಚೆನ್ನಾಗಿ ಬೆಳೆಯಬೇಕಾದರೆ ಕಾರ್ಯ ಮಾಡುವುದರಲ್ಲಿ ಪ್ರಾಮಾಣಿಕತೆ ಇರಬೇಕು.

ಪಿಚ್ಚೈ ಮೊದಲಿಯಾರರ ನಿಜವಾದ ಹೆಸರೇನೋ ಅವರು ಹೇಳುತ್ತಿರಲಿಲ್ಲ. "ಪಿಚ್ಚೈ ಎಂದರೆ ತಮಿಳಿನಲ್ಲಿ ಭಿಕ್ಷೆ. ತಾವು ಶಿವನಿಂದ ಭಿಕ್ಷೆ ಪಡೆಯುತ್ತಿದ್ದವರೆಂದು ಅವರ ಭಾವನೆ. ಆದದ್ದರಿಂದ ಅವರು "ಶಿವಭಿಕ್ಷೆ" ಮೊದಲಿಯಾರರು.

ಅವರು ಮಿತಭಾಷಿ. ತಮಿಳು, ತೆಲಗು, ಕನ್ನಡ-ಈ ಮೂರು ಭಾಷೆಗಳಲ್ಲಿ ಚೆನ್ನಾಗಿ ಮಾತನಾಡುವರು, ಸರಸವಾಗಿ ಕೊಂಚ ಹಾಸ್ಯವಿಟ್ಟು ಮಾತನಾಡುವರು.

ಅವರ ಚರಿತ್ರೆಯನ್ನು ನಾನು ಹಿಂದೆ ಕೇಳಿದ್ದೆ ಮತ್ತು ಅವರನ್ನು ನೋಡಿದ್ದೆ. ಅದು ಅಲ್ಲಿಗೆ ೧೫-೨೦ ವರ್ಷಗಳ ಹಿಂದಿನ ಮಾತು. ಅವರು ಹಲಸೂರಿನವರು. ನನ್ನ ಸಮೀಪದ ಬಂಧುಗಳೊಬ್ಬರು ಅದೇ ಊರಿನವರು. ಅವರಿಗೆ ಇವರು ತುಂಬಾ ಬೇಕಾದವರು. ಆ ಕಾಲದಲ್ಲಿ ಹಲಸೂರಿನಲ್ಲಿ "ವಕುಳಾಭರಣ ಪರದೇಶಿ" ಎಂಬ ಸಾಧುಗಳೊಬ್ಬರು ಇದ್ದರಂತೆ. ಅವರು ವಿರಕ್ತರು ಮತ್ತು ಭಗವದ್ಭಕ್ತರು. ಅವರಲ್ಲಿಗೆ ನನ್ನ ಬಂಧುಗಳೂ ಈ ಪಿಚ್ಚೈ ಮೊದಲಿಯಾರರೂ ಆಗಾಗ ಹೋಗಿಬರುತ್ತಿದ್ದರಂತೆ. "ಪರದೇಶಿ" ಎಂದರೆ ಅನ್ಯದೇಶೀಯನು ಎಂಬುದು ಸಾಧಾರಣವಾದ ಅರ್ಥ. ಉತ್ತಮ ದೇಶದವನು-ಪರಲೋಕದವನು-ಎಂಬುದು ಇನ್ನೊಂದು ಅರ್ಥ. ಹಲಸೂರಿನ "ಪರದೇಶಿ" ಇಹಲೋಕ ವ್ಯಾಪಾರದಿಂದ ವಿಮುಖನಾಗಿ ಪರತತ್ತ್ವದಲ್ಲಿ ಆಸಕ್ತನಾಗಿದ್ದವನು. ಆತನು ವೇದಾಂತ ತತ್ತ್ವವನ್ನು ತನ್ನಲ್ಲಿ ಬಂದವರಿಗೆ ತಿಳಿಯ ಹೇಳುತ್ತಿದ್ದನಂತೆ. ಆತನು ನಮ್ಮ ಮೊದಲಿಯಾರರಿಗೆ ಏನನ್ನು ಉಪದೇಶಮಾಡಿದ್ದನೋ ಅದನ್ನು ವಿಚಾರಿಸುವ ಅವಕಾಶ ನನಗೆ ದೊರೆಯಲಿಲ್ಲ. ಆ ಯೋಚನೆಯೂ ನನಗೆ ದೊರೆಯಲಿಲ್ಲ. ಆ ಯೋಚನೆಯೂ ನನಗೆ ಬರಲಿಲ್ಲ. ನಾನು ಅವರನ್ನು ಕೇಳುವ ಸಾಹಸ ಮಾಡಿದ್ದಿದ್ದರೆ ಅವರು ಆ ರಹಸ್ಯವನ್ನು ನನಗೆ ಪ್ರಕಟಪಡಿಸುತ್ತಿದ್ದರೆಂಬುದೂ ಸಂದೇಹದ ಮಾತೇ.

ಪಿಚ್ಚೈ ಮೊದಲಿಯಾರರು ಗಾರೆಯ ಕೆಲಸದಿಂದ ಜೀವನ ಮಾಡುತ್ತಿದ್ದವರು. ವಾಸ್ತುಶಿಲ್ಪ ವಿದ್ಯೆಯಲ್ಲಿ ಅವರಿಗೆ ಚೆನ್ನಾಗಿ ತಿಳಿಯದಿದ್ದ ಭಾಗವಾವುದೂ ಇರಲಿಲ್ಲ. ಬಡವನ ಮಣ್ಣುಮಾಳಿಗೆಯಿಂದ ಹಣವಂತನ ಭಾರೀ ಬಂಗಲೆಯವರೆಗೂ ಎಂಥ ಮನೆ ಕಟ್ಟುವ ಕೆಲಸವನ್ನಾದರೂ ಸೊಗಸಾಗಿ ಮಾಡುವ ಸಾಮರ್ಥ್ಯ ಅವರಿಗಿತ್ತು. ಕೆಲಸಕ್ಕಿಟ್ಟುಕೊಂಡವರಿಗೆ ವೆಚ್ಚ ಕಡಮೆಮಾಡಿ ಅನುಕೂಲ ಹೆಚ್ಚುಮಾಡಬೇಕೆಂಬುದು ಮೊದಲಿಯಾರರ ಆಲೋಚನೆ. ಕಲ್ಲು, ಮಣ್ಣು, ಸುಣ್ಣ, ಗಾರೆ, ಇಟ್ಟಿಗೆ, ಮರ, ಕಬ್ಬಿಣ-ಈ ಎಲ್ಲ ಸಾಮಾನುಗಳ ಮಾಹಿತಿಯೂ ಆತನಿಗಿತ್ತು. ಗೋಡೆ ಕಟ್ಟುವುದು, ಹೆಂಚು ಹೊದಿಸುವುದು, ತಾರಸಿ ಹಾಕುವುದು, ನೆಲಕ್ಕೆ ಚದರ ಬಿಲ್ಲೆ ಹಾಸುವುದು, ನಯ ಗಾರೆ ಉಜ್ಜುವುದು-ಈ ಯಾವ ಕೆಲಸವನ್ನು ಬೇಕಾದರೂ ತೃಪ್ತಿಕರವಾಗಿ ಮಾಡಿ ಮುಗಿಸಲು ಆತನನ್ನು ಧಾರಾಳವಾಗಿ ನಂಬಬಹುದಾಗಿತ್ತು. ಮನೆಯ ಕೊಠಡಿಗಳ ಉದ್ದ ಅಗಲಗಳು, ಕಿಟಕಿ ಬಾಗಿಲುಗಳ ಅಳತೆಗಳು, ಅವುಗಳ ಸ್ಥಾನಗಳು-ಈ ಎಲ್ಲ ವಿವರಗಳನ್ನೂ ಕುರಿತು ಆತ ಒಳ್ಳೊಳ್ಳೆಯ ಸಲಹೆ ಕೊಡುತ್ತಿದ್ದನಂತೆ. ಆದದ್ದರಿಂದ ಆತನನ್ನು ಬಹುಜನ

ಅಪೇಕ್ಷಿಸುತ್ತಿದ್ದರು. ಆದರೆ ಈ ಕಾರಣದಿಂದ ಆತ ತನ್ನ ಕೂಲಿಯ ದರವನ್ನೇನೂ ಹೆಚ್ಚಿಸಿರಲಿಲ್ಲ. ಆ ಕಸಬಿನಲ್ಲಿ ಎಲ್ಲರಿಗೂ ಸಾಮಾನ್ಯವಾಗಿದ್ದ ಕೂಲಿಯ ದರದಿಂದಲೇ ಆತ ತೃಪ್ತನಾಗಿದ್ದ.

ಪಿಚ್ಚೈ ಮೊದಲಿಯಾರರ ಬಂಧುಗಳಲ್ಲಿ ಕೆಲವರು ದೊಡ್ಡ ದೊಡ್ಡ ಸರಕಾರೀ ಹುದ್ದೆಗಳಲ್ಲಿದ್ದರು; ಕೆಲವರು ವ್ಯಾಪಾರದಲ್ಲಿ ಹಣಮಾಡಿ ಹೆಸರುವಾಸಿಯಾಗಿದ್ದರು. ಆದರೆ ಪಿಚ್ಚೈ ಮೊದಲಿಯಾರರು ಆ ಜನದಲ್ಲಿ ಬಳಕೆಮಾಡಿಕೊಂಡಿರಲಿಲ್ಲ. ಅವರ ಹೆಸರನ್ನೆತ್ತುತ್ತಲೇ ಇರಲಿಲ್ಲ. ಅವರಿಗೆ ಹಲಸೂರಿನಲ್ಲಿ ಪಿತ್ರಾರ್ಜಿತವಾದ ಒಂದು ಮನೆಯೂ ಕೊಂಚ ಜಮೀನೂ ಇದ್ದುವಂತೆ. ಬೆಂಗಳೂರಿಗೆ ಪ್ಲೇಗು ಬಂದ ಹೊಸದರಲ್ಲಿ- ಸುಮಾರು ೧೮೯೯-೧೯೦೦ರಲ್ಲಿ ಪ್ಲೇಗಿನ ಎರಡನೆಯ ಹೊಡೆತದಲ್ಲಿ, ಪಿಚ್ಚೈ ಮೊದಲಿಯಾರರಿಗೆ ಸಂಸಾರ ನಷ್ಟವಾಯಿತು. ಇದ್ದ ಇಬ್ಬರು ಮಕ್ಕಳೂ ಹೋದರು. ಆಮೇಲೆ ಒಂದು ವರ್ಷದೊಳಗಾಗಿ ಆತನ ಹೆಂಡತಿ ತೀರಿಕೊಂಡಳು. ಮೊದಲಿಯಾರರಿಗೆ ಪುನಃ ಸಂಸಾರ ಕಟ್ಟಿಕೊಳ್ಳುವ ಇಷ್ಟ ಬರಲಿಲ್ಲ. ಎರಡು ಮೂರು ವರ್ಷ ತಾವು ಒಬ್ಬರೇ ಇದ್ದುಕೊಂಡು ಕೂಲಿಗೆ ದುಡಿದು ಬದುಕಿದರು. ಆಮೇಲೆ ಏನಾಯಿತೋ ಏನೋ, ಒಂದು ದಿನ ತಮ್ಮ ಮನೆ ಆಸ್ತಿಗಳನ್ನು ತಮಗಿದ್ದ ಒಬ್ಬ ತಂಗಿಗೆ ದಾನವಾಗಿ ಕೊಟ್ಟುಬಿಟ್ಟರು. ತಮ್ಮ ಬಳಿ ಒಂದು ೧೫ ರೂಪಾಯಿ ಮಾತ್ರ ಇಟ್ಟುಕೊಂಡು ದೇಶಸಂಚಾರ ಹೊರಟರು. ಅವರ ಸಾಮಾನು, ಮೈಮೇಲಿದ್ದ ಬಟ್ಟೆಗಳ ಜೊತೆಗೆ-ಒಂದು ಕಂಬಳಿ, ಒಂದೆರಡು ಹಳೆಯ ಧೋತ್ರಗಳು, ಎರಡು ಕರಣೆಗಳು, ಒಂದು ತೂಕದ ಗುಂಡು, ಒಂದು ರಸಮಟ್ಟ, ಒಂದು ಸಣ್ಣ ಮೂಲೆಮಟ್ಟ, ಒಂದು ಒಂದೂವರೆ ಮೊಳದ ಮಟ್ಟ ಕಟ್ಟಿಗೆ-ಇಷ್ಟನ್ನಿಟ್ಟುಕೊಂಡು ರೈಲಿನಲ್ಲಿ ಕುಳಿತು ಹೊರಟರು.

ಪ್ರಯಾಣದ ರೀತಿ ಹೀಗೆ: ಬೆಂಗಳೂರಿನಿಂದ ಹೊರಟವರು, ಮಸಲಾ, ಜಾಲಾರ್ ಪೇಟೆಯಲ್ಲಿ ಇಳಿಯುವರು. ಅಲ್ಲಿ ಊರೊಳಕ್ಕೆ ಹೋಗಿ, ಕಟ್ಟಡದ ಕೆಲಸ ನಡೆಯುತ್ತಿರುವ ಕಡೆ ನಿಂತು, “ಕೂಲಿ ಕೆಲಸ ಏನಾದರೂ ಇದೆಯೆ?” ಎಂದು ಕೇಳುವರು: ಅಲ್ಲಿ ಉಂಟೆಂದರೆ ಎರಡುಮೂರು ದಿನ ಕೆಲಸಮಾಡಿ. ಹೋಟಲಿನಲ್ಲಿಯೋ ಸ್ವಯಂಪಾಕದಿಂದಲೋ ಊಟಮಾಡಿ, ಮೂರುನಾಲ್ಕು ರೂಪಾಯಿ ಮಿಗಿಸಿ ಸೊಂಟಕ್ಕೆ ಸಿಕ್ಕಿಸಿಕೊಂಡು ಅಲ್ಲಿಂದ ಮುಂದೆ ಹೊರಡುವರು. ರೈಲಿನಲ್ಲಿ ಕೂಡುವಾಗ ಸಾಮಾನ್ಯವಾಗಿ ಎಲ್ಲಿಗೆ ಹೋಗುವುದೆಂಬುದನ್ನು ಗೊತ್ತುಮಾಡಿಕೊಂಡಿರುತ್ತಿರಲಿಲ್ಲ. ಜೊತೆಯಲ್ಲಿದ್ದ ಪ್ರಯಾಣಿಕರನ್ನು ವಿಚಾರಿಸಿಕೊಂಡು ಎಲ್ಲಿ ಅನುಕೂಲವಿರಬಹುದೆಂದು ತನ್ನ ಮನಸ್ಸಿಗೆ ತೋಚಿದರೆ ಅಲ್ಲಿ ಇಳಿದುಬಿಡುವರು. ಅಲ್ಲಿ ದೇವಸ್ಥಾನವಿದ್ದರೆ ದೇವರ ದರ್ಶನ ಮಾಡುವರು. ಅಲ್ಲಿ ಒಂದೆರಡು ದಿನ ನಿಲ್ಲಬೇಕೆಂದು ಮನಸ್ಸು ಬಂದರೆ ಅಲ್ಲಿಯೇ ಉಳಿಯುವರು. ಇಲ್ಲದಿದ್ದರೆ ಮುಂದಕ್ಕೆ ಹೊರಡುವರು. ಅವರ ಮುಖ್ಯೋದ್ದೇಶವು

ನಾನಾ ಪುಣ್ಯಕ್ಷೇತ್ರಗಳ ದರ್ಶನ. ಅದಕ್ಕೆ ಸಾಧಕವಾಗಿ ಮಾರ್ಗವಶಾತ್ ಆದಷ್ಟು ಕೂಲಿಯ ಸಂಪಾದನೆ. ಇದು ಅವರ "ಪ್ರೋಗ್ರಾಂ". ಸೊಂಟದಲ್ಲಿ ಹಣ ಮುಗಿದಿದ್ದರೆ ಕೆಲಸಕ್ಕಾಗಿ ಇಳಿಯುವರು. ಹಣದ ಅವಶ್ಯಕತೆಯ ಒತ್ತಾಯವಿಲ್ಲದಿದ್ದರೆ ದೇವಾಲಯಗಳನ್ನು ಹುಡುಕಿಕೊಂಡು ಹೊರಡುವರು.

ಮೊದಲಿಯಾರರು ಹೀಗೆ ನಮ್ಮ ದೇಶದ ಎಲ್ಲ ಪ್ರಸಿದ್ಧ ದಿವ್ಯಕ್ಷೇತ್ರಗಳಿಗೂ ಯಾತ್ರೆ ಮಾಡಿದ್ದರು. ಕಾಶಿ ರಾಮೇಶ್ವರಗಳಿಗೆ ಮೂರು ಮೂರು ಸಲ ಹೋಗಿದ್ದರು. ಪ್ರಯಾಗ, ಪೂರಿ, ಪಂಢರಾಪುರ, ಕಂಚಿ, ತಿರುಪತಿ, ಕಾಳಹಸ್ತಿ, ಪಳನಿ, ಮಧುರೆ, ಶ್ರೀರಂಗ, ಅಹೋಬಲ, ಭದ್ರಾಚಲ, ಶ್ರೀಶೈಲ-ಈ ಎಲ್ಲ ಕಡೆಗಳಿಗೂ ಹೋಗಿ ಒಂದೊಂದು ಕಡೆ ಮೂರು ಮೂರು ದಿನ, ಐದೈದು ದಿನ ಇದ್ದು ದೇವತಾ ಸೇವೆ ನಡಸಿ ಬಂದರು. ಅವರ ಈ ಯಾತ್ರೆಯ ಸಂಕ್ಷೇಪ ವರ್ಣನೆಯನ್ನು ನಾನು ಅವರ ಬಾಯಿಂದಲೇ ಕೇಳಿದ್ದೇನೆ.

ಮೊದಲಿಯಾರರ ಕಾರ್ಯ ನಿಯಮಗಳನ್ನು ಕುರಿತು ಒಂದು ಮಾತು ಹೇಳದಿದ್ದರೆ ಅವರ ಸ್ವರೂಪವನ್ನು ತಿಳಿಸಿದಂತೆ ಆಗದು. ಕೆಲಸಕ್ಕೆ ಬರುವ ವೇಳೆ, ಕೆಲಸ ಮುಗಿಸುವ ವೇಳೆ, ಕೆಲಸ ನಡಸುವ ವೇಳೆ-ಈ ಮೂರು ಬಾಬುಗಳಲ್ಲಿಯೂ ಅವರು ತುಂಬಾ ಕಟ್ಟು ನಿಟ್ಟಿನವರು. ಊರಿನಲ್ಲಿ ಗಡಿಯಾರವೊಂದೂ ಇಲ್ಲದೆ ಇದ್ದರೆ ಪಿಚ್ಚೈ ಮೊದಲಿಯಾರರು ಕೆಲಸ ಹಿಡಿಯುವ ಅಥವಾ ಕೆಲಸ ಬಿಡುವ ಘಳಿಗೆಯಿಂದ ವೇಳೆ ಎಷ್ಟೆಂಬುದನ್ನು ತಿಳಿಯಬಹುದಾಗಿತ್ತು. ಅವರ ಜನ್ಮದೊಳಗಾಗಿ ಅವರನ್ನು "ಯಾಕೆ ಇಷ್ಟು ಹೊತ್ತಾಗಿ ಬಂದೆ?" ಎಂದಾಗಲಿ, "ಏನು ಇಷ್ಟವಸರ?" ಎಂದಾಗಲಿ ಯಾರೂ ಎಂದೂ ಕೇಳಿದ್ದಿಲ್ಲ.

ಆತ ಬೆಳಿಗ್ಗೆ ೫ ಘಂಟೆಗೆ ಏಳುವನು. ಕೆಲವು ತಮಿಳು ಸ್ತೋತ್ರಪಾಠಗಳನ್ನು ಹೇಳಿ ಅಡಿಗೆಮಾಡಿಕೊಂಡು ಅದನ್ನು ತನ್ನ ಕೈಬುಟ್ಟಿಯಲ್ಲಿಟ್ಟುಕೊಂಡು ಹೊರಡುವನು. ಮೊದಲು ಸೋಮೇಶ್ವರಸ್ವಾಮಿಯ ಗುಡಿಗೆ ಬಂದು, ಒಂದು ಪ್ರದಕ್ಷಿಣೆಮಾಡಿ ನಮಸ್ಕಾರ ಸಲ್ಲಿಸಿ, ಕೆಲಸಕ್ಕೆ ಬರುವನು. ಆಳು ಎತ್ತರವಾದವನು. ಆರಡಿಗೆ ಮೇಲಿರುವವನು. ಮೈಕಟ್ಟು ತೆಳ್ಳನೆಯದು. ತಂತಿಯಂಥಾದ್ದು. ಆದದ್ದರಿಂದ ಬೇಗ ಬೇಗ ನಡೆಯುವುದು ಆತನಿಗೆ ಸ್ವಾಭಾವಿಕವಾಗಿತ್ತು.

ಕೈಗೆ ಕರಣೆ ತೆಗೆದುಕೊಂಡನೆಂದರೆ ಅದು ಸರಸರನೆ ಎಡೆಬಿಡದೆ ಆಡುತ್ತಿತ್ತು. ಜೊತೆಯಲ್ಲಿ ಕೆಲಸಮಾಡುತ್ತಿದ್ದ ಚಿಕ್ಕ ವಯಸ್ಸಿನವರಿಗೆ ಆತ- "ನೀವೂ ನಾವೂ ಒಂದೇ ಘಳಿಗೆ ಮೊದಲುಮಾಡಿದೆವು. ಈಗ ಅರ್ಧ ದಿನದ ಕೆಲಸವಾಯಿತು. ನಿಮ್ಮ ಗೋಡೆ ಎಷ್ಟು ಬೆಳೆದಿದೆ, ನನ್ನದು ಎಷ್ಟು ಬೆಳೆದಿದೆ, ನೋಡಿಕೊಳ್ಳಿ" ಎನ್ನುವನು. ಮೊದಲಿಯಾರರು ನಿಲುಗಡೆ ಇಲ್ಲದೆ ಮತ್ತು ಹೆಚ್ಚು ಮಾತುಕತೆ ಇಲ್ಲದೆ

ಕೆಲಸಮಾಡಿ, ೧೨ ಘಂಟೆಯಾಯಿತೆಂದರೆ ಕರಣೆಯನ್ನು ಕೆಳಗಿಟ್ಟು ಕೈತೊಳೆದುಕೊಂಡು ಊಟದ ಬುಟ್ಟಿಯೊಡನೆ ಹೊರಟುಬಿಡುವರು.

ನಾನು ಒಂದು ಸಲ ಅವರನ್ನು- "ನೀವು ಊಟಕ್ಕೆ ಯಾಕೆ ದೂರ ಹೋಗುತ್ತೀರಿ? ಇಲ್ಲಿಯೇ ಮಾಡಬಹುದಲ್ಲ? ಬೇಕಾದರೆ ಒಂದು ಕೋಣೆ ಬಿಡುವುಮಾಡಿಸುತ್ತೇನೆ" ಎಂದೆ.

ಮೊದಲಿಯಾರರು- "ಅದು ಬೇಡ ಸ್ವಾಮಿ. ನಾನು ಸ್ವಾಮಿಯ ಗುಡಿಯ ಹತ್ತಿರ ಹೋಗುತ್ತೇನೆ. ಅದೇನು ದೂರವಲ್ಲ. ಅಲ್ಲಿ ಕೊಳದಲ್ಲಿ ನೀರಿದೆ; ಸುತ್ತ ಮುತ್ತ ದೊಡ್ಡ ದೊಡ್ಡ ಮರಗಳಿವೆ; ಹೂ ಗಿಡಗಳಿವೆ. ಅಲ್ಲಿ ನೆರಳಿನಲ್ಲಿ ತಂಪಾಗಿ ಕುಳಿತು, ಒಂದು ಕ್ಷಣ ಶಿವಭಿಕ್ಷೆಯನ್ನು ಊಟಮಾಡುತ್ತೇನೆ. ಕೊಂಚ ಹೊತ್ತು ಶಾಂತವಾಗಿ ಕುಳಿತಿದ್ದು ಇಲ್ಲಿಗೆ ಬರಬಹುದು" ಎಂದು ಹೇಳಿದರು.

ಇದು ಅವರ ಅಂತರಂಗ. ಅವರಿಗೆ ಬೇಕಾಗಿದ್ದದ್ದು ಮನಶ್ಶಾಂತಿ. ಕೆಲಸ, ಕೂಲಿ, ಊಟ, ತೋಟ-ಇವೆಲ್ಲ ಆ ಮನಶ್ಶಾಂತಿಗೋಸ್ಕರ.

ಬೆಳಿಗ್ಗೆ ಹೇಗೆ ಹೊತ್ತಿಗೆ ಸರಿಯಾಗಿ ಬಂದರೋ ಸಂಜೆ ಹಾಗೆಯೇ ಹೊತ್ತಾದ ಕೂಡಲೆ ಕೆಲಸ ನಿಲ್ಲಿಸಿಬಿಡುವರು. ಇನ್ನೂ ಕೆಲಸಮಾಡಿರೆಂದು ಒತ್ತಾಯಪಡಿಸಲು ಅವರು ಅವಕಾಶ ಕೊಡುತ್ತಿರಲಿಲ್ಲ. ಅವರು ನಿಯಮವನ್ನು ಕರಾರಾಗಿ ನಡಸುತ್ತಿದ್ದದ್ದರಿಂದ ಅವರನ್ನು ಕೆಲಸಕ್ಕೆ ಇಟ್ಟುಕೊಂಡವರೂ ಆ ನಿಯಮಕ್ಕೆ ಒಳಪಡಬೇಕಾಗಿತ್ತು. ಮೈಗಳ್ಳತನವಿಲ್ಲದೆಯೂ ತಕ್ಕ ಸಾಮರ್ಥ್ಯದಿಂದಲೂ ಕೆಲಸಮಾಡುವವರ ವಿಷಯದಲ್ಲಿ ನಮಗೆ ಗೌರವ ಹುಟ್ಟುವುದು ಸ್ವಾಭಾವಿಕ ತಾನೆ?

ಒಂದು ಸಲ ಅವರು ಕಟ್ಟುತ್ತಿದ್ದ ಮನೆಗೆ ದ್ವಾರಬಂಧ ಪ್ರತಿಷ್ಠೆಮಾಡಿದ ಸಂದರ್ಭದಲ್ಲಿ ಪಿಚ್ಚೈ ಮೊದಲಿಯಾರರು ಆ ಮನೆಯ ಯಜಮಾನನನ್ನು ಕುರಿತು- "ಏನು ಸ್ವಾಮಿ, ಈ ಮನೆಯ ಜನ ಯಾರಾದರೂ ಹೊಸ್ತಿಲಿಗೆ ಪೂಜೆ ಮಾಡುವ ಇಷ್ಟವಿದ್ದರೆ ಮಾಡಲಿ; ಇಲ್ಲದಿದ್ದರೆ ನನ್ನನ್ನು ಮಾಡೆಂದರೆ ನಾನು ಮಾಡುತ್ತೇನೆ. ಅರಿಶಿನ ಕುಂಕುಮ ತರಿಸಿ" ಎಂದ. ಆ ಯಜಮಾನನು- "ಅದೇಕೆ ಹಾಗೆ ಹೇಳುತ್ತೀರಿ? ನಾವು ಬ್ರಾಹ್ಮಣರಲ್ಲವೆ? ನಾವು ಪೂಜೆ ಮಾಡುವುದಿಲ್ಲವೆ?" ಎಂದು ಕೇಳಿದ. ಅದಕ್ಕೆ ಉತ್ತರವಾಗಿ ಮೊದಲಿಯಾರರು- "ಅದು ಹೇಗೋ ಈ ಕಾಲದಲ್ಲಿ? ಎಲ್ಲಾ ವಿದ್ಯೆ ಕಲಿತವರು. ದೇವರಲ್ಲಿ ನಂಬಿಕೆ ಇದೆಯೋ ಇಲ್ಲವೋ! ಎಷ್ಟೋ ಮಂದಿ ಹೆಂಗಸರು ಅರಿಶಿನ ಕುಂಕುಮವನ್ನೇ ಇಟ್ಟುಕೊಳ್ಳುವುದಿಲ್ಲ!" ಎಂದುಬಿಟ್ಟರು. ಅಷ್ಟು ಹೊತ್ತಿಗೆ ಆ ಮನೆಯ ಹೆಣ್ಣುಮಕ್ಕಳು ಬಂದು ಹೊಸ್ತಿಲಿಗೂ

ಬಾಗಿಲ ಕಟ್ಟಿಗೂ ಅರಿಶಿನ ಕುಂಕುಮ ಪುಷ್ಪಾಕ್ಷತೆಗಳಿಂದ ಪೂಜೆಮಾಡಿದರು, ಮೊದಲಿಯಾರರು ಭಕ್ತಿಯಿಂದ ಕೈಮುಗಿದು- "ಇದು ಮನೆಗೊಳ್ಳೆಯದು" ಎಂದರು.

ನಾನು ಪ್ರಾರಂಭದಲ್ಲಿ ಹೇಳಿದ ಸಂಗತಿ ನಡೆದಾಗ್ಗೆ ಪಿಚ್ಚೈ ಮೊದಲಿಯಾರರಿಗೆ ವಯಸ್ಸು ಸುಮರು ೭೦ ಆಗಿದ್ದಿರಬಹುದು. ಆಮೇಲೆ ಅವರನ್ನು ನಾನು ಪುನಃ ಕಂಡಿಲ್ಲ. ನಾಲ್ಕಾರು ಸಾರಿ ಹಲಸೂರಿನಲ್ಲಿಯೂ ಇತರ ಕಡೆಯೂ ವಿಚಾರಿಸಿದೆ. ಅವರ ವರ್ತಮಾನವೇನೂ ತಿಳಿದುಬರಲಿಲ್ಲ. ನಾನು ಅವರನ್ನು- "ಮೊದಲಿಯಾರರೇ. ತಿರುಗಿ ನಿಮ್ಮನ್ನು ನೋಡುವುದು ಯಾವಾಗ?" ಎಂದು ಕೇಳಿದೆ. ಅವರು- "ಸ್ವಾಮಿ ಏರ್ಪಾಟುಮಾಡಿದಾಗ. ಮೊನ್ನೆ ನಿಮ್ಮನ್ನು ನಾನು ನೋಡುತ್ತೇನೆಂದು ಉದ್ದೇಶಮಾಡಿ ಬಂದನೆ? ನೀವು ನನ್ನನ್ನು ಹುಡುಕಿದಿರಾ? ಸಂದರ್ಭ ಏನೋ ಹಾಗೆ ಸೇರಿಬಂತು. ಅದೇ ಋಣಾನುಬಂಧ, ದೇವರ ಆಜ್ಞೆ" ಹೀಗೆಂದು ಉತ್ತರ ಹೇಳಿದರು. ನಾನು "ಇಲ್ಲಿಂದ ಇನ್ನು ಮುಂದೆ ಯಾವ ಯಾತ್ರೆ?" ಎಂದೆ. "ದೇವರು ಕರಸಿಕೊಂಡ ಕಡೆಗೆ" ಎಂದರು.

ಈ ನನ್ನ ಅನುಭವ, ಪುಸ್ತಕಗಳಿಂದ ದೊರೆತ ಅನುಭವಕ್ಕಿಂತ ದೊಡ್ಡದು; ನನಗೆ ಮರೆಯಲಾಗದ್ದು.

# ೧೫

# ಡಾಕ್ಟರ್ ಗುಂಡಣ್ಣ

ಗುಂಡಣ್ಣನವರನ್ನು ನೋಡಿದ್ದವರು ಯಾರೂ ಅವರನ್ನು ಮರೆತಿರುವುದು ಅಸಂಭವ; ಅಷ್ಟು ಮನೋಮುದ್ರಕವಾದದ್ದು ಅವರ ವ್ಯಕ್ತಿಮಹಿಮೆ. ಸುಮಾರು ೨೫-೩೦ ವರ್ಷಗಳ ಕಾಲ ಅವರ ಹೆಸರು ನೂರಾರು ಮನೆಗಳಲ್ಲಿ ಪ್ರತಿದಿನವೂ ನಚ್ಚುಮೆಚ್ಚಿನ ಮಾತಾಗಿತ್ತು. ರೋಗ ಪ್ರಸಂಗದಲ್ಲಿ ಮಾತ್ರವೇ ಅಲ್ಲ ಅವರ ನೆನಪು ಬರುತ್ತಿದ್ದದ್ದು; ಎಂಥ ವಿಶೇಷ ಮಾನವ ಪ್ರಸಂಗ ಒದಗಿದರೂ ಆಗ ಆಪ್ತ ಬಂಧುಗಳ ಸ್ಮರಣೆ ಬಂದಂತೆ ಗುಂಡಣ್ಣನವರ ಸ್ಮರಣೆ ಬರುತ್ತಿತ್ತು. ಅವರು ಜನಪ್ರಿಯರಾದ ವೈದ್ಯರಾಗಿದ್ದದ್ದು ನಿಜ. ಆ ವೃತ್ತಿಯಲ್ಲಿ ಅವರು ಹೆಸರುವಾಸಿಯಾಗಿದ್ದರು. ಆದರೆ ನಾವು ಈಗಲೂ ಇನ್ನೂ ಹೆಚ್ಚಾಗಿ ನೆನಸಿಕೊಳ್ಳುವುದು ಅವರ ಮಾನವೀಯ ಸದ್ಗುಣಗಳನ್ನು.

ಗುಂಡಣ್ಣನವರು ೧೦-೩-೧೯೩೮ರಲ್ಲಿ ಕಾಲಾಧೀನರಾದರು. ಆಗ್ಗೆ ಅವರಿಗೆ ೬೪ ವರ್ಷ ವಯಸ್ಸಾಗಿತ್ತು. ಅವರನ್ನು ಬಲ್ಲವರೆಲ್ಲರಿಗೂ ಆ ಮರಣವು ಆತ್ಮಬಂಧು ವಿಯೋಗದಂತೆ ಅನುಭವವಾಯಿತು.

ಗುಂಡಣ್ಣನವರ ನಿಜವಾದ ಹೆಸರು-ಎಸ್. ಆರ್.ನರಸಿಂಹಯ್ಯಂಗಾರ್. ಅವರು ಪ್ರಸಿದ್ಧವಾದ ಸೆಟ್ಲೂರ್ ಮನೆತನದವರು.

ಗುಂಡಣ್ಣನವರಲ್ಲಿ ಆಕರ್ಷಕವಾಗಿದ್ದ ಗುಣಗಳು ಮುಖ್ಯವಾಗಿ ನಾಲ್ಕು; (೧) ಸ್ನೇಹ ತತ್ಪರತೆ; (೨) ಹಾಸ್ಯನಯ; (೩) ಸಾಹಿತ್ಯಪ್ರೀತಿ; (೪) ಉಪಕಾರಶೀಲತೆ

ಗುಂಡಣ್ಣನವರಿದ್ದ ಕಡೆ ಒಂದು ಸಂಸ್ಥೆ. ಅವರು ಒಬ್ಬೊಂಟಿಯಾಗಿದ್ದ ಕ್ಷಣವೇ ಇಲ್ಲ. ಅಹರ್ನಿಶಿಯೂ ಇಬ್ಬರು ಮೂವರಾದರೂ ಸ್ನೇಹಿತರು ಅವರ ಜೊತೆಯಲ್ಲಿರುತ್ತಿದ್ದರು. ಅವರ “ರೆಲೈಯನ್ಸ್” ಔಷಧಾಲಯಕ್ಕೆ ಬರುತ್ತಿದ್ದವರಲ್ಲಿ ಚಿಕಿತ್ಸೆಗಾಗಿ ಬಂದವರು ಒಂದು ಭಾಗ ಮಾತ್ರ; ಇನ್ನೊಂದು ಭಾಗ-ಬಹುಶಃ ದೊಡ್ಡ ಭಾಗ-ಗುಂಡಣ್ಣನವರ ಮಾತುಕಥೆಗಳನ್ನು ಕೇಳುವ ಮತ್ತು ನೋಡುವ ಸಂತೋಷಕ್ಕಾಗಿ ಬರುತ್ತಿದ್ದರು.

ಗುಂಡಣ್ಣನವರು ರೋಗನಿದಾನ ಪರೀಕ್ಷೆಯಲ್ಲಿ ಸೂಕ್ಷ್ಮ ಸಾಮರ್ಥ್ಯವಂತರೆಂದು ಪ್ರಸಿದ್ಧಿ ಪಡೆದಿದ್ದರು. ಅವರ ವೈದ್ಯ ವಿದ್ಯಾಭ್ಯಾಸವಾದದ್ದು ಬೊಂಬಾಯಿಯಲ್ಲಿ. ಆದರೆ ಅವರು ಪದವೀ ಪಟ್ಟವನ್ನು ಸಂಪಾದಿಸಲಾಗಲಿಲ್ಲ. ಕಟ್ಟ ಕಡೆಯ ಪರೀಕ್ಷೆಯಲ್ಲಿ ಅವರಿಗೆ ಜಯ ಲಭಿಸದೆಹೋಯಿತು. ಒಂದೆರಡು ಸಲ ಪುನಃ ಪ್ರಯತ್ನ ಮಾಡಿದರು, ಕೃತಾರ್ಥರಾಗಲಿಲ್ಲ. ಬಳಿಕ ಧೈರ್ಯ ಮಾಡಿ ಸ್ವತಂತ್ರವಾಗಿ ರೆಲೈಯನ್ಸ್ ಚಿಕಿತ್ಸಾಲಯವನ್ನು ಪ್ರಾರಂಭಿಸಿದರು. ಎರಡು ಮೂರು ವರ್ಷಗಳ ತರುವಾಯ ಅವರಿಗೆ ಸರ್ಕಾರದ ವೈದ್ಯ ಇಲಾಖೆಯಲ್ಲಿ-ವೈದ್ಯ ಸಾಮಾಗ್ರಿಯ ಉಗ್ರಾಣದಲ್ಲಿ (Medical Stores) ಉದ್ಯೋಗವಾಯಿತು. ಕೆಲವು ತಿಂಗಳುಗಳ ಮೇಲೆ ಅವರನ್ನು ಅಲ್ಲಿಂದ ಪರಸ್ಥಳಕ್ಕೆ ವರ್ಗಮಾಡಿದಾಗ ಗುಂಡಣ್ಣನವರು ಸರ್ಕಾರದ ಸೇವೆಯನ್ನು ಸಾಕುಮಾಡಿಕೊಂಡರು. ಅವರು ಹಾಗೆ ಸರಕಾರದ ಕೆಲಸವನ್ನು ಬಿಟ್ಟುಬಿಟ್ಟಿದ್ದಕ್ಕೆ ಕಾರಣ, ನೂರಾರು ಮಂದಿಯ ಪ್ರಾರ್ಥನೆ. ಅವರು ಪರಸ್ಥಳಕ್ಕೆ ಹೊರಟು ಹೋದರೆ ತಮಗೆ ಒಬ್ಬ ಆಪದ್ಬಾಂಧವರು ಇಲ್ಲದಂತೆ ಆಗುತ್ತಿತ್ತೆಂದು ಆ ಜನದ ಅಂತರಂಗದ ನಂಬಿಕೆ.

ರೋಗಿಯ ಲಕ್ಷಣಗಳನ್ನು ನೋಡಿ ಅವನ ಚರಿತ್ರೆಯನ್ನು ತಿಳಿದು, ರೋಗ ಕಾರಣಗಳೆಂದು ತೋರಬಹುದಾದ ನಾಲ್ಕಾರು ಸಂಗತಿಗಳ ಪೈಕಿ ಇಂಥಾದ್ದೇ ಮೂಲ ಕಾರಣವಿರಬೇಕೆಂದು ನಿರ್ಣಯಿಸುವುದರಲ್ಲಿ ಗುಂಡಣ್ಣನವರು ಸೂಕ್ಷ್ಮ ವಿಮರ್ಶನ ಚತುರರು. ಜಡ್ಜಿಯಾದವನು ಕೋರ್ಟಿನಲ್ಲಿ ತನ್ನ ಮುಂದೆ ಬಂದ ಮೊಕದ್ದಮೆಯಲ್ಲಿ ಎರಡು ಪಕ್ಷಗಳವರೂ ಮುಂದಿಟ್ಟ ನಾಲ್ಕಾರು ವಾದಗಳಲ್ಲಿಯೂ ರುಜುವಾತುಗಳಲ್ಲಿಯೂ ಯಾವ ಯಾವುದಕ್ಕೆ ಎಷ್ಟೆಷ್ಟು ಬೆಲೆ ಕೊಡಬೇಕೆಂದು ತೂಕಮಾಡುವುದರಲ್ಲಿಯೂ, ಸತ್ಯಾಂಶಗಳನ್ನು ನಾನಾ ಕಡೆಗಳಿಂದ ಒಟ್ಟುಗೂಡಿಸುವುದರಲ್ಲಿಯೂ ಎಂಥ ಜಾಗರೂಕತೆಯನ್ನೂ ಯೋಜನ ಚತುರತೆಯನ್ನೂ ತೋರಿಸುತ್ತಾನೋ ಅಂಥ ಪ್ರಾಡ್ವಿವಾಕೀಯ ಗುಣಗಳನ್ನು ರೋಗಪರೀಕ್ಷೆಯಲ್ಲಿ ಗುಂಡಣ್ಣನವರು ತೋರಿಸುತ್ತಿದ್ದರೆಂದು ದೊಡ್ಡವರು ಹೇಳಿದ್ದನ್ನು ನಾನು ಕೇಳಿದ್ದೇನೆ. ಗುಂಡಣ್ಣನವರ ಸುತ್ತಮುತ್ತ ಯಾವಾಗಲೂ ಇಬ್ಬರು ಮೂವರಾದರೂ ಯುವಕ ವೈದ್ಯರುಗಳು ಇರುತ್ತಿದ್ದರು. ಅವರು ತಮ್ಮ ತಮ್ಮ ಕಾಲೇಜು ಪರೀಕ್ಷೆಗಳಲ್ಲಿ ಮೇಲ್ತರಗತಿಯಲ್ಲಿ ತೇರ್ಗಡೆ ಪಡೆದವರು. ಚಾಕಚಕ್ಯವುಳ್ಳವರು, ಮೇಧಾವಿಗಳು. ಇಂಥವರು ಗುಂಡಣ್ಣನವರನ್ನು ಆಶ್ರಯಿಸುತ್ತಿದ್ದದ್ದಕ್ಕೆ ಎರಡು ಕಾರಣ: ಒಂದನೆಯದು, ಗುಂಡಣ್ಣನವರ ರೋಗ ಪರೀಕ್ಷಾ ಕ್ರಮವನ್ನು ತಿಳಿದುಕೊಳ್ಳಬೇಕೆಂಬುದು; ಎರಡನೆಯದು, ಗುಂಡಣ್ಣನವರು ರೋಗಿಯ ವಿಷಯದಲ್ಲಿ ಅನುಸರಿಸುತ್ತಿದ್ದ ನಯವರ್ತನೆ (Manners) ತಿಳಿದುಕೊಳ್ಳಬೇಕೆಂಬುದು.

ಗುಂಡಣ್ಣನವರು ಸಾಮಾನ್ಯವಾಗಿ ಪ್ರತಿದಿನವೂ ಬೆಳಿಗ್ಗೆ ರೋಗಿಗಳ ಮನೆಗಳಿಗೆ ಹೋಗಿ ನೋಡಿಕೊಂಡು ತಮ್ಮ ಚಿಕಿತ್ಸಾಲಯಕ್ಕೆ ಬರುವ ವೇಳೆಗೆ ಸುಮಾರು ೮.೩೦-೯ ಘಂಟೆಯಾಗಿರುತ್ತಿತ್ತು. ಆ ವೇಳೆಗೆ ಅಲ್ಲಿ ೨೦-೨೫ ಮಂದಿಯಾದರೂ ಗುಂಪು ಸೇರಿರುತ್ತಿದ್ದರು. ಗುಂಡಣ್ಣನವರು ಬಂದ ಕೂಡಲೆ ಅವರನ್ನು ನಗಿಸಿ ಪ್ರಸನ್ನರನ್ನಾಗಿ ಮಾಡುವಂಥ ಯಾವುದಾದರೂ ಒಂದೆರಡು ಮಾತನ್ನಾಡಿ ಕೆಲಸಕ್ಕೆ ಕೂಡುತ್ತಿದ್ದರು. ಒಬ್ಬೊಬ್ಬರನ್ನು ಕರೆದು ಮಾತನಾಡಿಸುವ ವಿಧಾನ, ಮಧ್ಯೆ ಮಧ್ಯೆ ಲಘುಹಾಸ್ಯ-ಇದು ಮಿಕ್ಕವರಿಗೆ ಅವರ ಕಷ್ಟವನ್ನು ಹಗುರ ಮಾಡುತ್ತಿತ್ತು. ಗುಂಡಣ್ಣನವರು ಒಬ್ಬ ರೋಗಿಯನ್ನು ಪರೀಕ್ಷಿಸುತ್ತಿದ್ದ ಕಾಲದಲ್ಲಿ ಅಲ್ಲಿದ್ದ ಮಿಕ್ಕೆಲ್ಲ ರೋಗಿಗಳ ಕಡೆಗೂ ಆಗಾಗ ದೃಷ್ಟಿ ತಿರುಗಿಸಿ ಅವರ ಮುಖಲಕ್ಷಣಗಳನ್ನೂ ಅಂಗಾಂಗಚೇಷ್ಟೆಗಳನ್ನೂ ವೈದ್ಯದೃಷ್ಟಿಯಿಂದ ವೀಕ್ಷಿಸುತ್ತಿದ್ದರು. ಈ ವೀಕ್ಷಣ ಪರೀಕ್ಷೆ ಒಂದೊಂದು ಸಲ ಅರ್ಧ ಘಂಟೆ, ಒಂದು ಘಂಟೆ ನಡೆಯುತ್ತಿತ್ತು. ತಕ್ಕಷ್ಟು ಕಾಲ ಪರೀಕ್ಷಿಸದೆ ಆತುರದಲ್ಲಿ ಅವರು ಯಾರಿಗೂ ಔಷಧ ಕೊಡುತ್ತಿರಲಿಲ್ಲ.

ಒಂದು ದಿನ ಸಂಜೆ ಸುಮಾರು ೭ ಘಂಟೆ ಇರಬಹುದು. ಒಬ್ಬಾನೊಬ್ಬ ಮುಸಲ್ಮಾನ್ ಸಾಹುಕಾರರು ಒಂದು ಸೊಗಸಾದ ಖಾಸ್ ಜಟಕಾದಲ್ಲಿ ಬಂದು ಚಿಕಿತ್ಸಾಲಯದ ಮುಂದೆ ಇಳಿದು, ಬೊಬ್ಬೆಹಾಕುತ್ತ ಒಳಕ್ಕೆ ಹೆಜ್ಜೆಯಿಟ್ಟರು. ಹಿಂದುಸ್ತಾನಿಯಲ್ಲಿ "ಬಹಳ ನೋವು ಮಹಾರಾಯರೇ, ಬಹಳ ನೋವು" ಎಂದು ಕಿರಿಚಿದರು.

ಗುಂಡಣ್ಣ: (ಹಿಂದುಸ್ತಾನಿಯಲ್ಲಿ) "ಎಲ್ಲಯ್ಯ ನೋವು?"

ಸಾಹುಕಾರ: "ಬೆಟ್ಟನಲ್ಲಿ ಸ್ವಾಮಿ, ಬೆಟ್ಟನಲ್ಲಿ."

ಗುಂಡಣ್ಣ: "ಯಾವ ಬೆಟ್ಟನಲ್ಲಿ? ಎಲ್ಲಿಯ ಬೆಟ್ಟನಲ್ಲಯ್ಯ?" (ಎಲ್ಲರಿಗೂ ನಗು.)

ಸಾಹುಕಾರ: (ಎಡಗೈ ತೋರಿಸಿ) "ಈ ನಡುಬೆರಳಿನಲ್ಲಿ."

ಗುಂಡಣ್ಣನವರು ಆ ಬೆರಳನ್ನು ಹಿಡಿದು ನೋಡಿದರು. ಆಮೇಲೆ ಇನ್ನೊಂದು ದೊಡ್ಡ ಎಲೆಕ್ಟ್ರಿಕ್ ದೀಪವನ್ನು ಹಾಕಿನೋಡಿ-

“ಸಾಹುಕಾರರೆ, ಬೆಳಗ್ಗೆ ಬನ್ನಿ ನೋಡೋಣ. ಈಗ ದೀಪದ ಬೆಳಕಿನಲ್ಲಿ ಇದು ಚೆನ್ನಾಗಿ ಕಾಣಿಸುವುದಿಲ್ಲ” -ಎಂದರು.

ಸಾಹುಕಾರ: “ಈಗ ನಾನು ಸಾಯುತ್ತಿದ್ದೇನೆ….”

ಗುಂಡಣ್ಣ: “ಇಲ್ಲ, ನೀವು ಸಾಯುವುದಿಲ್ಲ. ನಾನು ಭರವಸೆ ಕೊಡುತ್ತೇನೆ, ಬೆಳಿಗ್ಗೆ ಬದುಕಿರುತ್ತೀರಿ.”

ಸಾಹುಕಾರ: “ಇಲ್ಲ ಸ್ವಾಮಿ. ಈಗ ನಾನು ರೈಲಿಗೆ ಹೊರಟಿದ್ದೇನೆ. ಬೆಳಿಗ್ಗೆ ಈ ಊರಲ್ಲಿರುವುದಿಲ್ಲ.”

ಗುಂಡಣ್ಣ: “ಹಾಗಾದರೆ ಆ ಬೆರಳನ್ನು-ದಲ್ಲಿ ಸಿಕ್ಕಿಸಿಕೊಳ್ಳಿ.”

ಅಲ್ಲಿದ್ದವರೆಲ್ಲರೂ ನಕ್ಕರು. ಸಾಹುಕಾರರಿಗೆ ಕೋಪ ಬಂತು. “ಏನು ಸ್ವಾಮಿ ಎಷ್ಟು ದಿವಸದಿಂದ ನಿಮ್ಮನ್ನು ನಂಬಿಕೊಂಡಿದ್ದೇನೆ! ಎಷ್ಟು ಸಲ ನಮ್ಮ ಮನೆಗೆ ಬಂದಿದ್ದೀರಿ! ಈಗ ನನಗೆ ಹೀಗೆ ಅವಮಾನ ಮಾಡ್ತೀರಲ್ಲ!”

ಗುಂಡಣ್ಣ: “ಕೋಪ ಬೇಡ ಸಾಹೇಬರೆ. ನಾನು ಹೇಳಿದ್ದು ತಪ್ಪು ಮಾತು ಏನೂ ಅಲ್ಲ. ಇಲ್ಲಿ ನಗುತ್ತಿರುವ ಬೇಕೂಪರಿಗೆ ಸಂದರ್ಭ ಗೊತ್ತಿಲ್ಲ. ನಿಮ್ಮ ಬೆಟ್ಟನಲ್ಲಿ ಏನೋ ಏಳುತ್ತಿದೆ. ಅದಕ್ಕೆ ತಕ್ಕ ಚಿಕಿತ್ಸೆಯಲ್ಲಿ ಮೂರು ಅಂಶಗಳು ಸೇರಿರಬೇಕು: ಉಷ್ಣ, ತೇವ, ಒತ್ತಡ (Heat, Moisture, Pressure). ಈ ಮೂರೂ ನಾನು ಹೇಳಿದ ಜಾಗದಲ್ಲಿ ಇರುತ್ತವೆ.”

ಈ ವಿವರಣೆಯನ್ನು ಕೇಳಿದಾಗ ಸಾಹುಕಾರರಿಗೂ ನಗು ಬಂತು. ಅವರು ಪ್ರಯಾಣವನ್ನು ಮುಂದಕ್ಕೆ ತಳ್ಳಿ ಮಾರನೆ ಬೆಳಿಗ್ಗೆ ಬರುವುದಾಗಿ ಒಪ್ಪಿದರು. ರಾತ್ರಿ ಬಿಸಿ ಬಿಸಿಯಾಗಿ ಪೋಲ್ಟಿಸ್ ಕಟ್ಟಿಕೊಳ್ಳಬೇಕೆಂದು ಡಾಕ್ಟರು ಹೇಳಿ ಕಳುಹಿಸಿದರು.

ನನಗೆ ಕೆಲವು ದಿವಸ ಸಂಜೆ ಸುಮಾರು ನಾಲ್ಕುಘಂಟೆ ಹೊತ್ತಿಗೆ ಹೊಟ್ಟೆಶೂಲೆ ಬರುತ್ತಿತ್ತು. ಅದಕ್ಕೆ ಕಾರಣ ಅಜೀರ್ಣವಿರಬಹುದೆಂದು ಊಹಿಸಿಕೊಂಡೆ. ನನ್ನ ಮಾಧ್ವ ಸ್ನೇಹಿತರೊಬ್ಬರ ಮನೆಯಲ್ಲಿ ಶ್ರೀಮದ್ಬೇಳೆಹುಳಿ, ಹಯಗ್ರೀವ-ಇವುಗಳನ್ನು ಧಾರಾಳವಾಗಿಯೇ ಸೇವಿಸಿದ್ದೆ. ಅದೇ ಕಾರಣವೆಂದು ತಿಳಿದು ವಿಧವಿಧವಾದ ಸ್ವಂತವೈದ್ಯಗಳನ್ನು ಮಾಡಿಕೊಂಡೆ. ನಾಲ್ಕಾರು ತೆರನಾದ ವಿರೇಚನಗಳು, ಕಾಪಟಗಳು, ಕಷಾಯಗಳು ಎಲ್ಲವನ್ನೂ ಅನುಭವಿಸಿದ್ದಾಯಿತು. ಹೀಗೆ ಸ್ವಂತವೈದ್ಯ ಮಾಡಿಕೊಂಡಷ್ಟೂ ಮನಸ್ಸಿನಲ್ಲಿ ಅಳುಕು ಹೆಚ್ಚಾಗಿ ಗುಂಡಣ್ಣನ ಬಳಿಗೆ ಹೋಗುವುದಕ್ಕೆ ಮನಸ್ಸು ಸಂಕೋಚಪಡುತ್ತಿತ್ತು. ಆದರೆ ಅಲ್ಲಿಗೇ

ಹೋಗಬೇಕೆಂದು ಮನೆಯ ಜನದ ಒತ್ತಾಯ ಬಲವಾಯಿತು. ಕಡೆಗೆ ಒಂದು ದಿನ ಬೆಳಗ್ಗೆ ರೆಲೈಯನ್ಸ್ ಚಿಕಿತ್ಸಾಲಯಕ್ಕೆ ಸುಮಾರು ೯ ಘಂಟೆಯ ವೇಳೆಗೆ ಹೋದೆ. ಬಹು ದಿನ ಅಲ್ಲಿಗೆ ಹೋಗದೆ ಇದ್ದದ್ದಕ್ಕೋಸ್ಕರ ಹಾಸ್ಯದ ಮಂಗಳಾರತಿ ಮಾಡಿಸಿಕೊಂಡು ಕುಳಿತೆ. ನನ್ನ ವ್ಯಾಧಿಯನ್ನು ವರ್ಣಿಸಿದೆ. ಘಂಟೆ ಹತ್ತಾಯಿತು, ಹನ್ನೊಂದಾಯಿತು, ಹನ್ನೆರಡೂ ಆಯಿತು. ಗುಂಡಣ್ಣನವರು ನನ್ನ ಕಡೆ ನೋಡಲಿಲ್ಲ. ಹನ್ನೆರಡಾದ ಮೇಲೆ ಎದ್ದು ಕತ್ತಿನ ಮೇಲೆ ಕೈಹಾಕಿ ತಮ್ಮ ಮನೆಗೆ ತಳ್ಳಿಕೊಂಡು ಹೋದರು.

"ಏನು ಇಷ್ಟು ಹೊತ್ತು ನನ್ನನ್ನು ಕೊಳೆಹಾಕಿಬಿಟ್ಟಿರಲ್ಲ!" ಎಂದೆ. "ನಿನ್ನ ಮುಖ ವಿಕಾರಗಳನ್ನೂ ನೀನು ಹೊಟ್ಟೆ ಕಿವಿಚಿಕೊಳ್ಳುವುದನ್ನೂ ನೋಡಿದರೆ ತಾನೆ ನಿನಗೆ ರೋಗವಿರುವುದು ಗೊತ್ತಾಗುವುದು?" ಎಂದರು. "ಔಷಧ ಕೊಡಲಿಲ್ಲವಲ್ಲ?" ಎಂದೆ. "ನೀನು ಊಟ ಮಾಡುವುದನ್ನು ಅಜಮಾಯಿಷಿ ಮಾಡಿದ ಮೇಲಲ್ಲವೆ ಔಷಧದ ಮಾತು?" ಎಂದರು.

ಈ ಸಂದರ್ಭದಲ್ಲಿ ಅವರ ಇನ್ನೊಂದು ಅವತಾರದಂತೆ ಅವರ ಜೊತೆಯಲ್ಲಿ ಇರುತ್ತಿದ್ದ ಒಬ್ಬ ಮಹನೀಯರನ್ನು ಸ್ಮರಿಸಬೇಕು. ಅವರು ಅಮೃತೂರಿನ ಶ್ರೀನಿವಾಸಯ್ಯಂಗಾರ್ಯರು. ಅವರನ್ನು ಗುಂಡಣ್ಣನವರೂ ಮಿತ್ರರೂ ನಾರದರೆಂದು ಕರೆಯುತ್ತಿದ್ದರು. ಶ್ರೀನಿವಾಸಯ್ಯಂಗಾರ್ಯರು ಜೀವನದ ಅನುಭವವನ್ನು ಆಳವಾಗಿ ಪಡೆದಿದ್ದವರು, ತುಂಬ ವಿವೇಕವುಳ್ಳವರು. ಸಂಸ್ಕೃತ ಬಲ್ಲ ಸರಸಿಗಳು, ಸಾತ್ತ್ವಿಕರು, ಕರುಣಾಳು. ಇವರು ಗುಂಡಣ್ಣನವರಿಗಾಗಿ ಬೆಂಗಳೂರಿಗೆ ಪದೇ ಪದೇ ಬರುತ್ತಿದ್ದರು; ಗುಂಡಣ್ಣನ ಜೊತೆಯಲ್ಲಿ ಎಡೆಬಿಡದೆ ಇರುತ್ತಿದ್ದರು. ಗುಂಡಣ್ಣನ ಗೃಹಕೃತ್ಯದಲ್ಲಿ ಏನು ಆಗಬೇಕಾಗಿದ್ದರೂ ನಾರದರ ಮಾತಿಲ್ಲದೆ ಅದು ಆಗುತ್ತಿರಲಿಲ್ಲ. ಯಾವ ಪ್ರಸಂಗ ಬಂದರೂ ಗುಂಡಣ್ಣ ನವರು "ನಾರದರೇ, ಏನು ಹೇಳುತ್ತೀರಿ?" ಎಂದು ಸಲಹೆ ಕೇಳುತ್ತಿದ್ದರು. ನಾರದರು ಹಾಸ್ಯ ಪರರು. ತಮ್ಮ ಮಾತಿನಲ್ಲಿ ನಡುನಡುವೆ ಇಂಗ್ಲೀಷ್ ಪದಗಳನ್ನು ಸೇರಿಸುತ್ತಿದ್ದರು. ಆ ಪದಗಳ ಅರ್ಥ ತಮಗೆ ಗೊತ್ತಿಲ್ಲವೆಂಬಂತೆ ನಟಿಸಿ ಕೇಳುವವರನ್ನು ವಿನೋದಪಡಿಸುತ್ತಿದ್ದರು. ಉದಾಹರಣೆಗಾಗಿ 'ಸಿಂಪಲ್' (ಸರಳರು) ಎಂಬ ಮಾತನ್ನು ಉದ್ದೇಶದಲ್ಲಿಟ್ಟುಕೊಂಡಂತೆ ನಟಿಸುತ್ತಾ "ಗುಂಡಣ್ಣ, ಇವರನ್ನೇ ಅಲ್ಲವೇ ನೀವು ಆ ಹೊತ್ತು ಬಹಳ ಸಿಂಪಲ್ಟನ್ ಎಂದು ಕೊಂಡಾಡಿದ್ದು?" ಸಿಂಪಲ್ಟನ್ ಎಂದರೆ ದಡ್ಡ ಎಂಬುದು ತಮಗೆ ಗೊತ್ತಿಲ್ಲವೆಂಬಂತೆ ಆಡುತ್ತಿದ್ದರು.

ಗುಂಡಣ್ಣನವರು ಜನದಲ್ಲಿ ಜೀವನೋತ್ಸಾಹವನ್ನು ಹರಡುತ್ತಿದ್ದವರು. ಅವರು ಎಷ್ಟೋ ದಿನ ತಮ್ಮ ಮನೆಯ ಅಡಿಗೆಯನ್ನು ತಾವೇ ನಡಸುತ್ತಿದ್ದರು. ಇದು ತಮ್ಮ ಸ್ವಂತ ಸಂತೋಷಕ್ಕಾಗಿ. ಬೆಳಗ್ಗೆ ಅಡಿಗೆ

ಮಾಡಿಟ್ಟು ತಮ್ಮ ಕೆಲಸಕ್ಕೆ ಹೋಗಿ ಸುಮಾರು ಹನ್ನೆರಡು ಘಂಟೆಯ ಹೊತ್ತಿಗೆ ಕೆಲಸ ಮುಗಿಸಿಕೊಂಡು ಬಂದು ಭೋಜನಕ್ಕೆ ಏರ್ಪಾಟು ಮಾಡಿದಾಗ ಹನ್ನೆರಡು ಹದಿನೈದು ಎಲೆ ಹಾಕುತ್ತಿದ್ದರು. ಪ್ರತಿದಿನವೂ ಅವರಿಗೆ ಅತಿಥಿಗಳೋ ಸ್ನೇಹಿತರೋ ನಾಲ್ಕೈದು ಜನ ಸಹಪಂಕ್ತಿ ಇರಬೇಕು; ಇದರ ಜೊತೆಗೆ ಮನೆಯವರು, ಮುಖ್ಯವಾಗಿ ಮಕ್ಕಳು.

ಗುಂಡಣ್ಣನವರ ಮನೆ ಪುರಾತನವಾದದ್ದು. ಅದರ ನಾಲ್ಕು ಕಡೆಯೂ ಸಣ್ಣ ಸಣ್ಣ ಮನೆಗಳಲ್ಲಿ ಅವರ ಬಂಧುವರ್ಗದವರ ಸಂಸಾರಗಳು-ಸೋದರ ಸೊಸೆಯರು, ಚಿಕ್ಕಪ್ಪಂದಿರ ಮಕ್ಕಳು, ಚಿಕ್ಕತಾತಂದಿರ ಮೊಮ್ಮಕ್ಕಳು, ದೊಡ್ಡ ಮಾವಂದಿರ ಅಳಿಯಂದಿರು, ಇತರ ಬಂಧುಗಳು, ಪುರೋಹಿತರು-ಇಂಥವರು ವಾಸವಾಗಿದ್ದರು. ಗುಂಡಣ್ಣ ಊಟಕ್ಕೆ ಕೂರುವ ಹೊತ್ತು ಅವರಿಗೆಲ್ಲ ರೂಢಿಯಿಂದ ತಿಳಿದಿತ್ತು. ಆದದ್ದರಿಂದ, ತಮಗೆ ಕರೆ ಬರುವುದಕ್ಕಾಗಿ ಕಾದಿರುತ್ತಿದ್ದರು. ಆ ಮನೆಗಳ ಹೆಣ್ಣುಮಕ್ಕಳಿಗೆ ಗುಂಡಣ್ಣ ಸಂಕೇತದ ಹೆಸರುಗಳನ್ನಿಟ್ಟಿದ್ದರು. ಗುಂಡಣ್ಣನವರು ಮನೆಯ ಅಡಿಗೆಯನ್ನು ಬಡಿಸಿದ್ದಾದಮೇಲೆ, ತಾವು ಕುಳಿತು ಘಟ್ಟಿಯಾಗಿ "ಓ ದಡಾಲೀ", "ಓ ಬೊಜ್ಜೀ", "ಓ ಕಾಳೀ", "ಓ ಮಾಯೀ", "ಓ ಮುತ್ತೇ", "ಓ ಮಾರೀ" ಎಂದು ಕೂಗುವರು.

ಅವರ ಧ್ವನಿಯನ್ನು ಕೇಳಿದ ಕೂಡಲೆ ಆಯಾ ಮಹಿಳೆಯರು ತಮ್ಮ ತಮ್ಮ ಪಾತ್ರೆಗಳಲ್ಲಿ ತಮ್ಮ ಪಾಕವನ್ನು ತರುವರು. ಒಬ್ಬಾಕೆ "ಈ ಹೊತ್ತು ಹಾಗಲಕಾಯಿ ಗೊಜ್ಜು" ಎನ್ನುವರು. ಇನ್ನೊಬ್ಬಾಕೆ "ಪುದೀನಾ ಚಟ್ನಿ" ಎನ್ನುವರು. ಒಬ್ಬಾಕೆ "ಹುರುಳೀಕಾಯಿ ಪಲ್ಯ" ಎನ್ನುವರು; ಇನ್ನೊಬ್ಬಾಕೆ "ಬರೀ ಹಪ್ಪಳ" ಎನ್ನುವರು. ಎಲ್ಲವೂ ಕೊಂಚ ಕೊಂಚವೇ. ಗುಂಡಣ್ಣ ಅದನ್ನೆಲ್ಲಾ ಒಂದು ಎಲೆಯಮೇಲೆ ಹಾಕಿಸಿ ಆ ಒಟ್ಟನ್ನು ತಮ್ಮ ಪಂಕ್ತಿಯವರೆಲ್ಲರಿಗೂ ಹಂಚುತ್ತಿದ್ದರು; ಮತ್ತು ಅಡಿಗೆಯಲ್ಲಿ ಉಳಿದಿದ್ದ ಪಲ್ಯವನ್ನೋ, ಹುಳಿಯನ್ನೋ, ಆ ಮಹಿಳೆಯರಿಗೆ ಒಬ್ಬೊಬ್ಬರಿಗೂ ಕೊಂಚ ಕೊಂಚ ಪಾತ್ರೆಯಲ್ಲಿ ಹಾಕುವರು. ಹೀಗೆ ಗುಂಡಣ್ಣವವರ ನೆರೆಹೊರೆಗೆ ಅವರ ಅಡಿಗೆ, ಅವರಿಗೆ ನೆರೆಹೊರೆಯವರ ಅಡಿಗೆ-ಹೀಗೆ ಭೋಜ್ಯವಿನಿಮಯವಾಗುತ್ತಿತ್ತು. ಇದರಿಂದ ಅವರಿಗೆಲ್ಲ ಸಂತೋಷ. ಎಲ್ಲರಿಗೂ ಪ್ರೀತಿಯ ಅನ್ಯೋನ್ಯತೆ ಬೆಳೆಯುತ್ತಿತ್ತು. ಈ ಭೋಜನ ವಿನಿಮಯದ ಸಮಯದಲ್ಲಿ ಹಾಸ್ಯ, ವಿನೋದ, ನಗು. ಇವೆಲ್ಲ ಜೀವನೋತ್ಸಾಹದ ಸಂಪತ್ತು. ಮನುಷ್ಯನ ಬಾಳಿನಲ್ಲಿ ಈ ನಿರ್ಮಲವೂ ಹೃತ್ಪೂರ್ವಕವೂ ಆದ ಪ್ರೀತಿವಿನಿಮಯವೇ ಅತ್ಯಂತ ಮಹತ್ತ್ವದ ವಸ್ತುವೆಂದು ಗುಂಡಣ್ಣ ನಂಬಿದ್ದರು.

ಅವರಿಗೆ ವಿಸ್ತಾರವಾದ ಸಂಸ್ಕೃತ ಸಾಹಿತ್ಯದ ಮತ್ತು ಇಂಗ್ಲೀಷ್ ಸಾಹಿತ್ಯದ ಪರಿಚಯವಿತ್ತು. ಹಾಗೆ ಅವರು ಸಂಪಾದಿಸಿದ್ದ ರಸಿಕ ಸಂಸ್ಕೃತಿಯ ಮಧುರ ಕಾಂತಿಯೇ, ಅವರ ಭೋಜನದ ಸಮಯದಲ್ಲಿ ತೋರಿಬರುತ್ತಿದ್ದ ಬಂಧುಮಿತ್ರವಾತ್ಸಲ್ಯ.

ನಾನು ಮೇಲೆ ಹೇಳಿದ ದಿವಸ ನಾರದರೂ ಜೊತೆಯಲ್ಲಿದ್ದರು. ನಾವು ಮೂವರೂ ಗುಂಡಣ್ಣನವರ ಮನೆಯೊಳಕ್ಕೆ ಹೋಗಿ ಕೈಕಾಲು ತೊಳೆದು ಊಟಕ್ಕೆ ಕುಳಿತೆವು. ಅಂದು ಗುಂಡಣ್ಣನವರೇ ಸ್ವಯಂ ಅಡಿಗೆ ಮಾಡಿದ್ದರಂತೆ. ಎರಡು ಮೂರು ಬಗೆಯ ಪಲ್ಯಗಳು, ಗೊಜ್ಜು, ಉಪ್ಪಿನಕಾಯಿ, ಅನ್ನ ಇಷ್ಟನ್ನು ಬಡಿಸಿದರು. ಊಟ ಪ್ರಾರಂಭಮಾಡುವ ಮುಂಚೆ ಗುಂಡಣ್ಣನವರು ಕುಳಿತು ಎಂದಿನಂತೆ ಅವರ ಮನೆಯ ಸುತ್ತಮುತ್ತಿನ ಮನೆಗಳ ಹೆಣ್ಣುಮಕ್ಕಳ ಹೆಸರುಗಳನ್ನು-ಅಡ್ಡ ಹೆಸರುಗಳನ್ನು-ಹಿಡಿದು ಗಟ್ಟಿಯಾಗಿ ಕೂಗಲಾರಂಭಿಸಿದರು. ಅವರು ಒಬ್ಬೊಬ್ಬರಾಗಿ ತಮ್ಮ ತಮ್ಮ ಮನೆಗಳಲ್ಲಿ ಮಾಡಿದ್ದ ಪಲ್ಯ, ಹುಳ ಸೊಪ್ಪು, ಚಟ್ನಿ, ಹಪ್ಪಳ, ಸಂಡಿಗೆ ಇಂಥಾ ವ್ಯಂಜನ ಪದಾರ್ಥಗಳನ್ನು ತಂದು ಅಲ್ಲಿ ಇಟ್ಟರು. ಗುಂಡಣ್ಣನವರು ಅದನ್ನೆಲ್ಲ ನಮ್ಮ ಎಲೆಗಳಿಗೆ ಹಂಚಿದರು. ಊಟಕ್ಕೆ ಪ್ರಾರಂಭವಾಯಿತು. ಮೊದಲು ತೊವ್ವೆಯನ್ನು ತಂದರು. ನಾನು ಅಜೀರ್ಣಕ್ಕೆ ಹೆದರಿದ್ದವನಾದದ್ದರಿಂದ ತೊವ್ವೆ ಬೇಡವೆಂದೆ. ಗುಂಡಣ್ಣನವರು "ಏಕೆ?" ಎಂದರು.

ನಾನು, "ಬೇಳೆ ಜೀರ್ಣವಾಗುವುದು ಕಷ್ಟ" ಎಂದೆ. ಗುಂಡಣ್ಣನವರು, "ನಾರದರೇ ಏನು ಹೇಳುತ್ತೀರಿ?" ಎಂದರು. ನಾರದರು ಈ ರೀತಿ ಹಾಡು ಹೇಳಿದರು:

ಅಪ್ಪುಸೊಪ್ಪುಲು ಜೇಸಿ ।
ಚಪ್ಪುದೆಬ್ಬಲು ತಿನಿ ।
ಪಪ್ಪೇ ತಿನವಲೆರಾ-ಮಂಚಿ ಕಂದಿ- ।
ಪಪ್ಪೇ ತಿನವಲೆರಾ

ನನ್ನ ಹಟ ಮುರಿಯಿತು. ಕೆಲವು ತರಕಾರಿಗಳನ್ನು ತಿನ್ನದೆ ಬಿಟ್ಟಿದ್ದೆ. ಗುಂಡಣ್ಣನವರು, "ಅದನ್ನೆಲ್ಲ ತಿನ್ನಬೇಕು. ಎಲೆಯಲ್ಲಿ ಏನಾದರೂ ಉಳಿದಿದ್ದರೆ ಅದನ್ನೆಲ್ಲ ಬಳಿದು ತುತ್ತುಮಾಡಿ ನಿನ್ನ ಬಾಯಲ್ಲಿ ತುರುಕಿಬಿಟ್ಟೇನು!" ಎಂದು ಹೆದರಿಸಿದರು. ಸದ್ದಿಲ್ಲದೆ ಅಷ್ಟನ್ನೂ ತಿಂದಿದ್ದಾಯಿತು. ಆಮೇಲೆ ಮಲಗುವ ಕೋಣೆಗೆ ಬಂದೆವು. ನನ್ನನ್ನು ಮಲಗೆಂದರು. "ನನಗೆ ಮಧ್ಯಾಹ್ನ ನಿದ್ದೆ ಬರುವುದಿಲ್ಲ" ಎಂದೆ. "ಹಾಗಾದರೆ ಎದ್ದು ಕುಳಿತು ಸಾಯಿ" ಎಂದು ಶಪಿಸಿ, ತಾವು ಮಲಗಿ ಎರಡೂವರೆ ಘಂಟೆವರೆಗೂ ನಿದ್ದೆ ಹೋದರು.

ಬಳಿಕೆದ್ದು ಮೇಲುಗಡೆ ಚಾವಣಿಗೆ ತಗಲುಹಾಕಿದ್ದ ಬುಟ್ಟಿಗಳನ್ನು ಕೆಳಕ್ಕಿಳಿಸಿದರು. ಅದರಲ್ಲಿ ಚಕ್ಕುಲಿ, ಕೋಡುಬಳೆ, ಉಂಡೆಗಳು ಇವುಗಳ ಚೂರುಗಳು ರಾಶಿಯಾಗಿ ಬಿದ್ದಿದ್ದವು. ಅವುಗಳನ್ನು ನನಗೂ ಕೊಡಬಂದರು. ನಾನು ಬೇಡವೆಂದೆ. ಅವರು "ಇದು ಬೇಡದಿದ್ದರೆ ಔಷಧವಿಲ್ಲ" ಎಂದರು. ಹೆದರಿ ಅದನ್ನೂ ನುಂಗಿದ್ದಾಯಿತು. ಬಳಿಕ ಕಾಫಿ ಬಂತು. ನಾನು ಒಂದಿಷ್ಟು ಕುಡಿದು ಗಸಿಯನ್ನು ಬಟ್ಟಲಲ್ಲಿಯೇ ಉಳಿಸಿದೆ. ಗುಂಡಣ್ಣನವರು ಅದನ್ನು ನೋಡಿ ಆ ಪಾತ್ರೆಯನ್ನು ನಾರದರ ಕೈಗೆ ಕೊಟ್ಟು ಸಂಜ್ಞೆ ಮಾಡಿ ನನ್ನ ಕತ್ತನ್ನು ಹಿಂದುಗಡೆ ಹಿಡಿದು ಬಿಗಿದರು. ನಾನು ನೋವಿನಿಂದ 'ಆ' ಎಂದು ಬಾಯಿ ಬಿಟ್ಟೆ. ನಾರದರು ಆ ಗಸಿಯಷ್ಟನ್ನೂ ನನ್ನ ಬಾಯಲ್ಲಿ ಬಗ್ಗಿಸಿದರು. ಈ ವೇಳೆಗೆ ಮೂರೂವರೆ ಘಂಟೆ ಆಗಿತ್ತು. ನಾಲ್ಕು ಘಂಟೆಗೆ ನನಗೆ ನೋವು ಬರುವ ಸಮಯ. ಗುಂಡಣ್ಣನವರು ಸ್ವಂತ ಗಾಡಿ ಇಟ್ಟಿದ್ದರು. ಅದು ಸೊಗಸಾದ ಗಾಡಿ, ಭರ್ಜರಿ ಕುದುರೆ. ಆ ಗಾಡಿಯಲ್ಲಿ ನಾವು ಮೂವರೂ ಕುಳಿತೆವು. ಶಂಕರಪುರದಲ್ಲಿ ನಮ್ಮ ಮನೆಯ ಬಳಿಗೆ ಬರುವಾಗ್ಗೆ ನಾಲ್ಕು ಘಂಟೆ ಮೀರಿತ್ತು. ನೋವಿನ ಸೂಚನೆ ಏನೂ ಇರಲಿಲ್ಲ. ನಾನು ಗಾಡಿ ಇಳಿದು "ಔಷಧವೆಲ್ಲಿ?" ಎಂದು ಕೇಳಿದೆ. "ಊಟದಲ್ಲಿಯೇ ಔಷಧವಾಗಿದೆ" ಎಂದರು. "ರಾತ್ರಿಗೆ ಔಷಧ?" ಎಂದೆ. "ಹಸಿವಾಗದಿದ್ದರೆ ಊಟ ಮಾಡಬೇಡ. ಅದೇ ಔಷಧ?" ಎಂದರು. ಆ ಹೊತ್ತು ಹೋದ ನೋವು ಇದುವರೆಗೆ ಬಂದಿಲ್ಲ. ಅದು ಗುಂಡಣ್ಣನವರ ವಿಶ್ವಾಸದ ಮಹಿಮೆಯೋ ಅಥವಾ ಆ ವಿಚಿತ್ರ ಚಿಕಿತ್ಸೆಯ ಮಹಿಮೆಯೋ ಹೇಳಲಾರೆ. ಅದರಿಂದ ಗುಣವಾದದ್ದಂತೂ ನಿಶ್ಚಯವೆಂದು ಪ್ರಮಾಣಮಾಡಿ ಹೇಳಬಲ್ಲೆ.

ಒಂದಾನೊಂದು ದಿನ ಮೆಡಿಕಲ್ ಇಲಾಖೆಯ ಉದ್ಯೋಗಸ್ಥರೊಬ್ಬರು ಚಿಕಿತ್ಸಾಲಯಕ್ಕೆ ಬಂದು ತಮ್ಮ ಅಣ್ಣಂದಿರ ರೋಗವನ್ನು ಗುಂಡಣ್ಣನವರಿಗೆ ವಿವರಿಸಿದರು. ಗುಂಡಣ್ಣನವರು ಸಾವಕಾಶವಾಗಿ ಆ ಅಣ್ಣಂದಿರ ಕಡೆ ತಿರುಗಿ, ಕನ್ನಡಕಗಳ ಮೂಲಕ ದಿಟ್ಟಿಸಿನೋಡಿ, "ಏನಾಗುತ್ತದೆ ನಿಮಗೆ?" ಎಂದರು.

"ಹಸಿವೇ ಇಲ್ಲ."
"ಏನು ಆಹಾರ?"
"ಏನೂ ಇಲ್ಲ."

"ಏನೂ ಇಲ್ಲದೆಯೇ ಹೀಗೆ ಇರಬಹುದಾದರೆ ಒಳ್ಳೆಯದೇ ಆಯಿತಲ್ಲ? ಸಂಬಳವೆಲ್ಲ ಬ್ಯಾಂಕಿಗೆ ಹೋಗಬಹುದು."

ಇಷ್ಟರಲ್ಲಿ ತಮ್ಮಂದಿರು ಬಾಯಿಬಿಟ್ಟು “ಹಾಗಲ್ಲ ಗುಂಡಣ್ಣ, ದಿನೇ ದಿನೇ ಬಡವಾಗುತ್ತಿದ್ದಾರೆ, ಶಕ್ತಿ ಕುಗ್ಗುತ್ತಿದೆ. ಬೆಳಗ್ಗೆ ಒಂದು ಬಟ್ಟಲು ಕಾಫಿ, ಜೊತೆಗೆ ಸ್ವಲ್ಪ ದೋಸೆ ಅಥವಾ ಉಪ್ಪಿಟ್ಟು; ಹನ್ನೊಂದು ಘಂಟೆಗೆ ಊಟವೆಂಬುದು ಬರೀ ಶಾಸ್ತ್ರ. ಅನ್ನ ಸೇರುವುದೇ ಇಲ್ಲ. ಕಾಯಿಪಲ್ಯ ಏನಾದರೂ ಇದ್ದರೆ ಕೊಂಚ ನಂಜಾಡುತ್ತಾರೆ. ಅಲಸಂದಿ, ಕಡಲೆ-ಇಂಥಾದಿದ್ದರೆ ಒಂದೆರಡು ಕಾಳು ತಿನ್ನುತ್ತಾರೆ. ಮಧ್ಯಾಹ್ನ ಮಕ್ಕಳಿಗೆ ಮಾಡಿದ್ದು ಪೂರಿಯೋ ಬೋಂಡವೊ-ಏನಾದರೂ ನೆಪಕ್ಕೆ ತೆಗೆದುಕೊಳ್ಳುತ್ತಾರೆ. ಸ್ವಲ್ಪ ಕಾಫಿ-ಅಷ್ಟೇ. ರಾತ್ರಿ ಊಟವೇ ಇಲ್ಲ. ರವೆ ಸಜ್ಜಿಗೆ, ಇಡ್ಡಲಿ ಇಂಥಾದ್ದೇನಾದರೂ ಇದ್ದರೆ ಕೊಂಚ ಫಲಾಹಾರದ ಶಾಸ್ತ್ರ, ಇಷ್ಟಕ್ಕೆ ಇಳಿದುಹೋಗಿದೆ.”

ಗುಂಡಣ್ಣನವರು ಅಲ್ಲಿದ್ದ ಒಬ್ಬರ ಕಡೆ ತಿರುಗಿ “ಏನಯ್ಯ, ಹೀಗೆ ತೀನಿ ಹಾಕಿದರೆ ನೀನು ಊಟವಿಲ್ಲದೆ ಎಷ್ಟು ದಿವಸ ಬದುಕೀಯೆ?” ಎಂದರು. ಅವನು “ಆರು ತಿಂಗಳು” ಎಂದ. ಇನ್ನೊಬ್ಬನು “ಆರು ವರ್ಷ” ಎಂದ. ನಾರದರು, “ನನಗೆ ಹೀಗೆ ತರ್ತೀಪು ನಡಸಿದರೆ ಯಾವಜ್ಜೀವವೂ ಸಿದ್ಧ ಸ್ವಾಮಿ” ಎಂದರು. ಎಲ್ಲರೂ ಗೊಳ್ಳೆಂದು ನಕ್ಕರು. ಆ ಅಣ್ಣತಮ್ಮಂದಿರಿಗೆ ಮುಖ ಬೆಪ್ಪಾಯಿತು. ಗುಂಡಣ್ಣನವರು, “ಎರಡು ಹೊತ್ತಿನ ಕಾಫಿ, ಎರಡು ತಿಂಡಿ, ಎರಡು ಫಲಾಹಾರಗಳನ್ನು ಬಿಟ್ಟುಬಿಡಿ. ಅದೇ ನಿಮಗೆ ಔಷಧ” ಎಂದರು.

ಗುಂಡಣ್ಣನವರು ಯಾರ ಮನೆಗೆ ಹೋದರೂ ಒಂದೆರಡು ಭೇಟಿಗಳೊಳಗಾಗಿ ಅಲ್ಲಿಗೆ ಆಪ್ತರಾಗುತ್ತಿದ್ದವರು. ಮನೆಯ ಮುದುಕಿ ಮುದುಕರನ್ನು ಗೌರವ ವಿಶ್ವಾಸಗಳಿಂದ ಮಾತನಾಡಿಸುತ್ತಿದ್ದರು. ಸ್ವಲ್ಪ ಸಲಿಗೆಯಾದಮೇಲೆ ಮನೆಯ ಬಾಗಿಲು ದಾಟುವಾಗಲೆ ‘ಅಜ್ಜಿ’ ಎಂದುಕೊಂಡು ಒಳಕ್ಕೆ ಹೆಜ್ಜೆ ಇಡುತ್ತಿದ್ದರು. “ಏನೂ ತಿಂಡಿ ಇಲ್ಲವೆ ಈ ಬಡ ಹೊಟ್ಟೆಗೆ?” ಎಂದು ಅಘಾತ್ಯ ಮಾಡುತ್ತಿದ್ದರು. ಮನೆಯವರು ಉಬ್ಬುಬ್ಬಿ ಏನಾದರೂ ತಿಂಡಿ ತಂದಿಡುತ್ತಿದ್ದರು. ಅವಲಕ್ಕಿ, ಪೊಳ್ಳಂಗಾಯಿ, ಹುರಿಟ್ಟು-ಏನಿದ್ದರೆ ಅದು ಬರುತ್ತಿತ್ತು. ಗುಂಡಣ್ಣನವರು ಹಾಗೆ ಮಾಡುತ್ತಿದ್ದದ್ದು ವಿನೋದಕ್ಕಾಗಿ. ಬಂದ ತಿಂಡಿಗಳನ್ನು ತಿಂದುಹಾಕುತ್ತಿರಲಿಲ್ಲ. ಮೂಟೆ ಕಟ್ಟುತ್ತಿರಲಿಲ್ಲ. ತುಂಬ ನಿರ್ಬಂಧವಾದರೆ ರುಚಿನೋಡಿದ ಶಾಸ್ತ್ರ ಮಾಡುತ್ತಿದ್ದರು.

ಆದರೂ ಅವರ ಮನೆಗೆ ಆಗಾಗ ತಿಂಡಿಗಳು ಬರುತ್ತಿದ್ದವು. ಇಂಥಾದ್ದನ್ನು ಅವರು ಬುಟ್ಟಿಗಳಲ್ಲಿಟ್ಟು ತೂಗಹಾಕುತ್ತಿದ್ದರು. ಅದು ಖರ್ಚಾಗುವುದಕ್ಕೆ ಕಷ್ಟವೇನೂ ಇರಲಿಲ್ಲ. ಮನೆತುಂಬ ಮಕ್ಕಳು; ಅವರಿಗಿಂತ ಸಲಿಗೆಯುಳ್ಳ ನೆರೆ ಹೊರೆಯ ಮಕ್ಕಳು; ಎಲ್ಲಕ್ಕಿಂತ ಹೆಚ್ಚಾಗಿ ನನ್ನಂಥ ಸ್ನೇಹಿತರು; ಇದರಿಂದ ಬುಟ್ಟಿಗಳು ಮಾರನೆಯ ದಿನವೇ ಖಾಲಿಯಾಗುತ್ತಿದ್ದವು.

ಗುಂಡಣ್ಣನವರು ತುಂಬಾ ಸಾಹಿತ್ಯಪ್ರೇಮಿಗಳೆಂದು ಮೊದಲೇ ಹೇಳಿದ್ದೇನೆ. ಅವರಿಗೆ ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ ಕಾವ್ಯ ನಾಟಕಗಳ ಪರಿಚಯ ಚೆನ್ನಾಗಿತ್ತು. ಅದರ ಜೊತೆಗೆ ಶ್ರೀ ವೈಷ್ಣವ ಆಚಾರ್ಯರುಗಳಾದ ಆಳವಂದಾರ್ ಮೊದಲಾದ ಮಹಾನುಭಾವರುಗಳ ಸ್ತೋತ್ರಪಾಠಗಳೂ ಹೃದ್ಗತವಾಗಿದ್ದವು. ಸಂಭಾಷಣೆಯಲ್ಲಿ ಪ್ರಾಸ್ತಾವಿಕವಾಗಿ ಅವರು ಶ್ಲೋಕವನ್ನು ಉದಾಹರಿಸಿ ಅರ್ಥ ವಿವರಣೆಮಾಡುತ್ತಿದ್ದ ರೀತಿ ಅವರ ಸೂಕ್ಷ್ಮಾಭಿರುಚಿಯನ್ನು ಚೆನ್ನಾಗಿ ತೋರಿಸುತ್ತಿತ್ತು. ಮತ್ತೊಬ್ಬರು ಉದಾಹರಿಸಿದ ಶ್ಲೋಕದ ಸ್ವಾರಸ್ಯವನ್ನು ಅವರು ಬೇಗನೆಯೂ ಪಾರಶೋಧನೆಯ ಬುದ್ಧಿಯಿಂದಲೂ ಗ್ರಹಿಸುತ್ತಿದ್ದರು. ಇಂಥ ಸಂದರ್ಭಗಳಲ್ಲಿ ಅಮೃತೂರಿನ ನಾರದರು ಅವರಿಗೆ ಪ್ರಚೋದಕರಂತೆ, ಅಥವಾ ಪ್ರತಿಧ್ವನಿಯಂತೆ ಇರುತ್ತಿದ್ದರು. ಅವರಿಬ್ಬರೂ ಪದೇಪದೇ ಹೇಳುತ್ತಿದ್ದ ಒಂದು ಶ್ಲೋಕಾರ್ಥ ಅವರ ಲೋಕಾನುಭವವನ್ನು ಪ್ರತಿಬಿಂಬಿಸುತ್ತದೆ:

> ಮನೀಷಿಣಸ್ಸಂತಿ ನ ತೇ ಹಿತೈಷಿಣೋ
> ಹಿತೈಷಿಣಸ್ಸಂತಿ ನ ತೇ ಮನೀಷಿಣಃ ॥

(ಬುದ್ಧಿವಂತರಿದ್ದಾರೆ, ಅವರಲ್ಲಿ ಒಳ್ಳೆಯತನವಿಲ್ಲ. ಒಳ್ಳೆಯವರಿದ್ದಾರೆ, ಅವರಿಗೆ ಬುದ್ಧಿವಂತಿಕೆ ಇಲ್ಲ.)

ನನ್ನ ಅನುಭವವೂ ಹೀಗೆಯೇ ಇದೆ. ಆದದ್ದರಿಂದಲೇ ಆ ವಾಕ್ಯ ನನ್ನ ಮನಸ್ಸನ್ನೂ ಬಲವಾಗಿ ಹಿಡಿದಿದೆ.

ಸಂಸ್ಕೃತ ಸಾಹಿತ್ಯದಲ್ಲಿ ಹೇಗೋ ಇಂಗ್ಲೀಷ್ ಸಾಹಿತ್ಯದಲ್ಲಿಯೂ ಹಾಗೆಯೇ ಗುಂಡಣ್ಣನವರು ತುಂಬಾ ಪ್ರೀತಿ ಇಟ್ಟಿದ್ದರು, ಷೇಕ್‌ಸ್ಪಿಯರ್, ಥ್ಯಾಕರೆ, ಡಿಕೆನ್ಸ್, ಸ್ಕಾಟ್, ಗೋಲ್ಡ್‌ಸ್ಮಿತ್-ಇವರು ಗುಂಡಣ್ಣನವರು ಮೆಚ್ಚಿದ್ದ ದೊಡ್ಡ ಲೇಖಕರು. ಅವರು ಪ್ರತಿನಿತ್ಯ ಮನೆಯಿಂದ ಹೊರಕ್ಕೆ ಹೊರಟಾಗಲೆಲ್ಲ ಷೇಕ್‌ಸ್ಪಿಯರಿನ ಒಂದು ನಾಟಕವೋ, ಡಿಕೆನ್ಸನ 'ಪಿಕ್ವಿಕ್ ಪೇಪರ್ಸ್' ಕಥೆಯೋ, ಥ್ಯಾಕರೆಯ 'ವ್ಯಾನಿಟೀ ಫೇರ್' ಕಾದಂಬರಿಯೋ, ಅಥವಾ ಅಮೆರಿಕದ ಏಬ್ರಹ್ಮಂ ಲಿಂಕನ್ನನಂಥ ಮಹನೀಯನೊಬ್ಬನ ಜೀವನ ಚರಿತ್ರೆಯೋ ಅವರ ಜೇಬಿನಲ್ಲಿರುತ್ತಿತ್ತು. ಪುರಸೊತ್ತು ದೊರೆತಾಗಲೆಲ್ಲ ಅವರು ಜೇಬಿನಿಂದ ಆ ಗ್ರಂಥವನ್ನು ತೆಗೆದು ಓದುತ್ತಿದ್ದದ್ದಲ್ಲದೆ, ಅದರ ಸ್ವಾರಸ್ಯವನ್ನು ಹತ್ತಿರ ಇದ್ದವರಿಗೆ ವಿವರಿಸುತ್ತಿದ್ದರು. ಡಿಕೆನ್ಸ್ ಒಂದು ಕಡೆ ರೈಲುಗಾಡಿಯ ಓಟವನ್ನು ಬಣ್ಣಿಸಿರುವ ಭಾಗವನ್ನು ನನಗೆ ತೋರಿಸಿ ಅದನ್ನು ಕೊಂಡಾಡಿದ್ದು ನನಗೆ ಜ್ಞಾಪಕವಿದೆ. ಅವರು ಮೆಚ್ಚಿದ ಗ್ರಂಥಗಳನ್ನು ಅವರು ಒಂದು ಸಲ ಎರಡು ಸಲವಲ್ಲ, ನಾಲ್ಕಾರು ಸಲ ಪುನರಾವರ್ತನೆ ಮಾಡಿದ್ದರು.

ಅವರ ಮನಸ್ಸಂಸ್ಕೃತಿ ಹೀಗೆ ವಿಶಾಲವಾಗಿದ್ದದ್ದರಿಂದಲೇ ಅವರ ಮಾತುಕಥೆ ಎಲ್ಲರಿಗೂ ಅಷ್ಟು ವಿಶೇಷವಾಗಿ ರುಚಿಸುತ್ತಿತ್ತು.

ಅದೇ ಸಂಸ್ಕೃತಿ ಅವರ ನಡವಳಿಕೆಯಲ್ಲಿಯೂ ತೋರಿಬರುತ್ತಿತ್ತು. ಅವರು ವೈದ್ಯರಾಗಿ ಅಷ್ಟು ಜನಪ್ರಿಯರಾಗಿದ್ದದ್ದಕ್ಕೆ ಒಂದು ದೊಡ್ಡ ಕಾರಣ, ಅವರು ಬಿಟ್ಟಿ ಚಾಕರಿ ಮಾಡುತ್ತಿದ್ದರೆಂಬುದು-ಎಂದು ಯಾರಾದರೂ ಹೇಳಿಯಾರೇನೋ! ಅದನ್ನು ನಾನು ಖಂಡನೆಮಾಡುವಂತಿಲ್ಲ. ಆದರೆ ಗುಂಡಣ್ಣನವರು ಕಾಸು ನೋಡಿ ಔಷಧ ಕೊಟ್ಟವರಲ್ಲವೆಂದು ಮಾತ್ರ ನಾನು ಖಂಡಿತ ಹೇಳಬಲ್ಲೆ. ಹಣದ ಕಡೆ ಅವರ ಗಮನ ಇರಲಿಲ್ಲ. ಎಷ್ಟೋ ವೇಳೆ ರೋಗಿಗಳಿಗೆ ತಾವೇ ಧನಸಹಾಯವನ್ನು ಕೊಟ್ಟದ್ದೂ ನನಗೆ ಗೊತ್ತಿದೆ. ಅವರು ಮಾಡಿದ ಚಾಕರಿ ಎಷ್ಟೋ ಸಂದರ್ಭಗಳಲ್ಲಿ ಬಿಟ್ಟಿಯಾದದ್ದಿರಬಹುದು. ಆದರೆ ಬಿಟ್ಟಿ ಎಂಬ ಕಾರಣದಿಂದ ಅದು ಶಕ್ತಿಯಿಲ್ಲದ್ದೆಂದು ಯಾರೂ ವಾದಿಸಲಾರರು. ಬಿಟ್ಟಿ ಔಷಧ ಕೊಡುತ್ತಾರೆಂದು ಎಂಥವರೂ ಅಪ್ರಯೋಜಕ ವೈದ್ಯನ ಬಳಿಗೆ ಹೋಗಲಾರರು. ಎಂಥವರಿಗೂ ಕಾಸಿಗಿಂತ ಹೆಚ್ಚಿನದು ಪ್ರಾಣ. ಕಾಸು ಮಿಗಿಸಿ ಜೀವಕ್ಕೆ ಅಪಾಯವನ್ನು ಯಾರೂ ತಂದುಕೊಳ್ಳುವುದಿಲ್ಲ. ಬಡವರಿಗೆ ಗುಂಡಣ್ಣನವರು ಬಿಟ್ಟಿ ಚಾಕರಿ ಮಾಡುತ್ತಿದ್ದದ್ದು ನಿಜ. ಆದರೆ ಅನುಕೂಲಸ್ಥರು ಅವರ ವಿಷಯದಲ್ಲಿ ಕೃತಜ್ಞತೆ ಇಲ್ಲದವರಾಗಲಿಲ್ಲ. ಗುಂಡಣ್ಣನವರು ಆ ಕಾಲದ ವಿದ್ಯಮಾನಗಳಿಗೆ ತಕ್ಕಂತೆ ಕೈ ತುಂಬ ಸಂಪಾದನೆ ಮಾಡಿದರು. ಅವರ ಸೇವೆಗೆ ಧಾರಾಳವಾದ ಪ್ರತಿಫಲವೇ ಅವರಿಗೆ ದೊರೆಯುತ್ತಿತ್ತು.

ಗುಂಡಣ್ಣನವರಿಗೆ ಬಂಧುವೂ ಮಿತ್ರರೂ ಆದೊಬ್ಬ ದೊಡ್ಡಮನುಷ್ಯರು ಎನ್. ಎಂಬವರು ವ್ಯಾಪಾರಗಾರರಾಗಿದ್ದರು. ಆ ವ್ಯಾಪಾರ ಸಂಬಂಧದಲ್ಲಿ ಯಾವುದೋ ಸಂದರ್ಭದಲ್ಲಿ, ಆ ಎನ್. ದೊಡ್ಡಮನುಷ್ಯರು ಇನ್ನೊಬ್ಬ ಸಹ ವ್ಯಾಪಾರಿಗಳಿಗೆ-ಎಮ್. ಎಂಬವರಿಗೆ-ಸಹಾಯವಾಗಿ ನಿಲ್ಲಬೇಕಾಗಿ ಬಂತು. ಆ ಎಮ್. ಎಂಬವರು ತೆಗೆದುಕೊಂಡ ಏಳೆಂಟು ಸಾವಿರ ರೂಪಾಯಿಗಳ ಸಾಲದ ಬಗ್ಗೆ ಎನ್. ಎಂಬವರೊಡನೆ ಗುಂಡಣ್ಣನವರೂ ಕೂಡು ಹೊಣೆಗಾರರಾಗಿ ನಿಂತರು. ಸಾಲ ತೀರಿಸಬೇಕಾದ ಕಾಲ ಬಂದಾಗ ಎಮ್. ಎಂಬವರು ಎನ್. ಕಡೆ ಕೈ ತೋರಿಸಿದರು. ಎನ್. ಮತ್ತು ಗುಂಡಣ್ಣನವರು ಮಾನಿಷ್ಠರಾದ ಕಾರಣ ತಮ್ಮ ಕಷ್ಟಗಳನ್ನು ನುಂಗಿಕೊಂಡು ಸದ್ದುಮಾಡದೆ ಸಾಲ ತೀರಿಸಿದರು. ಅಲ್ಲಿಂದಾಚೆ ಎಮ್. ಅವರು ಬೇರೆ ಕ್ಷೇತ್ರಗಳಲ್ಲಿ ಹೆಸರುವಾಸಿಯಾಗಿ ಹಣ ಗಳಿಸಿದರೂ ಹಿಂದಿನ ಸಾಲದ ಸ್ಮರಣೆ ಅವರಿಗೆ ಬಂದಂತಿಲ್ಲ.

ಒಂದಾನೊಂದು ಸಂದರ್ಭದಲ್ಲಿ ಒಬ್ಬ ಯುವಕಮಿತ್ರನು ತಂದೆತನಕ್ಕೆ ಬರುವ ಯೋಗದಲ್ಲಿದ್ದ. ಅವನಿಗೆ ಆ ರೀತಿಯ ಅನುಭವದ ಬಗ್ಗೆ ಹೊಸದಾದದ್ದರಿಂದಲೂ ಅವನ ಮನೆಯಲ್ಲಿ ಆಗ ಹಿರಿಯರು ಯಾರೂ ಇಲ್ಲದ್ದರಿಂದಲೂ ಅವನ ಮನಸ್ಸಿಗೆ ಏನೋ ಹೆದರಿಕೆಯಾಗಿತ್ತು. ಆ ಹೆದರಿಕೆಯನ್ನು ಅವನು ಒಬ್ಬ ಸ್ನೇಹಿತನಿಗೆ ರಹಸ್ಯವಾಗಿ ಸೂಚಿಸಿ ಸಲಹೆ ಕೇಳಿದ. ಆ ಸ್ನೇಹಿತನು "ಗುಂಡಣ್ಣನವರ ಸಹಾಯವನ್ನು ಬೇಡುವುದು ಸರಿ" ಎಂದು ಸಲಹೆಕೊಟ್ಟ.

ಆ ಯುವಕನಿಗೆ ಗುಂಡಣ್ಣನವರಲ್ಲಿ ತಾನಾಗಿ ಹೇಳಿಕೊಳ್ಳುವುದಕ್ಕೆ ನಾಚಿಕೆ. ಇದಕ್ಕಾಗಿ ಆ ಮಧ್ಯವರ್ತಿ ಸ್ನೇಹಿತನೇ ಗುಂಡಣ್ಣನವರಿಗೆ ಇದ್ದ ಸಂಗತಿಯನ್ನು ತಿಳಿಸಿದ. ಆ ಮಾರನೆಯ ದಿನ ಗುಂಡಣ್ಣನವರು ಆ ಯುವಕನನ್ನು ಬರಮಾಡಿಕೊಂಡು, "ಏನಯ್ಯ, ನಾಚಿಕೆಯಾಗುವ ಕೆಲಸವನ್ನು ಏಕೆ ಮಾಡಿಕೊಂಡೆ?" ಎಂದು ಕೇಳಿದರು. ಅವನು ಮುಸಿನಗು ನಕ್ಕ. ಗುಂಡಣ್ಣನವರು, "ಏನು ನಿನಗೆ ನಾಚಿಕೆ ಬೇರೆ ಉಂಟೆ? ಅಂಥ ಕೆಲಸಮಾಡಿ ನಗುತ್ತೀಯ?" ಎಂದು ಕೇಳಿ ಎಲ್ಲರ ಮುಂದೆಯೂ ಚೆನ್ನಾಗಿ ಲೇವಡಿ ಎಬ್ಬಿಸಿದರು.

ಒಂದೆರಡು ಕ್ಷಣ ಹಾಗಾದಮೇಲೆ ಅವನನ್ನು ಹತ್ತಿರಕ್ಕೆ ಕರೆದು- "ಹೆದರಬೇಡವಯ್ಯಾ; ನಾನ್ಯಾತಕ್ಕೆ ಇರೋದು? ಇಲ್ಲಿ ನೋಡು: ನಾನು ರಾತ್ರಿ ನಮ್ಮ ಮನೆಯಲ್ಲಿ ಮುಂಬಾಗಿಲ ಹತ್ತಿರ ಮಲಗಿರುತ್ತೇನೆ. ಆ ಬಾಗಿಲು ತಂತೀ ಜಾಲರಿಯ ಬಾಗಿಲು. ನಿನಗೆ ನಾನು ಬೇಕೆನಿಸಿದಾಗ ರಾತ್ರಿ ಹನ್ನೆರಡಾಗಲಿ, ಒಂದಾಗಲಿ, ಎರಡಾಗಲಿ, ನೀನು ಬಂದು ಧಾರಾಳವಾಗಿ ಕೂಗು. ಎದ್ದು ಬರಲು ಸಿದ್ಧನಾಗಿರುತ್ತೇನೆ. ಹೆದರಬೇಡ. ಹೆದರಿಕೆಗೆ ಕಾರಣವಿಲ್ಲ. ಹಣ ಬೇಕಾಗಿದ್ದರೆ ಹೇಳು. ದೇವರ ದಯೆಯಿಂದ ಎಲ್ಲ ಒಳ್ಳೆಯದಾಗುತ್ತದೆ." ಹೀಗೆ ಹೇಳಿ, ಒಳಕ್ಕೆ ಹೋಗಿ ಎರಡು ಹತ್ತುರೂಪಾಯಿ ನೋಟುಗಳನ್ನು ತಂದು ಅವನಿಗೆ ಕೊಟ್ಟು, "ಇದು ನಿನ್ನ ಹತ್ತಿರ ಇರಲಿ. ಅನುಕೂಲವಾದಾಗ ಹಿಂದಕ್ಕೆ ಕೊಡುವೆಯಂತೆ" ಎಂದು ಹೇಳಿ ಧೈರ್ಯ ತುಂಬಿ ಕಳುಹಿಸಿದರು.

ಅಲ್ಲಿಂದ ಮುಂದಕ್ಕೆ ಎರಡು ದಿನಕ್ಕೆ ಒಂದು ಸಲ ಅವರು ಆ ಯುವಕನ ಮನೆಗೆ ಹೋಗಿ, ಆತನ ಹೆಂಡತಿಯ ಸ್ಥಿತಿಯನ್ನು ನೋಡಿಕೊಂಡು ಬರುತ್ತಿದ್ದರು. ಒಂದಾನೊಂದು ರಾತ್ರಿ ಸುಮಾರು ೧೨ ಘಂಟೆಯ ವೇಳೆಗೆ ಆತ ಗುಂಡಣ್ಣನವರ ಮನೆಗೆ ಹೋಗಿ ನಿದ್ದೆಯಲ್ಲಿದ್ದ ಅವರನ್ನು ಹೆಸರು ಹಿಡಿದು ಕೂಗಿದ ಕೂಡಲೆ ಗುಂಡಣ್ಣನವರು- "ಏನೋ ಅಯ್ಯ, ಹ್ಯಾಗಿದ್ದಾಳೊ?" ಎಂದು ಕೇಳುತ್ತ ಮೇಲಕ್ಕೆದ್ದು, ಅಲ್ಲಿಯೇ ಇರಿಸಿದ್ದ ಕೋಟನ್ನು ತಗಲುಹಾಕಿಕೊಂಡು, ಪಕ್ಕದಲ್ಲಿಯೇ ಸಿದ್ಧವಾಗಿಟ್ಟುಕೊಂಡಿದ್ದ ಔಷಧ ಸಾಮಗ್ರಿಯ ಕೈಚೀಲವನ್ನು ತೆಗೆದುಕೊಂಡು ಹೊರಟರು. ಆ ಯುವಕನಿಗೆ "ನೀನು ಬೈಸಿಕಲ್ ಮೇಲೆ

ಹೊರಡು. ನಾನು ಕೋಚಿನಲ್ಲಿ ಬರುತ್ತೇನೆ" ಎಂದು ಹೇಳಿ, ತಮ್ಮ ಮನೆಯಿಂದ ಹೊರಟು. ಗುಂಡೋಪಂತರ ಬೀದಿಯ ಕೊನೆಯಲ್ಲಿದ್ದ ಗಾಡಿಖಾನೆಯ ಬಾಗಿಲನ್ನು ಒದ್ದು, ಗಾಡಿಯವನನ್ನು ಎಬ್ಬಿಸಿ, ಕೋಚ್ ಕಟ್ಟಿಸಿಕೊಂಡು, ಚಾಮರಾಜ ಪೇಟೆಯಲ್ಲಿದ್ದ ಆ ಯುವಕನ ಮನೆಗೆ ಬಂದರು.

ಅಲ್ಲಿಯ ಪರಿಸ್ಥಿತಿಯನ್ನು ನೋಡಿದರು. ಪೂರ್ವಕಾಲದ ಮುದುಕಿಯರಿಬ್ಬರು ಹೆರಿಗೆಯ ಕೋಣೆಯಲ್ಲಿ ಸೇರಿಕೊಂಡು ತಾವೇ ಪ್ರಸವಕಾರ್ಯವನ್ನು ಆಗಮಾಡಿಸುವುದಾಗಿ ಹೇಳಿಕೊಂಡು ಹೆಣಗಾಡುತ್ತಿದ್ದರು. ಅವರ ಕೈಸಾಗದೆ ದಿಕ್ಕುತೋಚದೆಹೋದ ಮೇಲೆ ಆ ಯುವಕನಿಗೆ ಡಾಕ್ಟರನ್ನು ಕರೆತರಬೇಕೆಂದು ಹೇಳಿದ್ದರು. ಡಾಕ್ಟರು ಬರುವ ವೇಳೆಗೆ ಆ ಕಿರಿಯ ವಯಸ್ಸಿನ ಗರ್ಭಿಣಿಗೆ ಬಹು ರಕ್ತ ನಷ್ಟವಾಗಿ ಪ್ರಜ್ಞೆ ತಪ್ಪಿದ ಸ್ಥಿತಿಯಾಗಿತ್ತು. ಮುದುಕಿಯರು ಸೂಲಗಿತ್ತಿತನವನ್ನು ಕ್ರಮವಾಗಿ ಕಲಿತಿದ್ದವರಲ್ಲ. ಅವರ ಒರಟು ಕೈವಾಡದಿಂದ ಗರ್ಭಿಣಿಯ ಸ್ಥಿತಿ ತೀರ ಹದಗೆಟ್ಟಿತ್ತು. ಗುಂಡಣ್ಣನವರು ಅದನ್ನು ನೋಡಿದ ಕ್ಷಣವೇ ಸಂದರ್ಭವನ್ನು ಗ್ರಹಿಸಿದರು. ಒಂದೆರಡು ಕೋಪದ ಮಾತನ್ನು ಆಡಿದರು. ಒಡನೆಯೇ ತಾವು ಬಂದಿದ್ದ ಗಾಡಿಯಲ್ಲಿಯೇ ಕುಳಿತು ಕೋಟೆಗೆ ಹೋಗಿ, ಅಲ್ಲಿಂದ ರೊಸೇರಿಯೊ ಎಂಬ ವೈದ್ಯಗಿತ್ತಿಯನ್ನು ಕರೆದುಕೊಂಡು ಬಂದು, ಆಕೆಯನ್ನು ಹೆರಿಗೆ ಕೋಣೆಯೊಳಕ್ಕೆ ಕಳುಹಿಸಿ, ತಾವು ಹೊರಗೆ ನಿಂತು ಆಕೆಯಿಂದ ವಿವರಣೆಗಳನ್ನು ಕೇಳಿ ತಿಳಿದುಕೊಂಡು ತಕ್ಕ ಚಿಕಿತ್ಸೆಯನ್ನು ಆಕೆಯ ಕೈಯಿಂದ ಮಾಡಿಸುತ್ತಿದ್ದರು. ಆಗ ರೋಗಿಯ ಸ್ಥಿತಿ ಏನೆಂದು ಕೇಳಿದವರಿಗೆ ಗುಂಡಣ್ಣನವರು "ಇನ್ನು ೪೮ ಘಂಟೆಗಳ ಕಾಲ ನನ್ನನ್ನು ಮಾತನಾಡಿಸಬೇಡಿ. ತುಟಿ ಬಿಗಿಹಿಡಿದುಕೊಳ್ಳಿ" ಎಂದು ಹೇಳಿದರು.

ಆ ದಿವಸವೂ ಮಾರನೆಯ ದಿವಸವೂ ಅವರು ಪ್ರಾಯಶಃ ದಿನದ ಬಹುಭಾಗವನ್ನೆಲ್ಲ ಆ ಮನೆಯಲ್ಲಿಯೇ ಕಳೆದರು. ಅವರ ಪುಣ್ಯದಿಂದ ದೈವ ಕೃಪೆ ಬಂದು ಮೂರನೆಯ ದಿನ ಆ ರೋಗಿ ಚೇತರಿಸಿಕೊಳ್ಳುವ ಭರವಸೆ ಕಂಡು ಬಂತು. ಆಮೇಲೆ ಇನ್ನೊಂದು ವಾರ ಗುಂಡಣ್ಣನವರು ಆ ರೋಗಿಯನ್ನು ಪ್ರತಿದಿನವೂ ಬೆಳಗ್ಗೆಯೊಂದು ಸಲ ಸಂಜೆಯೊಂದು ಸಲ ನೋಡಿಕೊಂಡು ಹೋಗುತ್ತಿದ್ದರು. ಇಂಥಾದ್ದು ಗುಂಡಣ್ಣನವರ ಬಿಟ್ಟಿಚಾಕರಿ. ಆಪತ್ಕಾಲಕ್ಕೆ ಆಗತಕ್ಕವರೆಂದರೆ ಅಂಥವರು.

ಗುಂಡಣ್ಣನವರು ಲೋಕದ ನೋವುಗಳನ್ನು ಚೆನ್ನಾಗಿ ತಿಳಿದಿದ್ದರು. ಅವರ ಸಾಹಿತ್ಯ ವ್ಯಾಸಂಗದಿಂದ ಅವರಿಗೆ ಮನುಷ್ಯರ ಅಂತರಂಗದರ್ಶನ ಸುಲಭವಾಗಿ ಆಗುತ್ತಿತ್ತು. ಬೆಂಗಳೂರಿನಲ್ಲಿ ಮೆಡಿಕಲ್ ಕಾಲೇಜ್ ಸ್ಥಾಪನೆಯಾಗಬೇಕೆಂದು ಮಾತು ಹೊರಟಿದ್ದಾಗ ಅವರು ನನಗೆ ಒಂದು ಸಲಹೆಯನ್ನು ಒತ್ತೊತ್ತಿ ಹೇಳುತ್ತಿದ್ದರು: "ಮೆಡಿಕಲ್ ಕಾಲೇಜಿನಲ್ಲಿ ಉಪಾಧ್ಯಾಯರಾಗುವವರು ವೈದ್ಯವಿದ್ಯೆಯಲ್ಲಿ

ಪ್ರವೀಣರಾಗಿರುವುದರ ಜೊತೆಗೆ ಸಾಹಿತ್ಯ ಪರಿಚಯವುಳ್ಳವರೂ ಆಗಿರಬೇಕು. ಬಿ. ಎ. ಮಟ್ಟಿಗಾದರೂ ಅವರು ಓದದೆ, ಬರಿಯ ವೈದ್ಯಕ ಡಿಗ್ರಿಗಳನ್ನು ಪಡೆದಿದ್ದರೆ ಸಾಲದು. ಸಾಹಿತ್ಯದ ಪೀಠಿಕೆಯಿಲ್ಲದವನಿಗೆ ಮನುಷ್ಯಸ್ವಭಾವ ತಿಳಿಯುವುದು ಕಷ್ಟ; ಮತ್ತು ಶಾಸ್ತ್ರ ಬೋಧನೆಗೆ ಬೇಕಾದ ವಿವರಣ ಸೌಲಭ್ಯವೂ ಇವನಿಗೆ ಇರಲಾರದು. ಶಾಸ್ತ್ರಗಳು ಪರಿಭಾಷೆಯಿಂದ ತುಂಬಿರುತ್ತವೆ. ಅವುಗಳನ್ನು ವಿಶದಪಡಿಸಬೇಕಾದರೆ ಬೋಧಕನಿಗೆ ವಿಶಾಲವಾದ ಶಬ್ದಸಂಪತ್ತಿರಬೇಕು. ಆ ಸಂಪತ್ತು ದೊರೆಯುವುದು ಕಾವ್ಯವ್ಯಾಸಂಗದಿಂದ. ಮನುಷ್ಯಸ್ವಭಾವದ ವಿಚಿತ್ರಗಳು ಮನದಟ್ಟಾಗುವುದು ಕಾವ್ಯವ್ಯಾಸಂಗದಿಂದ. ಆದಕಾರಣ ವೈದ್ಯಶಾಸ್ತ್ರಬೋಧಕರು ಸಾಹಿತ್ಯಜ್ಞಾನವುಳ್ಳವರಾಗಿರಬೇಕೆಂಬ ತತ್ತ್ವವನ್ನು ನೀನು ಪ್ರತಿಪಾದಿಸಬೇಕು." ಹೀಗೆ ಅವರು ನನಗೆ ಹೇಳುತ್ತಿದ್ದರು. ನಾನು ಅದರಂತೆ ಮಾಡಿಯೂ ಮಾಡಿದೆ. ಅದನ್ನು ಅಧಿಕಾರಸ್ಥರು ಕಿವಿಯಮೇಲೆ ಹಾಕಿಕೊಳ್ಳದೆಹೋದದ್ದು ಬೇರೆ ಕಥೆ.

ಮಾನವಬಾಂಧವ್ಯದ ವಿಚಾರದಲ್ಲಿ ನಾರದರು ಗುಂಡಣ್ಣನವರ ಸಮಾನಧರ್ಮಿಗಳು. ನಾರದರೂ ಮನುಷ್ಯಜೀವನದ ಆಳವನ್ನು ಕನಿಕರದ ಕಣ್ಣಿನಿಂದ ನೋಡಿದ್ದವರು. ತಮಗೆ ತಿಳಿದ ಯಾವ ಕುಟುಂಬದಲ್ಲಿಯಾದರೂ ಅವಿವೇಕ ನಡೆದಾಗ ಅವರು ಅದನ್ನು ತಿದ್ದಲು ಎಷ್ಟೋ ಉಪಾಯಗಳನ್ನು ಹವಣಿಸುತ್ತಿದ್ದರು. ಗಂಡಹೆಂಡರಿಗೆ ಮನಸ್ತಾಪ ಬಂದು ಮನೆಯೊಡೆಯುವ ಸೂಚನೆ ತೋರಿದಾಗ ನಾರದರು, ಆ ಮನೆಯನ್ನು ಉಳಿಸಲು ಎಷ್ಟೋ ಬಗೆಯಾಗಿ ಒದ್ದಾಡುತ್ತಿದ್ದರು. ಒಂದಾನೊಂದು ಕುಟುಂಬದಲ್ಲಿ ಒಬ್ಬ ಯುವಕ ವಿತಂತುವಿನ ಸ್ಥಿತಿಯು ಆಡಬಾರದ್ದಾಗಿ, ಆಕೆಯ ಬಂಧುವರ್ಗದ ಕೆಲವರು ಆಕೆಯನ್ನು ಮನೆಯಿಂದ ಹೊರಡಿಸಬೇಕೆಂದು ಉದ್ದೇಶಪಟ್ಟಿದ್ದಾಗ, ಆ ಸಂಗತಿ ನಾರದರಿಗೆ ತಿಳಿಯಬಂದು ಅವರು ಆ ಜನದಲ್ಲಿಗೆ ಹೋಗಿ, ಯಾವುದೋ ಒಂದು ಕ್ಷುದ್ರ ಅನುಮಾನದ ಕಾರಣದಿಂದ ಒಬ್ಬಾಕೆಯ ವಿಷಯದಲ್ಲಿ ಸಂದೇಹ ಪಡುವುದೂ ಯೌವನದ ಅಜ್ಞಾನದಿಂದ ನಡೆದ ಒಂದು ಪ್ರಮಾದಕ್ಕಾಗಿ ಆಕೆಯ ಉಳಿದ ಜೀವನವನ್ನೆಲ್ಲ ಹಾಳು ಮಾಡುವುದೂ ಧರ್ಮವಲ್ಲವೆಂದು ವಿವೇಕ ಹೇಳಿ, "ಆಕೆಯನ್ನು ನೀವು ಪ್ರೀತಿಯಿಂದ ಸಹಿಸಿ ಪೋಷಿಸುವುದು ನಿಮಗೆ ಸಾಧ್ಯವಾಗದೆ ಹೋದರೆ ಆಕೆಯನ್ನು ನನ್ನ ಜೊತೆಯಲ್ಲಿ ಕಳುಹಿಸಿ. ನಾನು ಆಕೆಯನ್ನು ನನ್ನ ಇನ್ನೊಬ್ಬ ಹೆಣ್ಣುಮಗಳೆಂದು ಭಾವಿಸಿ ಕಾಪಾಡುತ್ತೇನೆ" - ಎಂದರು; ಆ ವಿಷಾದ ಪ್ರಕರಣವನ್ನು ತಡೆದರು. ಅದರಿಂದ ಒಂದು ಜೀವ ಹಾಳುದಾರಿಗೆ ಹೋಗುವುದು ತಪ್ಪಿ ಮಾನವ ದಾರಿಯಲ್ಲಿ ಸಾಗುವಂತಾಯಿತು. ಇಂಥ ಒಳ್ಳೆಯ ಕೆಲಸಗಳೆಷ್ಟನ್ನೋ ಮಾಡಿದ್ದವರು ನಾರದರು.

ಅವರಿಗೆ ಆ ಹೆಸರು ಬಂದ ಕಾರಣವನ್ನು ಇಲ್ಲಿ ಹೇಳಬೇಕು. ಅವರು ತುಂಬ ವಿನೋದಪ್ರಿಯರು. ಎಲ್ಲರನ್ನೂ ನಗಿಸಬೇಕು, ತಾವು ಆ ನಗುವಿನಲ್ಲಿ ಸೇರಬೇಕು-ಇದು ಅವರ ಸಹಜ ಪ್ರವೃತ್ತಿ. ಅವರಿಗೆ ಬಂಧುಮಿತ್ರವರ್ಗ ವಿಸ್ತಾರವಾಗಿತ್ತು. ಅದರಲ್ಲಿ ತಮಗೆ ಅನುಕೂಲವಾದಾಗ ಅವರಿವರ ಮನೆಗಳಿಗೆ ಹೋಗಿ ಯೋಗಕ್ಷೇಮ ವಿಚಾರಿಸಿಕೊಂಡು ಬರುವುದು ಅವರ ಪದ್ಧತಿ. ಅವರು ವಯಸ್ಸಿನಲ್ಲಿ ವೃದ್ಧರಾಗಿಯೂ, ಆಕಾರದಲ್ಲಿ ಸೌಮ್ಯರಾಗಿಯೂ, ಮಾತಿನಲ್ಲಿ ನಯಶಾಲಿಯಾಗಿಯೂ ಇದ್ದದ್ದರಿಂದ ಎಲ್ಲರಿಗೂ ಅವರಲ್ಲಿ ನಂಬಿಕೆ. ಪ್ರತಿಯೊಬ್ಬರೂ ತಮ್ಮ ತಮ್ಮ ಕಷ್ಟನಿಷ್ಠುರಗಳನ್ನು ಅವರಲ್ಲಿ ಮನಸ್ಸು ಬಿಚ್ಚಿ ಹೇಳಿಕೊಳ್ಳುತ್ತಿದ್ದರು. ಅವರೂ ಕೂಡ ಆ ಜನರನ್ನು ವಿನೋದಪಡಿಸಲು ಅವಕಾಶ ಹುಡುಕುತ್ತಿದ್ದರು. ಒಬ್ಬಾನೊಬ್ಬ ಸ್ನೇಹಿತರ ಮಗಳಿಗೆ -ಆ ರೂಪವತಿಗೆ, ಹೊಂಬಣ್ಣದ ಮೈಯವಳಿಗೆ-ಒಬ್ಬ ಕರಿಯನು ಗಂಡನಾದ. ಅವರು ಸಂಸಾರ ಹೂಡಿ ಕೆಲವು ದಿನವಾದ ಮೇಲೆ ನಾರದರು ಆ ಮನೆಗೆ ಹೋಗಿ ಆ ಹುಡುಗಿಯ ಗಂಡ ಆಕೆಯ ಪಕ್ಕದಲ್ಲಿಲ್ಲದಿದ್ದಾಗ ಆಕೆಯನ್ನು ಬಳಿಗೆ ಕರೆದು ಕುಳ್ಳಿರಿಸಿಕೊಂಡು- "ಅಮ್ಮಣ್ಣಿ, ನಿನ್ನ ಗಂಡ ದೊಡ್ಡ ಸಂಬಳ ತೆಗೆಯುತ್ತಿದ್ದಾನೆ. ಬಹಳ ಒಳ್ಳೆಯವನು. ಆದರೆ ಅವನು ಸ್ವಲ್ಪ ಬೆಳ್ಳಗಿದ್ದಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು ಎಂದು ನಿನಗೆ ಅನ್ನಿಸುವುದಿಲ್ಲವೆ?" ಎಂದು ಕೇಳಿದರು. ಆಕೆ ನಾಚಿಕೆಯಿಂದ "ಹೋಗಿ ತಾತ" ಎಂದಾಗ, ಅವರು "ಸರಿ ಸರಿ, ಅರ್ಥವಾಯಿತು" ಎಂದು ಹೇಳಿ ಗಂಡನ ಬಳಿಗೆ ಬರುವರು. ಬಂದು ಆತನನ್ನು "ಒಳ್ಳೆ ಅದೃಷ್ಟಶಾಲಿಯಯ್ಯ ನೀನು. ನಿನ್ನ ಹೆಂಡತಿನ್ನೂ ನಿನ್ನನ್ನೂ ನೋಡಿದರೆ ಜೇಡಿಮಣ್ಣಿನ ಮುದ್ದೆಯಲ್ಲಿ ಮುತ್ತನ್ನು ಸಿಕ್ಕಿಸಿದ ಹಾಗೆ ಕಾಣುತ್ತೀರಿ. ಏನು ಪುಣ್ಯ ಮಾಡಿದ್ದೆಯಯ್ಯ!" ಎಂದು ಹಾಸ್ಯ ಮಾಡುವರು.

ಒಂದಾನೊಂದು ದಿನ ಮಧ್ಯಾಹ್ನಾನಂತರ ನಾರದರು ಒಬ್ಬಾತನ ಮನೆಗೆ ಹೋದರು. ಆತನ ಹೆಸರು ದೇವಯ್ಯಂಗಾರ್ ಎಂದು ಇಟ್ಟುಕೊಳ್ಳೋಣ. ಆತನು ನಾರದರ ಒಬ್ಬ ಸ್ನೇಹಿತರ ಅಳಿಯ. ಅವನು ಆಗ ಕಛೇರಿಗೆ ಹೋಗಿದ್ದ. ಆತನ ಹೆಂಡತಿ ನಾರದರನ್ನು ನೋಡಿ ಸಂಭ್ರಮದಿಂದ ಸ್ವಾಗತಿಸಿ, ತಿಂಡಿ ಕಾಫಿಗಳನ್ನು ತಂದು ನಾರದರ ಮುಂದಿಟ್ಟಳು. ಅವರು ಅದನ್ನು ಸೇವಿಸುತ್ತ ಆ ಮಾತು ಈ ಮಾತು ತೆಗೆದು- "ಏನಮ್ಮಣ್ಣಿ, ಗಂಡನನ್ನು ಚೆನ್ನಾಗಿ ಕೈಯಲ್ಲಿಟ್ಟುಕೊಂಡಿದ್ದಿ. ಬಹಳ ಸಂತೋಷ" ಎಂದರು.

ಆಕೆ: "ಅದೇನು ಹಾಗೆ ಹೇಳುತ್ತೀರಿ! ನಾನೇನು ಮಾಡಿದೆ ಅವರಿಗೆ?"

ನಾರದರು: "ಮೊನ್ನೆ ಚಿಕ್ಕಪೇಟೆಯಲ್ಲಿ ಆತ ಸಿಕ್ಕಿದ್ದರು. ಕಂಕುಳದಲ್ಲಿ ಸೀರೆ ಕುಪ್ಪುಸದ ಪ್ಯಾಕೆಟ್ಟು ಇದ್ದ ಹಾಗೆ ಕಾಣಿಸಿತು. ಅಲ್ಲಿಂದ ಮಾರ್ಕೆಟ್‌ವರೆಗೂ ಜೊತೆಯಲ್ಲಿ ಹೋದೆವು. ಹೂವು ತಿಂಡಿಯ ಪೊಟ್ಟಣ

ಕಟ್ಟಿಸಿಕೊಂಡು ಬಂದ ಆತ. ಬಹಳ ಸಂತೋಷವಾಯಿತು. ನಿನ್ನ ಮೇಲೆ ಇಷ್ಟೊಂದು ಪ್ರೀತಿ ಇಟ್ಟಿದ್ದಾನಲ್ಲ!"

ಆಕೆ: "ಅದೇನೋ ನಮಗೆ ತಿಳಿಯದು! ಸೀರೆಯೂ ಕಾಣೆ ಕುಪ್ಪಸವೂ ಕಾಣೆ!"

ನಾರದರು: "ಸರಿ ಸರಿ. ಹಾಗಾದರೆ ಆತ ತಂಗಿಯ ಮನೆಗೋ ಎಲ್ಲಿಗೋ ಹೋಗಿರಬಹುದು. ಜೊತೆಯಲ್ಲಿ ಯಾರೋ ಇದ್ದರು."

ಹೀಗೇ ಹೇಳಿ, ಬೇರೆ ಮಾತೆತ್ತಿ ಸ್ವಲ್ಪ ಹೊತ್ತಿನ ಮೇಲೆ ಹೊರಟು ಹೋದರು. ಆ ರಾತ್ರಿ ದೇವಯ್ಯಂಗಾರ್ಯನ ಮನೆಯಲ್ಲಿ ಎಂಥ ಕೋಲಾಹಲ ನಡೆದಿರಬಹುದೆಂಬುದನ್ನು ಸಂಸಾರಿಗಳೆಲ್ಲ ಊಹಿಸಿಕೊಳ್ಳಬಲ್ಲರು.

ಹೀಗೆಯೇ ದೇವಯ್ಯಂಗಾರ್ಯನ ಕೂಡ ಮಾತನಾಡುತ್ತ "ಏನಯ್ಯ, ನಿಮ್ಮ ಮನೆಗೆ ಬಂದದ್ದೆ ಆ ಹೊತ್ತು. ನನ್ನ ಅದೃಷ್ಟಕ್ಕೆ ನಿನ್ನ ಹೆಂಡತಿಯ ಅಣ್ಣನೂ ಬಂದಿದ್ದ. ನೀನೇನೋ ಮನೆಯಲ್ಲಿರಲಿಲ್ಲ. ಆದರೂ ಸಜ್ಜೆಪ್ಪ ಆಂಬೊಡೆ ತೀನಿಗಳೆಲ್ಲ ನನಗೂ ಸಿಕ್ಕಿತು. ಸಂತೋಷ. ನಿಮ್ಮ ಮನೆಗೆ ಹೆಂಡತಿಯ ಕಡೆ ಬಂಧುಗಳು ಆಗಾಗ ಬರುತ್ತಿದ್ದರೆ ನನ್ನಂಥವರಿಗೂ ಒಳ್ಳೆಯದು" ಎಂದು ಹೇಳುವರು. ಇಂಥ ಮಾತಿನಿಂದ ಮನೆಯಲ್ಲಿ ಗಂಡ ಹೆಂಡರಿಗೆ ಎಂಥ ಸರಸವಾದೀತೋ ಊಹಿಸಿಕೊಳ್ಳಬಹುದು.

ಇಂಥ ಪ್ರಸಂಗಗಳನ್ನು ಕಟ್ಟಿದ ಮೇಲೆ ಒಂದೆರಡು ದಿನಗಳೊಳಗಾಗಿ ನಾರದರು ಆ ಮನೆಗಳಿಗೆ ಹೋಗಿ ಅಲ್ಲಿಯ ಕೋಲಾಹಲವನ್ನು ಕಂಡು, ಅವರಾಡಿದ ಹುಚ್ಚಾಟಕ್ಕಾಗಿ ಹಾಸ್ಯವೆಬ್ಬಿಸಿ, ಸಮಾಧಾನಪಡಿಸಿ ಬರುತ್ತಿದ್ದರು. ಆದರೆ ಅರೆದಿನದ ಮಟ್ಟಿಗೆ ಅವರ ನಾರದರ ಪಾರ್ಟು ಪರಿಣಾಮಕಾರಿಯಾಗುತ್ತಿತ್ತು. ಅವರು ಹೇಳಿದ್ದ ಸಂಗತಿಗಳೆಲ್ಲ ದಿಟ. ಚಿಕ್ಕಪೇಟೆಯಲ್ಲಿ ದೇವಯ್ಯಂಗಾರ್ಯನನ್ನು ನೋಡಿದ್ದದ್ದು ದಿಟ. ಅವನ ಕಂಕುಳದಲ್ಲಿ ಪೊಟ್ಟಣವಿದ್ದದ್ದು ಮೊದಲಾಗಿ ಎಲ್ಲ ದಿಟ. ಆದರೆ ಅದನ್ನು ಹೇಳಿದ ರೀತಿ ಮಾತ್ರ ಕೊಂಕು. ಅದು ತಮಾಷೆಗಾಗಿ.

ಅಮೃತೂರಿನ ಬಳಿ ಎಲ್ಲೋ ಒಳ್ಳೆ ಚಾಪೆಗಳು ತಯಾರಾಗುತ್ತಿದ್ದುವಂತೆ. ನನಗೆ ಒಂದೆರಡು ಬೇಕೆಂದು ನಾನು ನಾರದರಿಗೆ ಹೇಳಿದೆ. ಅವರು ಊರಿಂದ ಐದಾರು ಚಾಪೆಗಳ ಕಟ್ಟನ್ನು ಕಳುಹಿಸಿ ಅದರ ಜೊತೆಯಲ್ಲಿ ಒಂದು ಕಾಗದವನ್ನು ಅನುಗ್ರಹಿಸಿದರು. ಅದರಲ್ಲಿದ್ದ ವಿವರಣೆ ಹೀಗೆ: "ಸಣ್ಣ ಚೌಕದ ಚಾಪೆ, ತೀರ್ಥರೂಪರು ಪಾರಾಯಣಕ್ಕೆ ಕೂಡುವಾಗ ಉಪಯೋಗಿಸತಕ್ಕದ್ದು. ಸಾಮಾನ್ಯ ಚಾಪೆ,

ಮಾತೃಶ್ರೀಯವರು ಅಡಿಗೆಮಾಡಿ ನೀವು ಊಟಕ್ಕೆ ಬರಲಿಲ್ಲವೆಂದು ಎರಡು ಘಂಟೆಯವರೆಗೂ ಮಡಿಯಲ್ಲಿ ಕಾದುಕೊಂಡಿರುವಾಗ ಉಪಯೋಗಿಸತಕ್ಕದ್ದು. ಎರಡಡಿ ಅಗಲದ ಉದ್ದ ಚಾಪೆ, ದೇವಿಯವರು ಮೂರು ದಿನ ಹೊರಗಿರಲು ನೀವು ಬಿಡುವು ಕೊಟ್ಟಾಗ ಅವರು ಉಪಯೋಗಿಸತಕ್ಕದ್ದು. ದೊಡ್ಡ ಬಣ್ಣದ ಚಾಪೆ, ತಾವು ಸ್ನೇಹಿತರನ್ನು ಕುಳ್ಳಿರಿಸಿಕೊಂಡು ಹುರಿಗಾಳು ಕೋಡಬಳೆ ಮೆಲ್ಲುವಾಗ ಉಪಯೋಗಿಸಿಕೊಳ್ಳತಕ್ಕದ್ದು." ಇಂಥಾದ್ದು ನಾರದರ ಹೃದಯ.

ಒಂದು ದಿನ "ರಿಲೈಯನ್ಸ್" ನಲ್ಲಿ ನಾವೆಲ್ಲ ಕುಳಿತಿದ್ದಾಗ ಅಂಚೆಯಾಳು ಕಾಗದಗಳನ್ನು ತಂದು ಗುಂಡಣ್ಣನವರ ಕೈಗೆ ಕೊಟ್ಟ. ಅವರು ಟಪ್ಪಾಲನ್ನೆಲ್ಲ ಮೇಲೆ ಮೇಲೆ ನೋಡಿ, ಲೆಕ್ಕಪತ್ರದ ಇಲಾಖೆಗೆ ಕಳುಹಿಸಿ, ಒಂದು ಕಾರ್ಡನ್ನು ಮಾತ್ರ ತಮ್ಮಲ್ಲಿ ಉಳಿಸಿಕೊಂಡರು. ಅದನ್ನು ಕೈಯಲ್ಲಿ ಹಿಡಿದು ನಮ್ಮನ್ನುದ್ದೇಶಿಸಿ- "ಎಲಾ, ನೀವೆಲ್ಲ ಮಹಾ ಬುದ್ಧಿವಂತರು; ಆದರೆ ಸತ್ಯವಂತರಲ್ಲ. ಈ ಕಾರ್ಡು ಬರೆದಿರುವವನು ಬಲು ಜಾಣ ಮತ್ತು ಸತ್ಯವಾದಿ" ಎಂದರು. ಅದು ಹೇಗೆಂದು ನಾವು ಕೇಳಿದೆವು. ಗುಂಡಣ್ಣನವರು ಆ ಕಾರ್ಡನ್ನು ನಮ್ಮ ಕೈಗೆ ಕೊಟ್ಟು "ಮೇಲ್ವಿಳಾಸವನ್ನು ನೋಡಿ" ಎಂದರು. ಅದರಲ್ಲಿ ಅವರ ಹೆಸರು ಇಂಗ್ಲಿಷಿನಲ್ಲಿ ಹೀಗೆ ಬರೆದಿತ್ತು: Gudana ("ಗುಡಾಣ.") "ನೋಡಿದಿರೋ ಎಷ್ಟು ಯಥಾರ್ಥವಾಗಿದೆ! ನಿಮಗೆ ಎಂದಾದರೂ ಇದು ತೋಚಿತ್ತೆ?" -ಇಂಥಾ ನಗು ನಗಿಸುವ ಪ್ರಸಂಗಗಳು ಗುಂಡಣ್ಣನವರ ಗೋಷ್ಠಿಯಲ್ಲಿ ಪದೇ ಪದೇ ಬರುತ್ತಿದ್ದವು.

ಕೆಲವು ಕಾಲ ನನ್ನ ಒಂದಾನೊಂದು ಪತ್ರಿಕೆ ಆರ್ಕಾಟು ಶ್ರೀನಿವಾಸಾಚಾರ್ಯರ ಬೀದಿಯಲ್ಲಿದ್ದ ನವರತ್ನದವರ ಮುದ್ರಾಣಾಲಯದಲ್ಲಿ ಅಚ್ಚಾಗುತ್ತಿತ್ತು. ಆಗ ಪ್ರತಿನಿತ್ಯ ಸಂಜೆ ಸುಮಾರು ನಾಲ್ಕು ಘಂಟೆಗೆ ನಾನು ಒಬ್ಬರಿಬ್ಬರು ಸ್ನೇಹಿತರೊಡನೆ ಅಲ್ಲಿಂದ ಹೊರಟು ಮಾಮೂಲ್ ಪೇಟೆಯ ಮೂಲಕ ಹಾದು ಬಸವಣ್ಣನ ಗುಡಿಯ ಹಿಂದೆ ಚಿಕ್ಕಪೇಟೆಗೆ ತಿರುಗಿ ಅಲ್ಲಿ ಅಹಮದ್ ಬಿಲ್ಡಿಂಗ್ಸ್‌ನಲ್ಲಿದ್ದ ಹಿಂದೂ ರೆಸ್ಟೊರೆಂಟ್ ನಲ್ಲಿ ಫಲಾಹಾರ ತೀರಿಸಿಕೊಂಡು ಅದೇ ದಾರಿಯಿಂದ ಹಿಂತಿರುಗುತ್ತಿದ್ದದ್ದು ಪದ್ಧತಿ. ಒಂದು ಸಂಜೆ ಹೀಗೆ ಹಿಂದಿರುಗಿ ಬರುತ್ತಿದ್ದಾಗ ಒಂದು ಸಂಗತಿ ನಡೆಯಿತು. ಮಾಮೂಲ್ ಪೇಟೆಯಲ್ಲಿ ಎರಡು ಮನೆಗಳು ಅವಳಿಜವಳಿಗಳಂತೆ ಪಕ್ಕಪಕ್ಕದಲ್ಲಿದ್ದವು. ಅವುಗಳಲ್ಲೊಂದರಲ್ಲಿ ದೊಡ್ಡಮನುಷ್ಯರು ವಾಸವಾಗಿದ್ದರು. ಇನ್ನೊಂದರಲ್ಲಿ ಒಬ್ಬ ನಾಯಕಸಾನಿ ವಾಸವಿದ್ದರಂತೆ. ನನಗೆ ಈ ಸಂಗತಿ ಗೊತ್ತಿರಲಿಲ್ಲ. ಆ ಮನೆಗಳಲ್ಲಿ ಯಾವುದು ಯಾರದೆಂದು ಗುರುತುಹಿಡಿಯಲು ಹೆಗ್ಗುರುತು ಯಾವುದೂ ನನಗೆ ಕಾಣಿಸಿರಲಿಲ್ಲ. ಆ ದೊಡ್ಡಮನುಷ್ಯರ ದೂರದ ಪರಿಚಯ ನನಗೆ ಇತ್ತು. ಅವರು ಕಾಲೇಜಿನ ಬಿ.ಎ., ಸೀನಿಯರ್

ತರಗತಿಯಲ್ಲಿದ್ದಾಗ ನಾನು ಹೈಸ್ಕೂಲಿನ ನಾಲ್ಕನೆಯ ಫಾರಂ (ಮೊದಲತರಗತಿ)ನಲ್ಲಿದ್ದೆ; ಆದರೆ ಇಬ್ಬರೂ ಹಾಸ್ಟೆಲಿನಲ್ಲಿದ್ದವಾದ್ದರಿಂದ ನನಗೆ ಮುಖಪರಿಚಯವೂ ವ್ಯಕ್ತಿಕುತೂಹಲವೂ ಇದ್ದವು. ಆ ಬಳಿಕ ಅವರು ಇಂಗ್ಲೆಂಡಿಗೆ ಹೋಗಿ ಎರಡು ಮೂರು ವರ್ಷ ಅಲ್ಲಿ ವಿದ್ಯೆ ಕಲಿತು ಬಂದಿದ್ದರು. ಆದ್ದರಿಂದ ನನ್ನ ಕುತೂಹಲ ಇಮ್ಮಡಿಯಾಯಿತು. ಅವರು ವಾಸವಿದ್ದ ಸ್ಥಳವಾವುದೆಂದು ತಿಳಿದುಕೊಳ್ಳುವುದಕ್ಕಾಗಿ ನಾನು ಮೇಲೆ ಹೇಳಿದ ಜೋಡಿಮನೆಗಳ ಮುಂದೆ ನಿಂತು ಕಣ್ಣಿನಿಂದ ಹುಡುಕಾಡುತ್ತಿದ್ದೆ.

ಆ ಘಳಿಗೆಗೆ ಸರಿಯಾಗಿ ಅಲ್ಲಿಗೆ ಗುಂಡಣ್ಣನವರು ಶ್ರೀನಿವಾಸಾಚಾರ್ ರಸ್ತೆಯ ಕಡೆಯಿಂದ ಬರುತ್ತಿದ್ದರು. ನನ್ನ ಗಮನವೆಲ್ಲ ಆ ಮನೆಗಳ ಮೇಲೆ ಕೇಂದ್ರೀಕೃತವಾಗಿದ್ದದ್ದರಿಂದ ನನ್ನ ದೃಷ್ಟಿ ಗುಂಡಣ್ಣನವರ ಕಡೆ ಹೋಗಲಿಲ್ಲ. ಗುಂಡಣ್ಣನವರೇ ಕೂಗಿದರು: "ಲೇ, ಮಗನೇ, ದುರ್ಬಿನ್ ಹಾಕುತ್ತಿದ್ದೀಯೋ! ಹಾಕು, ಹಾಕು, ನಿಮ್ಮಪ್ಪನಿಗೆ ಹೇಳುತ್ತೇನೆ" ಎಂದರು. ನಾನು ಇದ್ದ ಸಂಗತಿ ವಿವರಿಸಿದೆ. ಅದನ್ನು ಅವರು ನಂಬದವರಂತೆ ನಟಿಸಿ, "ಪರವಾ ಇಲ್ಲಯ್ಯ, ಆ ಸರಕು ಚೆನ್ನಾಗಿದೆ, ಅದಕ್ಕೇ ನಿನ್ನ ದುರ್ಬಿನ್ ಅಲ್ಲಿ" ಎಂದು ಹೇಳುತ್ತ ಮುಂದೆ ನಡೆದರು. ಆ ಮಾತನ್ನು ಅಲ್ಲಿಗೇ ಬಿಡದೆ ತಮ್ಮ ಚಿಕಿತ್ಸಾಲಯಕ್ಕೆ ಹೋದಮೇಲೂ ಅದನ್ನೆತ್ತಿ ಅಲ್ಲಿದ್ದ ಸ್ನೇಹಿತಮಂಡಲಿಗೆಲ್ಲಾ ಹಂಚಿದರು. ಆಮೇಲೆ ೧೦-೧೫ ದಿನ ನಾನು ಹೋದ ಕಡೆಯಲ್ಲೆಲ್ಲಾ ಅದೇ ಕುಚೋದ್ಯವೇ.

ಒಂದಾನೊಂದು ದಿವಸ ಗುಂಡಣ್ಣನವರ ಮನೆಯಲ್ಲಿ ಸಂತೋಷಭೋಜನ. ಅಂದು ಬಹುಶಃ ಅವರ ಎರಡನೆಯ ಮಗನ ಉಪನಯನವಿರಬಹುದು. ಸುಮಾರು ೧೦೦-೧೨೦ ಮಂದಿ ಬಂಧುಮಿತ್ರರು ಬಂದು ಎಲೆಗಳ ಮುಂದೆ ಕುಳಿತಿದ್ದಾರೆ. ನಾರದರು-ಇನ್ನೂ ಅವರು ಬಂದಿಲ್ಲ, ಇವರು ಬಂದಿಲ್ಲ ಎಂದು ವರದಿ ಹೇಳುತ್ತ, 'ಅಪಾನ ವಾಯುವೂ ಬಂದಿಲ್ಲ!' ಎಂದರು. ಗುಂಡಣ್ಣನವರು "ಅದು ನೀವು ಹೇಳಿದಾಗ ಬರುತ್ತದೆಯೆ? ಹೇಳಿದ ಮಾತು ಕೇಳಿದರೆ ಅದಕ್ಕೆ ಯಾಕೆ ಆ ಹೆಸರು?" ಎಂದು ಜವಾಬು ಕೊಟ್ಟರು. ಕೆಲವರು ಇದನ್ನೆಲ್ಲ ಕೇಳಿ ನಗುತ್ತಿದ್ದರು. ನನಗೆ ಅರ್ಥವಾಗಲಿಲ್ಲ. ನಾರದರನ್ನು ಕೇಳಿದೆ. ಅವರು- "ಬೆಪ್ಪೆ, ಗೊತ್ತಿಲ್ಲವೆ? ಯಾವ ಪದಾರ್ಥವನ್ನು ಒಳಗಿರಿಸಿ ಕೊಳ್ಳುವುದು ಕಷ್ಟವೋ ಹೊರಕ್ಕೆ ಬೀಡುವುದು ಅನಿಷ್ಟವೋ ಅದು ಅಪಾನವಾಯು. ನಮ್ಮ ಬಂಧುಗಳಲ್ಲಿ-ರ್ ಅವರು ಎಂಥಾವರು ನೀನು ಕಾಣೆಯ? ಅವರನ್ನು ಕರೆದರೂ ಕಷ್ಟ. ಬಿಟ್ಟರೂ ಕಷ್ಟ. ಜೊತೆಯಲ್ಲಿರಿಸಿಕೊಳ್ಳಲು ಅರ್ಹರಲ್ಲ, ಬಿಟ್ಟು ಬಿಡಲು ದೂರದವರಲ್ಲ. ಏನು ಮಾಡುವುದು?" ಎಂದು ಹೇಳಿದರು. ಆ ಉಪಮಾನದ ಔಚಿತ್ಯವೂ ಸಾಮಂಜಸ್ಯವೂ ಸಂಪೂರ್ಣವಾದದ್ದೆಂದು ನನ್ನ ಮನಸ್ಸಿಗೆ ನೂರಾರು ಸಲ ತೋರಿಬಂದಿದೆ.

ಅಮೃತೂರು ಶ್ರೀನಿವಾಸಯ್ಯಂಗಾರ್ಯರು ಮಹಾ ಕರುಣಾಳು, ಪರೋಪಕಾರಿ ಪಾಪದ ಯೋಚನೆ ಅವರ ಬಳಿ ಸುಳಿದಾಡುತ್ತಿರಲಿಲ್ಲ. ಅಂಥ ಹಿರಿಯರೂ ವಿವೇಚನ ಶೀಲರಾದ ಇಂಗಿತಜ್ಞರೂ ಇರುವ ಕಡೆ ಎಲ್ಲ ಮಂಗಳಕರವಾಗಿರುತ್ತದೆ. ಎಲ್ಲಿ ಗುಂಡಣ್ಣನಂಥವರೂ ನಾರದರಂಥವರೂ ಸಹಾಯಕ್ಕಿರುತ್ತಾರೋ ಅಲ್ಲಿ ಯಾರಿಗೂ ಅಧೈರ್ಯಕ್ಕೆ ಕಾರಣವಿರದು. ಅಲ್ಲಿ ನೀಚತನ ನಿಲ್ಲದು.

# ೧೬

# ರಾಯ್ ಬಹದ್ದೂರ್ ಆರ್ಕಾಟ್ ಶ್ರೀನಿವಾಸಾಚಾರ್ಯರು

೧೯೧೦ರ ಸುಮಾರಿನಲ್ಲಿ ನಾನು ದಿವಾನ್ ರಂಗಾಚಾರ್ಯರ ಮೈಸೂರು ಆಡಳಿತವನ್ನು ಕುರಿತು ಇಂಗ್ಲಿಷಿನಲ್ಲಿ ಬರೆದ ಒಂದು ಲೇಖನವು ಮದರಾಸಿನ 'ಇಂಡಿಯನ್ ರೆವ್ಯೂ' ಎಂಬ ಮಾಸಪತ್ರಿಕೆಯಲ್ಲಿ ಪ್ರಕಟವಾಯಿತು. ಅದರಿಂದ ನನಗೆ ಅಂದಿಗೆ ಬೇಕಾಗಿದ್ದ ಸಂಭಾವನೆಯ ಜೊತೆಗೆ ಕೆಲ ಮಂದಿ ದೊಡ್ಡ ಮನುಷ್ಯರ ಪರಿಚಯದ ಲಾಭವಾಯಿತು. ಆ ಲಾಭಗಳಲ್ಲಿ ಅತಿ ಮುಖ್ಯವಾದವು ಎರಡು: ಒಂದು ಆಗ ಮೈಸೂರಿನಲ್ಲಿ ಚೀಫ್ ಇಂಜಿನಿಯರೂ ಎಕನಾಮಿಕ್ ಕಾನ್ಫರೆನ್ಸಿನ ಒಂದು ಶಾಖೆಯ ಅಧ್ಯಕ್ಷರೂ ಆಗಿದ್ದ ಶ್ರೀ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಬರೆದ ಮೆಚ್ಚಿಗೆಯ ಕಾಗದ; ಇನ್ನೊಂದು ಆರ್ಕಾಟ್ ಶ್ರೀನಿವಾಸಾಚಾರ್ಲು ಅವರ ಮೆಚ್ಚಿಕೆಯ ಮಾತು.

ಆರ್ಕಾಟ್ ಶ್ರೀನಿವಾಸಾಚಾರ್ಲು ಅವರು ನನ್ನ ಲೇಖನವನ್ನು ಆ ಪತ್ರಿಕೆಯಲ್ಲಿ ನೋಡಿದ್ದಲ್ಲದೆ, ಅನಂತರ ಅದು ಇನ್ನೂ ಕೊಂಚ ವಿಸ್ತಾರವಾಗಿ ಪುಸ್ತಕ ರೂಪದಲ್ಲಿ ಬಂದಿದ್ದನ್ನು ಓದಿದ್ದರಂತೆ. ಆಗ ಅವರು ಶ್ರೀರಂಗದಲ್ಲಿ ವಾಸವಾಗಿದ್ದರು. ಅಲ್ಲಿಂದ ತಮ್ಮ ಪದ್ಧತಿಯಂತೆ ಬೇಸಗೆ ಕಳೆಯಲು ಬೆಂಗಳೂರಿಗೆ ಬಂದಾಗ ಶ್ರೀಮಾನ್ ಪುಟ್ಟಣ್ಣಶೆಟ್ಟರವರೊಡನೆ ಒಂದು ದಿನ ಮಾತನಾಡುತ್ತಿರುವಾಗ್ಗೆ ನನ್ನ ಲೇಖನವನ್ನು ಪ್ರಸ್ತಾವಿಸಿ- "ಈ ಲೇಖಕ ಯಾರು? ನಿಮಗೆ ತಿಳಿದಾತನೆ?" ಎಂದು ಕೇಳಿದರಂತೆ. ಪುಟ್ಟಣ್ಣಶೆಟ್ಟರು ನನಗೆ ಹೇಳಿಕಳುಹಿಸಿ, ಒಂದು ಸಂಜೆ ನನ್ನನ್ನು ಶ್ರೀನಿವಾಸಾಚಾರ್ಲು ಅವರ ಮನೆಗೆ ಕರೆದುಕೊಂಡು ಹೋದರು. ಆ ದಿನ ಲಾಲ್‌ಬಾಗಿನ ಮುಂದೆ ಹೊರಟು ಕಲಾಸಿಪಾಳ್ಯದ ಪಕ್ಕದಿಂದ ಚಾಮರಾಜಪೇಟೆ ಐದನೆ ಬೀದಿಗೆ ಸೇರುವ ರಸ್ತೆಯಲ್ಲಿ ಇರುವ ಬಂಗಲೆ.

ಆ ಮನೆ ಹಿಂದೆ ಪ್ರಸಿದ್ಧರಾಗಿದ್ದ ಶ್ರೀಮಾನ್ ಎಂ, ರುದ್ರಪ್ಪನವರ ಮಕ್ಕಳು ಶ್ರೀ ಎಂ. ಸುಬ್ಬಯ್ಯನವರಿಗೆ ಸೇರಿದ್ದದ್ದು. ರುದ್ರಪ್ಪನವರೂ ಸುಬ್ಬಯ್ಯನವರೂ ಆರ್ಕಾಟ್ ಶ್ರೀನಿವಾಸಾಚಾರ್ಲು ಅವರಲ್ಲಿ ತುಂಬಾ ಪ್ರೀತಿ ವಿಶ್ವಾಸಗಳನ್ನು ಇಟ್ಟಿದ್ದವರು. ಬೆಂಗಳೂರಿನಲ್ಲಿ ಶ್ರೀನಿವಾಸಾಚಾರ್ಯರು ವಾಸ ಮಾಡುವಾಗ ತಮ್ಮ ಈ

ಲಾಲ್‌ಬಾಗ್ ಬಳಿಯ ಮನೆಯಲ್ಲಿಯೇ ಅವರು ವಾಸವಿರಬೇಕೆಂದು ಆ ತಂದೆಮಕ್ಕಳು ಕೋರಿಕೊಂಡಿದ್ದರಂತೆ. ಅದರಂತೆ ಶ್ರೀನಿವಾಸಾಚಾರ್ಯರು ಆ ಮನೆಯಲ್ಲಿರುತ್ತಿದ್ದರು.

ಆ ಮನೆಯ ಎದುರುಗಡೆ ಆಗ ಒಂದು ಸಣ್ಣ ಬಯಲಿತ್ತು. ಶ್ರೀನಿವಾಸಾಚಾರ್ಯರು ಅದಕ್ಕೆ ಪವುಳಿ ಗೋಡೆ ಹಾಕಿಸಿ ನಡುವೆ ಒಂದು ಸಣ್ಣ ಚೌಕಂಬವನ್ನು ಕಟ್ಟಿಸಿ ಅದರ ಮುಖಾಂತರ ಒಂದು ನೀರಿನ ನಲ್ಲಿಯನ್ನು ಆ ಪ್ರದೇಶದ ಜನರಿಗೆ ಒದಗಿಸಿಕೊಟ್ಟಿದ್ದರು. ನಲ್ಲಿಯ ಮೇಲ್ಗಡೆ ಶ್ರೀನಿವಾಸಾಚಾರ್ಯರ ಧರ್ಮಪತ್ನಿ ಶ್ರೀಮತಿ ರುಕ್ಮಿಣಿಯಮ್ಮನವರ ಹೆಸರು ಅಂಕಿತವಾಗಿತ್ತು, ಪವಿತ್ರವಾದ ಮತ್ತು ಪ್ರೀತಿಸಂಜ್ಞೆಯಾದ ಆ ಜ್ಞಾಪಕ ಚಿಹ್ನೆಯು ಅಲ್ಲಿ ಉಳಿದಿದೆಯೋ ಇಲ್ಲವೋ ನಾನು ನೋಡಿಲ್ಲ. ಈಚೆಗೆ ನಮ್ಮ ದೇಶದಲ್ಲಿ ಹೊಸ ಮಾದರಿಯ ದೇಶಭಕ್ತರುಗಳು ಹುಟ್ಟಿಕೊಂಡಿದ್ದಾರೆ. ಇವರು ಮ್ಯುನಿಸಿಪಾಲಿಟಿಗಳಲ್ಲೂ ಇತರ ಅಧಿಕಾರಿಸ್ಥಾನಗಳಲ್ಲೂ ತಮ್ಮ ಹೊಸಪರಿಯ ದೇಶಭಕ್ತಿಯನ್ನು ಪ್ರದರ್ಶನ ಮಾಡುತ್ತಿರುತ್ತಾರೆ. ಆ ಪ್ರದರ್ಶನದ ಒಂದಾನೊಂದು ವಿಧಾನವು ಪೂರ್ವಕಾಲವನ್ನು ಅಳಿಸಿಹಾಕುವುದು, ಹಳೆಯ ಹೆಸರುಗಳನ್ನು ಕೀಳುವುದು, ಹೊಸ ಹೆಸರುಗಳನ್ನು ಹಾಕುವುದು, ಹಿಂದಿನ ನೆನಪುಗಳನ್ನು ತೊಡೆದುಹಾಕುವುದು, ಚರಿತ್ರೆಯನ್ನು ತಿದ್ದುವುದು-ಈ ಚೋದ್ಯರೂಪಗಳನ್ನು ತಾಳುತ್ತಿದೆ. ಇದು ಈಗಣ ಒಂದು ತೆರೆದ ದೇಶಾಭಿಮಾನ. ಅದರ ಆವಾಂತರದಲ್ಲಿ ಮೇಲೆ ಹೇಳಿರುವ ಸ್ಮಾರಕ ಚಿಹ್ನೆ ನಷ್ಟವಾಗಿ ಹೋಗಿದ್ದರೆ ಆಶ್ಚರ್ಯವೇನೂ ಅಲ್ಲ.

## ಎಂ. ರುದ್ರಪ್ಪನವರು

ರುದ್ರಪ್ಪನವರ ಹೆಸರನ್ನು ಎತ್ತಿದಮೇಲೆ ಅವರು ಎಂಥ ಮಹನೀಯರೆಂಬುದನ್ನು ಸ್ಮರಿಸುವುದು ಕರ್ತವ್ಯವಾಗಿದೆ, ಅವರು ಶ್ರೀಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಪ್ರಸಿದ್ಧರಾಗಿದ್ದ ಫಲಪುಷ್ಪ ಸಸ್ಯವ್ಯಾಪಾರಿಗಳು, ಶ್ರೀಮನ್ಮಹಾರಾಜರವರು ಲಾಲ್‌ಬಾಗಿಗೆ ದಯಮಾಡಿಸುವಾಗ ಲಾಲ್‌ಬಾಗ್ ಮುಂದುಗಡೆಯೇ ಇದ್ದ ಇವರ ಉದ್ಯಾನ ಕಾರ್ಯಾಲಯದ ಮುಂದೆ ಸ್ವಲ್ಪ ಹೊತ್ತು ನಿಂತು, ಶ್ರೀಮಾನ್ ರುದ್ರಪ್ಪನವರು ಸಲ್ಲಿಸಿದ ಹಾರತುರಾಯಿಗಳನ್ನು ಸ್ವೀಕರಿಸಿ, ಅವರೊಡನೆ ಒಂದೆರಡು ಮಾತನಾಡಿ ತೆರಳುತ್ತಿದ್ದರಂತೆ. ಆ ಕಾಲದಲ್ಲಿ ಯುರೋಪಿಯನ್ ಜನರು ಬಹುಸಂಖ್ಯೆಯಲ್ಲಿ ಬೆಂಗಳೂರಿನಲ್ಲಿ ವಾಸವಾಗಿದ್ದರು; ಮತ್ತು ಅವರ ಜೀವನಮಾರ್ಗದ ಸೊಬಗನ್ನು ಕಂಡು ಅನುಕರಿಸುತ್ತಿದ್ದವರೂ ಬಹುಮಂದಿ ಇದ್ದರು. ಇವರು ರುದ್ರಪ್ಪನವರ ಸಂಸ್ಥೆಯ ಗಿರಾಕಿಗಳು; ಅವರ ವ್ಯಾಪಾರ ಚೆನ್ನಾಗಿ ನಡೆಯುತ್ತಿತ್ತು.

ಆದರೆ ನಾನು ಹೇಳಬೇಕಾದ ವಿಷಯ ರುದ್ರಪ್ಪನವರ ವ್ಯಾಪಾರಾಭಿವೃದ್ಧಿಗಿಂತ ನನ್ನ ದೃಷ್ಟಿಯಲ್ಲಿ ಬಹು ಹೆಚ್ಚು ಬೆಲೆಯುಳ್ಳದ್ದು. ಅದು ಎಂ. ರುದ್ರಪ್ಪ ಆಂಡ್ ಸನ್ಸ್ ಅವರ ಗ್ರಂಥಪ್ರಕಟನ ಕಾರ್ಯ. ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಚಿರಸ್ಮರಣೀಯವಾಗಿರುವ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಸಾಮಾನ್ಯಜನರ ಪ್ರಯೋಜನಕ್ಕಾಗಿ ರಾಮಾಯಣ ಭಾರತಾದಿ ಮಹಾಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತನೆ ಮಾಡಿಸಿಟ್ಟರಷ್ಟೆ. ಅವುಗಳಲ್ಲಿ ಶ್ರೀಕೃಷ್ಣರಾಜ ವಾಣೀವಿಲಾಸವೆಂಬ ಕನ್ನಡ ವಚನ ಮಹಾಭಾರತವೂ ಶ್ರೀ ಚಾಮರಾಜೋಕ್ತಿ ವಿಲಾಸವೆಂಬ ಕನ್ನಡ ವಚನ ರಾಮಾಯಣವೂ ಅತಿ ಮುಖ್ಯವಾದವು. ಈ ಎರಡು ಮಹಾಗ್ರಂಥಗಳನ್ನು ಮುದ್ರಣಗೊಳಿಸಿ ಪ್ರಕಾಶಪಡಿಸುವ ಅವಕಾಶವನ್ನು ಶ್ರೀ ಚಾಮರಾಜೇಂದ್ರ ಒಡೆಯರವರು ರುದ್ರಪ್ಪನವರಿಗೆ ದಯಪಾಲಿಸಿದ್ದರು. ಅದರಂತೆ ಅವರು ಅರಮನೆಯ ಕುಲದೈವದ ಹೆಸರಿನಲ್ಲಿ 'ಶ್ರೀ ಚಾಮುಂಡೇಶ್ವರೀ ಮುದ್ರಾಕ್ಷರ ಶಾಲೆ' ಎಂಬ ಅಚ್ಚಿನ ಕಾರ್ಖಾನೆ ಸ್ಥಾಪಿಸಿದ್ದರು. ಭಾರತ ರಾಮಾಯಣಗಳನ್ನು ಬಹುಶಃ ೧೮+೭ ಸಂಪುಟಗಳಲ್ಲಿ ಪ್ರಕಟಗೊಳಿಸಿದರು. ಈ ವಚನ ಭಾರತದಿಂದ ಅಂತರಂಗ ಪೋಷಣೆ ಪಡೆದವರ ಪೈಕಿ ನಾನೊಬ್ಬ. ನನ್ನ ಚಿಕ್ಕತಾತಂದಿರು ನನ್ನನ್ನು ಹತ್ತಿರ ಕೂಡಿಸಿ ಕೊಂಡು ಕೃಷ್ಣರಾಜ ಭಾರತದ ೧೮ ಪರ್ವಗಳನ್ನೂ ಮೊದಲಿನಿಂದ ಕಡೆಯವರೆಗೂ ಒಂದಕ್ಷರ ಬಿಡದಂತೆ ಓದಿಸಿದರು. ಈ ಹೊತ್ತು ನನ್ನಲ್ಲಿ ಯೋಗ್ಯವಾದದ್ದು ಏನಾದರೂ ಉಂಟೆಂದು ನನ್ನನ್ನು ನೋಡುವವರಿಗೆ ಅನ್ನಿಸಿದ್ದಾದರೆ, ಅದು ನನಗೆ ಆ ಭಾರತ ವ್ಯಾಸಂಗದಿಂದ ಬಂದದ್ದು. ಅಂಥ ಜೀವಸಂಸ್ಕಾರಕ್ಕೆ ಸಾಧನವನ್ನು ಒದಗಿಸಿಕೊಟ್ಟವರು ರುದ್ರಪ್ಪನವರು. ಅವರು ಆ ಪ್ರಕಟನೆ ಮಾಡದೆ ಹೋಗಿದ್ದಿದ್ದರೆ ನಾನು ಚಿಕ್ಕ ವಯಸ್ಸಿನಲ್ಲಿ ಭಾರತವನ್ನು ಓದುವುದು ಆಗುತ್ತಿರಲಿಲ್ಲ. ಈ ಮಹೋಪಕಾರಕ್ಕಾಗಿ ನಾನು ಯಾವಜ್ಜೀವವೂ ರುದ್ರಪ್ಪನವರ ಹೆಸರಿಗೆ ಪುನಃ ಪುನಃ ನಮಸ್ಕಾರಗಳನ್ನು ಸಲ್ಲಿಸುತ್ತಿರುತ್ತೇನೆ. ಕನ್ನಡ ಗದ್ಯಸಾಹಿತ್ಯದಲ್ಲಿ ಶೈಲಿಯ ಗಂಭೀರತೆಯಲ್ಲಿಯೂ ಉದಾತ್ತತೆಯಲ್ಲಿಯೂ ವಿಶದತೆಯಲ್ಲಿಯೂ ವೀರ್ಯದಲ್ಲಿಯೂ ಕೃಷ್ಣರಾಜ ವಾಣೀವಿಲಾಸ ಭಾರತಕ್ಕೆ ಸಮಾನವಾದ ಗದ್ಯ ಬೇರೆ ಇಲ್ಲವೆಂದು ಇಂದಿಗೂ ನನ್ನ ಅಭಿಪ್ರಾಯ. ಆ ಮಹಾಗ್ರಂಥಕ್ಕೆ ಪುನರ್ಮುದ್ರಣದ ಯೋಗ ಇನ್ನೂ ದೊರೆತಿಲ್ಲವೆಂದು ನನ್ನ ಪ್ರತಿನಿತ್ಯದ ಕೊರತೆ. ಆ ಯೋಗವನ್ನು ಅದಕ್ಕೆ ದೊರಕಿಸಬೇಕೆಂದು ಅನೇಕ ಸಲ ಕನ್ನಡ ಸಾಹಿತ್ಯ ಸಮ್ಮೇಳನಗಳಲ್ಲಿ ನಿರ್ಣಯಗಳನ್ನು ಮಾಡಿಸಿದೆ; ಅಧಿಕಾರಸ್ಥಾನಗಳಲ್ಲಿ ಮೊರೆಯಿಟ್ಟೆ; ಹಣವಂತರಿಗೆ ಸಲಹೆ ಕೊಟ್ಟೆ, ಆ ಗ್ರಂಥವನ್ನು ಯಾರು ಪುನರ್ಮುದ್ರಣ ಮಾಡಿಸುತ್ತಾರೋ ಅವರು ನಮ್ಮ ಜನಕ್ಕೂ ನಮ್ಮ ಭಾಷೆಗೂ ಪರೋಪಕಾರ ಮಾಡಿದವರಾಗುತ್ತಾರೆ.

ಶ್ರೀಮಾನ್ ರುದ್ರಪ್ಪನವರ ಮಕ್ಕಳು ಎಂ.ಸುಬ್ಬಯ್ಯನವರು ನನಗೆ ಸ್ನೇಹಿತರಾಗಿದ್ದರು. ಸ್ವಭಾವದಲ್ಲಿ ಉದಾರಿಗಳು; ಗುಣಪಕ್ಷಪಾತಿಗಳು; ದೊಡ್ಡಮನುಷ್ಯರು. ಅವರಿಗೆ ಯಾವ ಕಾರಣದಿಂದಲೋ ಉದ್ಯಮೋತ್ಸಾಹ ಸಾಲದೆ ಹೋಗಿತ್ತು. ಹೆಚ್ಚುಗಟ್ಟಲೆ ಕೆಲಸವನ್ನು ಅಂಟಿಸಿಕೊಳ್ಳದೆ ಹಾಯಾಗಿರುವ ಪ್ರಕೃತಿ ಅವರದು. ಭಾರತದ ಪುನರ್ಮುದ್ರಣ ಕಾರ್ಯವನ್ನು ನಾನು ನಾಲ್ಕಾರು ಸಲ ಅವರ ಗಮನಕ್ಕೆ ತಂದರೂ ಅವರ ಮನಸ್ಸು ಏಕೋ ಆ ಕಡೆಗೆ ತಿರುಗಲಿಲ್ಲ.

## ಶ್ರೀನಿವಾಸಾಚಾರ್ಲು ರಸ್ತೆ

ಈಗ ಆರ್ಕಾಟ್ ಶ್ರೀನಿವಾಸಾಚಾರ್ಲು ಅವರ ವಿಚಾರಕ್ಕೆ ಹಿಂತಿರುಗೋಣ. ಬೆಂಗಳೂರಿನ ಹಳೆಯ ಪಟ್ಟಣದಲ್ಲಿ ಒಂದು ರಸ್ತೆ ಅವರ ಹೆಸರನ್ನು ಹೊತ್ತಿದೆ. ಆ ರಸ್ತೆಯ ಪೂರ್ವಾಭಿಮುಖ ಶ್ರೇಣಿಯ- ಹಳೆ ತರಗು ಪೇಟೆಯ ರಸ್ತೆಗೂ ಗುಂಡೋಪಂತರ ಬೀದಿಗೂ ನಡುವಣ-ಒಂದು ಮನೆಯಲ್ಲಿ ಆರ್ಕಾಟ್ ಶ್ರೀನಿವಾಸಾಚಾರ್ಲು ಅವರು ವಾಸವಾಗಿದ್ದರಂತೆ. ನಾನು ಆ ಮನೆಯನ್ನು ಮೊದಲು ನೋಡುವ ವೇಳೆಗೆ-೧೯೦೭-೮ರಲ್ಲಿ- ಅದು ಬೇರೆಯವರದಾಗಿ, ಅದರಲ್ಲಿ ಒಂದು ಸಂಗೀತಸಮಾಜ ನಡೆಯುತ್ತಿತ್ತು. ಅಲ್ಲಿ ನಡೆದ ನಾಲ್ಕೈದು ಸಂಗೀತ ಕಛೇರಿಗಳಿಗೆ ನಾನು ಹೋಗಿದ್ದೇನೆ. ಆ ಮನೆಯಲ್ಲಿ ಹಿಂದೆ ಶ್ರೀನಿವಾಸಾಚಾರ್ಯರು ಇದ್ದದ್ದರಿಂದಲೇ ಆ ರಸ್ತೆಗೆ ಆ ಹೆಸರು.

ಆರ್ಕಾಟ್ ಶ್ರೀನಿವಾಸಾಚಾರ್ಲು ಅವರು ಆರ್ಕಾಟ್ ಕಡೆಯವರಂತೆ. ಅವರು ಸರ್ ಕೆ. ಶೇಷಾದ್ರಿ ಅಯ್ಯರ್ ಅವರ ಕಾಲಕ್ಕೆ ಹಿಂದೆಯೇ-ಬಹುಶಃ ದಿವಾನ್ ರಂಗಾಚಾರ್ಯರ ದಿನದಲ್ಲಿ-ಬೆಂಗಳೂರಿಗೆ ಬಂದು ಇಲ್ಲಿ ವಕೀಲರಾಗಿ ನೆಲಸಿದವರು. ಅವರ ಪ್ರಾಮಾಣಿಕತೆಯೂ ವಾದ ಸಾಮರ್ಥ್ಯವೂ ಬೇಗ ಅವರಿಗೆ ಪ್ರಶಸ್ತಿಯನ್ನು ತಂದವು. ಅವರ ಕಾರ್ಯ ದಕ್ಷತೆಯನ್ನೂ ಜನಪ್ರಿಯತೆಯನ್ನೂ ಸರ್ ಕೆ. ಶೇಷಾದ್ರಯ್ಯರವರು ಕೇಳಿ, ಅವರನ್ನು ಬೆಂಗಳೂರು ಪಟ್ಟಣ ಮ್ಯುನಿಸಿಪಲ್ ಸಂಸ್ಥೆಯ ಅಧ್ಯಕ್ಷಸ್ಥಾನಕ್ಕೆ ನಿಯಮಿಸಿದರು. ಆ ಸ್ಥಾನಕ್ಕೆ ಸರಕಾರೇತರ (ನಾನ್-ಅಫಿಷಿಯಲ್) ಮನುಷ್ಯರನ್ನು ನಿಯಮಿಸಿದ್ದು ಅದೇ ಮೊದಲು. ಆ ಅಧಿಕಾರವನ್ನು ನಿರ್ವಹಿಸುವುದರಲ್ಲಿ ಆರ್ಕಾಟ್ ಶ್ರೀನಿವಾಸಾಚಾರ್ಲು ಅವರು ತೋರಿಸಿದ ವಿಚಕ್ಷಣೆ ಈ ನಮ್ಮ ಪ್ರಜಾಯುಗಕ್ಕೆ ಬೋಧಪ್ರದವಾಗಿದೆ.

## ಪ್ರೆಸಿಡೆಂಟ್ ಪದವಿ

ಅವರ ಪ್ರತಿದಿನದ ಕಾರ್ಯಕ್ರಮ ಸಾಮಾನ್ಯವಾಗಿ ಹೀಗಿರುತ್ತಿತ್ತು. ಬೆಳಿಗ್ಗೆ ೬ ಘಂಟೆಗೆ ಮನೆಯಿಂದ ಹೊರಡುವುದು. ಯಾವ ಪ್ರದೇಶಕ್ಕೆ ಹೋಗತಕ್ಕದ್ದೆಂಬುದನ್ನು ಹಿಂದಿನ ಸಂಜೆಯೇ ಗೊತ್ತುಮಾಡಿ ಮ್ಯುನಿಸಿಪಲ್ ಅಧಿಕಾರಿಗಳಿಗೆ ತಿಳಿಸಿರತಕ್ಕದ್ದು. ಪ್ರೆಸಿಡೆಂಟರು ಒಬ್ಬ ಆಳನ್ನು ಹಿಂದಿಟ್ಟುಕೊಂಡು ಆ ಪ್ರದೇಶಕ್ಕೆ ಹೋಗುವ ವೇಳೆಗೆ ಅಲ್ಲಿ ಮ್ಯುನಿಸಿಪಲ್ ಅಧಿಕಾರಿಗಳು ಸಿದ್ಧವಾಗಿರಬೇಕಾದದ್ದು, ಮತ್ತು ಆ ಪ್ರದೇಶದ ನಿವಾಸಿಗಳಿಂದ ಮ್ಯುನಿಸಿಪಾಲಿಟಿಗೆ ಬಂದಿದ್ದ ಅರ್ಜಿ ಅಹವಾಲುಗಳನ್ನೂ ಸಂಬಂಧಪಟ್ಟ ಕಾಗದ ಪತ್ರಗಳನ್ನೂ ಅಧಿಕಾರಿಗಳು ತಮ್ಮೊಡನೆ ತಂದಿರತಕ್ಕದ್ದು; ಮತ್ತು ಆಯಾ ಅರ್ಜಿ ಅಹವಾಲ್ದಾರರುಗಳಿಗೆ ಪ್ರೆಸಿಡೆಂಟರು ಬರುವ ವರ್ತಮಾನವನ್ನು ತಿಳಿಸಿರತಕ್ಕದ್ದು. ಪ್ರೆಸಿಡೆಂಟರು ಅಲ್ಲಿಗೆ ಬಂದ ಬಳಿಕ ಪ್ರತಿಯೊಂದು ಅರ್ಜಿಯನ್ನೂ ಖುದ್ದಾಗಿ ತೆಗೆದುಕೊಂಡು ವಿಚಾರಣೆ ನಡೆಸಿ ತಕ್ಕ ತೀರ್ಮಾನವನ್ನು ಅಲ್ಲಿಯೇ ಹೇಳಿ, ಆ ಅರ್ಜಿಯ ಮೇಲೆ ಬರೆಯಿಸಿಡುತ್ತಿದ್ದರು. ಆ ಮಧ್ಯಾಹ್ನ ಪ್ರೆಸಿಡೆಂಟರು ಆಫೀಸಿಗೆ ಹೋದ ಬಳಿಕ ಆ ಬೆಳಗ್ಗಿನ ತೀರ್ಮಾನಗಳನ್ನೆಲ್ಲ ಕ್ರಮವಾದ ಪುಸ್ತಕದಲ್ಲಿ ಬರೆಯಿಸಿ, ಅದಕ್ಕನುಸಾರವಾಗಿ ನಡವಳಿಕೆಗಳು ಎಷ್ಟುಮಟ್ಟಿಗೆ ನಡೆದಿದೆ ಎಂಬುದನ್ನು ಆಗಾಗ್ಗೆ ತನಿಖೆಮಾಡುತ್ತಿದ್ದರು. ಹೀಗೆ ಅರ್ಜಿದಾರರುಗಳ ಕೋರಿಕೆಗಳು ಬೇಗಬೇಗ ತೀರ್ಪಿಗೆ ಬರುತ್ತಿದ್ದವು. ಇದರಿಂದ ಜನಕ್ಕೆ ತುಂಬ ಸಮಾಧಾನವಾಗುತ್ತಿತ್ತು.

ಶ್ರೀನಿವಾಸಾಚಾರ್ಯರು ಬೆಳಗ್ಗಿನ ಗ್ರಾಮಸಂಚಾರವನ್ನು ಮುಗಿಸಿಕೊಂಡು ಮನೆಗೆ ಹಿಂದಿರುಗಿದಾಗ ಮ್ಯುನಿಸಿಪಲ್ ಅಧಿಕಾರಿಗಳು ಜೊತೆಯಲ್ಲಿರುತ್ತಿದ್ದರು. ಆಗ ಆಚಾರ್ಯರು ಅವರೊಂದಿಗೆ ತಮ್ಮ ಬೂಟ್ಸ್ ಕಡೆ ನೋಡಿಕೊಂಡು “ಈ ದಿನ ಏನು? ಬೂಟ್ಸಿನ ಮೇಲೆ ಧೂಳು ಇಷ್ಟು ದಪ್ಪ ಕೂತಿದೆ? ಬೀದಿ ಚೆನ್ನಾಗಿ ಗುಡಿಸಿದ್ದಿದ್ದರೆ ಹೀಗಾಗುತ್ತಿತ್ತೆ?” ಎನ್ನುವರಂತೆ; ಅಥವಾ, “ಈ ಹೊತ್ತು ಹೋದ ಬೀದಿಗಳಲ್ಲಿ ಗುಡಿಸುವವರು ಹೆಚ್ಚು ಮುತುವರ್ಜಿ ಮಾಡಿದ್ದ ಹಾಗೆ ಕಾಣುತ್ತದೆ; ಬೂಟ್ಸಿನ ಮೇಲೆ ಧೂಳು ಬಹು ತೆಳುವಾಗಿದೆ” ಎನ್ನುವರಂತೆ. ಮ್ಯುನಿಸಿಪಲ್ ಅಧಿಕಾರಿಗಳಿಗೆ ಇದು ತಕ್ಕಷ್ಟು ಎಚ್ಚರಿಕೆಯ ಮಾತಾಗಿತ್ತು. ಪ್ರೆಸಿಡೆಂಟರು ಹೋಗಲು ಗೊತ್ತುಮಾಡಿಕೊಂಡಿದ್ದ ರಸ್ತೆಗಳಲ್ಲೆಲ್ಲ ಬೆಳಿಗ್ಗೆ ೬ ಘಂಟೆಗೆ ಮುಂಚೆಯೇ ಬೀದಿ ಗುಡಿಸಿ ನೀರು ಚಿಮುಕಿಸಿರುತ್ತಿದ್ದರಂತೆ. ಪ್ರೆಸಿಡೆಂಟರು ಪಟ್ಟಣದ ಪ್ರತಿಯೊಂದು ಭಾಗಕ್ಕೂ ವಾರಕ್ಕೆ ಒಂದು ಸಲವಾದರೂ ಹೋಗಿ ಬರುತ್ತಿದ್ದದ್ದು ಖಂಡಿತವಾದದ್ದರಿಂದ ವಾರದಲ್ಲೊಂದು ದಿನವಾದರೂ ಪ್ರತಿಯೊಂದು ಬೀದಿಯೂ ಒಂದಿಷ್ಟು ಚೊಕ್ಕಟಪಡುತ್ತಿತ್ತು.

ಶ್ರೀನಿವಾಸಾಚಾರ್ಯರ ಪ್ರೆಸಿಡೆಂಟ್‌ತನದ ಒಂದು ಹೆಗ್ಗುರುತೆಂದರೆ ಇಂದೂ ಉಳಿದಿರುವ ಚಿಕ್ಕಲಾಲ್ ಬಾಗ್ ಎಂಬ ಮ್ಯುನಿಸಿಪಲ್ ಪಾರ್ಕ್ (ಕೊಟ್ಟಿಗೆಯ ಬಳಿ). ೧೮೮೯ನೆಯ ನವೆಂಬರ್ ಸುಮಾರಿನಲ್ಲಿ ವಿಕ್ಟೋರಿಯ ಮಹಾರಾಣಿಯ ಮೊಮ್ಮಗ ಪ್ರಿನ್ಸ್ ಆಲ್ಬರ್ಟ್ ವಿಕ್ಟರ್ ಎಂಬಾತನು ಬೆಂಗಳೂರಿಗೆ ಭೇಟಿಕೊಟ್ಟ. ಆತನನ್ನು ಸ್ವಾಗತಿಸುವುದಕ್ಕೋಸ್ಕರ ಪುರಾಲಂಕಾರ ಮಾಡಿಸುವ ಜವಾಬ್ದಾರಿ ಶ್ರೀನಿವಾಸಾಚಾರ್ಯರಿಗೆ ಬಂದಿತ್ತು. ಆಗ್ಗೆ ರೈಲ್ವೆಸ್ಟೇಷನ್ನಿನ ಮುಂದುಗಡೆಯ ಧರ್ಮಾಂಬುಧಿ ಕೆರೆಯು ತುಂಬು ಕೆರೆಯಾಗಿತ್ತು. ಬಂದ ಅತಿಥಿಯು ರೈಲಿನಿಂದಿಳಿದು ಊರ ಕಡೆ ಹೊರಡುತ್ತಲೇ ಎದುರಿಗೆ ಕೆರೆಯಲ್ಲಿ ಮೇಳ ತಾಳ ಸಹಿತವಾದ ತೆಪ್ಪೋತ್ಸವ ಕಂಗೊಳಿಸುತ್ತಿತ್ತು. ಆತನು ಸಾರೋಟಿಯಲ್ಲಿ ಕುಳಿತು ಕೆರೆಯ ಕಟ್ಟೆಯ ಮೇಲೆ ಸಾಗಿದಂತೆ ಎಡಗಡೆ ಕೆರೆಯೊಳಗಣ ತೆಪ್ಪವೂ ಕೂಡ ಬರುತ್ತಿತ್ತು. ಆ ಮೆರವಣಿಗೆಯ ಬಲಗಡೆಗೆ ಮ್ಯುನಿಸಿಪಲ್ ಪಾರ್ಕಿನಲ್ಲಿ ಓಲಗ ನರ್ತನಗಳು ನಡೆಯುತ್ತಿದ್ದವು, ಹೀಗೆ ಇಕ್ಕಡೆಯೂ ನೃತ್ಯಗಾನ ವಾದ್ಯ ವಿಜೃಂಭಣೆಗಳೂ ಜನದ ಸಂದಣಿಯ ಸಂಭ್ರಮವೂ ನೆರೆದಿದ್ದದ್ದನ್ನು ನೋಡಿ ಆತನ ಮನಸ್ಸು ಎಷ್ಟು ಹಿಗ್ಗಿರಬಹುದು! ಮಹಾರಾಜರವರಿಗೂ ಶೇಷಾದ್ರಯ್ಯರವರಿಗೂ ಅದು ಮೆಚ್ಚಿಕೆಯಾದದ್ದು ಸ್ವಾಭಾವಿಕ ತಾನೆ?

# ಮುಜರಾಯಿ ಪರಿಷ್ಕರ

ಸಂಸ್ಥಾನದ ಮುಜರಾಯಿ ಸಂಸ್ಥೆಗಳ-ಎಂದರೆ ದೇವಸ್ಥಾನ, ಮಠ, ಛತ್ರ, ಮಶೀದಿ ಮುಂತಾದ ದೈವ ಮತ ಧರ್ಮಪೀಠಗಳ-ಆಡಳಿತವನ್ನು ಪರಿಷ್ಕಾರಗೊಳಿಸುವುದಕ್ಕಾಗಿ ಒಬ್ಬ ಪ್ರತ್ಯೇಕ ಅಧಿಕಾರಿಯನ್ನು ನಿಯಮಿಸುವುದು ಅವಶ್ಯವೆಂದು ಸರಕಾರವು ೧೮೯೧ರಲ್ಲಿ ತೀರ್ಮಾನಿಸಿತು. ಇಂಥ ಏರ್ಪಾಟು ಬೇಕೆಂದು ಪ್ರಜಾಪ್ರತಿನಿಧಿ ಸಭೆ ಅನೇಕ ಸಲ ಸೂಚನೆಮಾಡಿತ್ತು. ದಿವಾನ್ ಶೇಷಾದ್ರಯ್ಯರವರು ಅದರಂತೆ 'ಮುಜರಾಯಿ ಸೂಪರಿಂಟೆಂಡೆಟ್' ಎಂಬ ಹೊಸ ಅಧಿಕಾರಸ್ಥಾನವನ್ನು ಕ್ವಚಿತ್ಕಾಲಿಕವಾಗಿ ಕಲ್ಪಿಸಿ, ಅದಕ್ಕೆ ಆರ್ಕಾಟ್ ಶ್ರೀನಿವಾಸಾಚಾರ್ಲು ಅವರನ್ನು ಆಹ್ವಾನಿಸಿದರು. ಆ ಪದವಿಯ ಕರ್ತವ್ಯಗಳು ೩-೪ ವರ್ಷದೊಳಗಾಗಿ ಮುಗಿಯಬಹುದೆಂದು ಮೊದಲು ನಿರೀಕ್ಷೆಯಿತ್ತು. ಆದರೆ ಕೆಲಸಕ್ಕೆ ಕೈಹಚ್ಚಿದ ಮೇಲೆ ಅದರ ಮಹತ್ತ್ವವೂ ಕ್ಲಿಷ್ಟತೆಯೂ ಎಷ್ಟರದೆಂಬುದು ತೋರುತ್ತಬಂತು. ಶ್ರೀನಿವಾಸಾಚಾರ್ಲು ಅವರು ೧೯೦೧ನೆಯ ಏಪ್ರಿಲ್ ತಿಂಗಳಲ್ಲಿ ಆ ಪದವಿಯಿಂದ ನಿವೃತ್ತರಾದರು. ಆ ಕಾರ್ಯನಿರ್ವಾಹದಲ್ಲಿ ಅವರು ತೋರಿಸಿದ ಶ್ರದ್ಧೆ ಉತ್ಸಾಹ ಸಾಮರ್ಥ್ಯ ವಿಚಕ್ಷಣೆಗಳಿಗಾಗಿ ಅವರಿಗೆ 'ರಾಯ್ ಬಹದ್ದೂರ್' ಬಿರುದು ದೊರೆಯಿತು. ಅದಕ್ಕಿಂತ ಹೆಚ್ಚಾಗಿ, ಅದರಿಂದ ಅವರ ಯಶಸ್ಸು ಜನದ ಸ್ಮರಣೆಯಲ್ಲಿ ಸ್ಥಿರಪಡುವಂತಾಯಿತು.

ಆಗ ಅವರು ನಡಸಿದ ಪರಿಷ್ಕಾರಗಳೆಂಥವೆಂದರೆ: ದೇವಾಲಯಗಳ ಕಟ್ಟಡಗಳ ಶಿಥಿಲ ಭಾಗಗಳನ್ನು ದುರಸ್ತು ಮಾಡಿಸಿ, ಅವುಗಳ ಸಂದುಗೊಂದಿಗಳನ್ನು ಕಿತ್ತುಹಾಕಿಸಿದ್ದು; ಕಿಟಕಿಗಳನ್ನೂ ಗವಾಕ್ಷಿಗಳನ್ನೂ ಇಡಿಸಿ, ಬೆಳಕು ಗಾಳಿಗಳು ಪ್ರವೇಶಿಸುವಂತೆ ಮಾಡಿದ್ದು; ದೇವಸ್ಥಾನದ ಭೂಮಿಕಾಣಿಗಳು ಪರಾಧೀನವಾಗಿದ್ದದ್ದನ್ನು ತಪ್ಪಿಸಿ ಸರಕಾರದ, ಅಥವಾ ಕೆಲಸ ಮಾಡುತ್ತಿದ್ದ ಅರ್ಚಕಾದಿಸೇವಕರ, ಅಧೀನಕ್ಕೆ ತಂದದ್ದು; ದೇವಸ್ಥಾನದ ಒಡವೆ ವಾಹನ ಪಾತ್ರೆ ಪದಾರ್ಥಗಳನ್ನು ಲೆಕ್ಕದಲ್ಲಿ ಬರೆಯಿಸಿ ಅವುಗಳ ಜೋಪಾನಕ್ಕೆ ಜವಾಬ್ದಾರರನ್ನು ಗೊತ್ತುಮಾಡಿದ್ದು; ಪ್ರತಿಯೊಂದು ದೇವಸ್ಥಾನದಲ್ಲಿಯೂ ಅಲ್ಲಲ್ಲಿಯ ಶೈವ ವೈಷ್ಣವ ಸ್ಮಾರ್ತಾದಿ ಸಂಪ್ರದಾಯಾನುಸಾರವಾಗಿ ಸೇವೆ ಕೈಂಕರ್ಯಗಳು ನಡೆಯುವಂತೆ ಆಗಮಿಕರಿಂದ ನಿಯಮಾವಳಿಗಳನ್ನು ಬರೆಯಿಸಿ ಅರ್ಚಕರಿಗೆ ತಿಳಿವಳಿಕೆ ಕೊಟ್ಟದ್ದು; ಪೂಜಾಕಾರ್ಯಗಳಲ್ಲಿ ವಿನಿಯುಜ್ಯಗಳಾದ ಮಂತ್ರಗಳನ್ನೂ ಸ್ತೋತ್ರಪಾಠಗಳನ್ನೂ ರಾಜಾಶೀರ್ವಾದ ವಾಕ್ಯಗಳನ್ನೂ, ಆಗಮಿಕರಿಂದಲೂ ಪಂಡಿತರಿಂದಲೂ ಬರೆಯಿಸಿ ಅಚ್ಚುಮಾಡಿಸಿ ಆ 'ಕೈಪಿಡಿ' ಪುಸ್ತಕಗಳನ್ನು ಅರ್ಚಕರಲ್ಲಿ ಹಂಚಿದ್ದು; ನೈವೇದ್ಯ ದೀಪಾರಾಧನೆ ವಗೈರೆಗಳ ಮಾಮೂಲುಗಳನ್ನು ಲಿಖಿತದಲ್ಲಿ ಶಾಶ್ವತಪಡಿಸಿದ್ದು;

ಬಾಜಾಬಜಂತ್ರಿಯವರು ನರ್ತನದವರು ಮೊದಲಾದ ನಾನಾ ಸೇವೆಗಳವರು ಅನುಸರಿಸಬೇಕಾದ ಸರದಿ ಕಟ್ಟಲೆಗಳನ್ನು ಗೊತ್ತುಮಾಡಿದ್ದು-ಇವೆಲ್ಲ ಆರ್ಕಾಟ್ ಶ್ರೀನಿವಾಸಾಚಾರ್ಯರ ಏರ್ಪಾಟುಗಳು. ದೇವಾಲಯಗಳಿಗೆ ಧರ್ಮದರ್ಶಿ ಸಮಿತಿಗಳ ನಿಯಮಕವಾದದ್ದೂ ಅವರ ಸಲಹೆಯಂತೆಯೇ. ಅವರ ಕಾಲಕ್ಕೆ ಹಿಂದೆ ನಮ್ಮ ದೇವಾಲಯಗಳೂ ಕ್ಷೇತ್ರಗಳೂ ಎಂಥ ದುಃಸ್ಥಿತಿಯಲ್ಲಿದ್ದುವೆಂಬುದನ್ನು ನಾನು ಕೇಳಿದ್ದೇನೆ. ಒಂದಾನೊಂದು ಪ್ರಸಿದ್ಧ ಕ್ಷೇತ್ರದಲ್ಲಿ ಕೊಠಾರೋತ್ಸವವೆಂಬುದು ನಡೆಯುತ್ತಿದ್ದ ಹೊತ್ತಿನಲ್ಲಿ ದೇವರು ಬಿಜಮಾಡಿಸಿದ್ದ ಜಾಗದಲ್ಲಿ ಹತ್ತು ಮಂದಿ ಇದ್ದರೆ ದೇವದಾಸಿಯರಿದ್ದ ಜಾಗದಲ್ಲಿ ಸಾವಿರ ಮಂದಿ ನೆರೆದಿರುತ್ತಿದ್ದರು.

ಗುಡಿಯೊಳಗಡೆ ಮಂತ್ರಘೋಷ ನಡೆಯುತ್ತಿದ್ದ ಹೊತ್ತಿನಲ್ಲಿ ಪ್ರಾಕಾರದೊಳಗಣ ಮೂಲೆ ಮೊಡಕುಗಳಲ್ಲಿ ಪ್ರಣಯಲೀಲೆಗಳೂ ತಸ್ಕರ ಸಾಹಸಗಳೂ ನಡೆಯುತ್ತಿದ್ದವು. ಎಷ್ಟೋ ಗುಡಿಗಳ ಒಳಗಡೆ ಕಗ್ಗತ್ತಲೂ ಕಸವೂ ತುಂಬಿ ಕಾಲಿಡುವುದೇ ಕಷ್ಟವಾಗುತ್ತಿತ್ತು. ದೇವರಿಗೆ ಸೇರಿದ ಜಮೀನುಗಳನ್ನೂ ಒಡವೆ ವಸ್ತ್ರಗಳನ್ನೂ ಬೇರೆಯವರು ಯಾರೋ ಅನುಭವಿಸಿಕೊಂಡಿರುತ್ತಿದ್ದರು. ಇಂಥ ಅವ್ಯವಸ್ಥೆಗಳನ್ನೆಲ್ಲ ತೊಳೆದು ನಿರ್ಮಲ ಪಡಿಸಿದವರು ಆರ್ಕಾಟ್ ಶ್ರೀನಿವಾಸಾಚಾರ್ಯರು. ನಂಜನಗೂಡು, ಮೇಲು ಕೋಟೆ ಮೊದಲಾದ ಕಡೆಗಳಲ್ಲೆಲ್ಲ ಅವರ ಪರಿಷ್ಕಾರಕಾರ್ಯಗಳು ಈಗ್ಗೂ ಕಾಣುತ್ತವೆ. ಅದು ಹತ್ತು ವರ್ಷಗಳ ಸಂತತ ಶೋಧನೆ ಬೋಧನೆ ದರ್ಪದಕ್ಷತೆಗಳಿಂದ ನಡೆದ ಕಾರ್ಯ. ಈಗಲೂ ಎಷ್ಟೋ ಗುಡಿಗಳಲ್ಲಿ ಶ್ರೀನಿವಾಸಾಚಾರ್ಯರು ನಿರ್ಬಂಧಮಾಡಿ ಇಡಿಸಿದ ಕಿಟಕಿ ಬಾಗಿಲುಗಳನ್ನು ಜನ ಕೃತಜ್ಞತೆಯಿಂದ ತೋರಿಸುತ್ತಾರೆ.

ಆರ್ಕಾಟ್ ಶ್ರೀನಿವಾಸಾಚಾರ್ಲು ಅವರು ಕೆಲವು ಕಾಲ ರಿಜಿಸ್ಟ್ರೇಷನ್ ಇಲಾಖೆಯ ಮುಖ್ಯಸ್ಥರಾಗಿಯೂ ಇದ್ದರೆಂದು ಕೇಳಿದ್ದೇನೆ.

ಆರ್ಕಾಟ್ ಶ್ರೀನಿವಾಸಾಚಾರ್ಯರು ಹೇಗೆ ಮೇಧಾವಿಗಳೋ ಹಾಗೆ ಕಾರ್ಯಕುಶಲರು. ಹೇಗೆ ಕಾರ್ಯಕುಶಲರೋ ಹಾಗೆ ರಸಿಕರು. ಹೇಗೆ ರಸಿಕರೋ ಹಾಗೆ ಪರಿಶುದ್ಧರು. ಅವರು ಸರಕಾರದ ಉದ್ಯೋಗದಿಂದ ನಿವೃತ್ತರಾದಮೇಲೆ ವರ್ಷವನ್ನು ಎರಡು ಭಾಗ ಮಾಡಿಕೊಂಡು ತಂಪು ಭಾಗವನ್ನು ಶ್ರೀರಂಗದಲ್ಲಿಯೂ ಬೇಸಗೆಯನ್ನು ಬೆಂಗಳೂರಿನಲ್ಲಿಯೂ ಕಳೆಯುತ್ತಿದ್ದರು.

## ರಸಿಕತೆ

ಅವರಿಗೆ ಅತ್ಯಂತ ಪ್ರಿಯವಾದ ಸಂತೋಷವೆಂದರೆ ಸಂಗೀತ. ಬೆಂಗಳೂರಿನಲ್ಲಿ ಆಗ್ಗೆ ಪ್ರಸಿದ್ಧರಾಗಿದ್ದ ಸಂಗೀತ ವಿದ್ವಾಂಸರು ಶ್ರೀಮಾನ್ ಕೊಳ್ಳೇಗಾಲದ ದಕ್ಷಿಣಾಮೂರ್ತಿ ಶಾಸ್ತ್ರಿಗಳು, ಕರೂರು ಕೃಷ್ಣರಾಯರು, ಸುಬ್ಬರಾಯಾಚಾರ್ಯರು, ವೀಣೆಯ ವಿದ್ವಾಂಸರೊಬ್ಬರು-ಈ ನಾಲ್ಕೈದು ಮಂದಿಯನ್ನು ಹಾಡಲು ಗೊತ್ತುಮಾಡಿಕೊಂಡಿದ್ದರು. ಸಾಮಾನ್ಯವಾಗಿ ವಾರದಲ್ಲಿ ಎರಡು ಅಥವಾ ಮೂರು ದಿನ ಸಂಗೀತ ನಡೆಯುತ್ತಿತ್ತು. ಅದರ ಕ್ರಮ ಹೀಗೆ:

ಶ್ರೀನಿವಾಸಾಚಾರ್ಯರ ಮನೆಯಲ್ಲಿಯೇ ಶ್ರುತಿಮಾಡಿದ ಒಂದು ಸಣ್ಣ ತಂಬೂರಿ ಇರುತ್ತಿತ್ತು. ಗಾಯಕನು ಕ್ಲೃಪ್ತಕಾಲಕ್ಕೆ-ಸಂಜೆ ೪ ಘಂಟೆಗೆ-ಅಲ್ಲಿಗೆ ಹೋಗತಕ್ಕದ್ದು. ಕೂಡಲೆ ಅಲ್ಲಿಯ ಅಡಿಗೆಯವನು ಅವರಿಗೆ ಕೈಕಾಲು ತೊಳೆದುಕೊಳ್ಳಲು ನೀರು ಕೊಟ್ಟು ಅವರು ಬೇಡಿದಂತೆ ಬಿಸಿಬಿಸಿ ಕಾಫಿಯನ್ನೋ ಹಾಲನ್ನೋ ಕೊಡತಕ್ಕದ್ದು. ಅನಂತರ ಗಾಯಕನು ನಡುಮನೆಯಲ್ಲಿ ತಂಬೂರಿಯೊಡನೆ ಕೊಡತಕ್ಕದ್ದು. ಆಗ ಅಲ್ಲಿ ಸಾಮಾನ್ಯವಾಗಿ ಐದಾರು ಮಂದಿ, ಹತ್ತಕ್ಕೆ ಹೆಚ್ಚಿಲ್ಲದೆ, ಇರುತ್ತಿದ್ದರು. ಶ್ರೀನಿವಾಸಾಚಾರ್ಯರು ಗಾಯಕನನ್ನು ಕುರಿತು "ಈ ಹೊತ್ತು ಏನು ಹಾಡುತ್ತೀರಿ?" ಎಂದು ಕೇಳುತ್ತಿದ್ದರು. ಆತನು ಕಲ್ಯಾಣಿ ಎಂದೋ ಕಾಂಭೋಜಿ ಎಂದೋ ಹೇಳಿದ ಮೇಲೆ ಶ್ರೀನಿವಾಸಾಚಾರ್ಯರು- "ಆಗಬಹುದು: ಅದಾದಮೇಲೆ ಕಾಲವಿದ್ದರೆ (ಇಂಥ)ರಾಗವನ್ನು ಹಾಡಬಹುದು. ಅದನ್ನು ಕೇಳಿ ಬಹುದಿವಸವಾಯಿತು" ಎಂದು ಹೇಳುವರು.

ಅದರಂತೆ ಗಾಯಕನು ತಾನು ಗೊತ್ತುಮಾಡಿಕೊಂಡುಬಂದಿದ್ದದ್ದನ್ನು ಮೊದಲು ಹಾಡಿ ಅನಂತರ ಶ್ರೀನಿವಾಸಾಚಾರ್ಯರು ಹೇಳಿದ್ದನ್ನು ಹಾಡುತ್ತಿದ್ದನು. ಎಲ್ಲ ಗಾಯಕರಿಗೂ ಒಂದು ಕಟ್ಟುಪಾಡು ಸಾಮಾನ್ಯವಾಗಿತ್ತು. ಒಂದು ಗಂಟೆ ಒಂದೂಕಾಲು ಘಂಟೆಗಿಂತ ಹೆಚ್ಚು ಕೂಡದು; ರಾಗವಿನ್ಯಾಸ ಧಾರಾಳವಾಗಿರಬೇಕು; ಸ್ವರಸಂಗತಿ ಮಿತವಾಗಿ, ಭಾವಪ್ರಧಾನವಾಗಿರಬೇಕು; ಚೌಕಕಾಲದಲ್ಲಿ ಅಥವಾ ಮಧ್ಯಮದಲ್ಲಿ ಹಾಡಬೇಕು. ಒಂದು ದಿನದ ಕಛೇರಿಗೆಲ್ಲ ಸಾಮಾನ್ಯವಾಗಿ ಎರಡೇ ಕೀರ್ತನೆ, ಬಹಳ ಅಪರೂಪವಾಗಿ ಮೂರು. ಈ ನಿಯಮವನ್ನು ಗಾಯಕರು ಪಾಲಿಸುತ್ತಿದ್ದರು. ಶ್ರೀನಿವಾಸಾಚಾರ್ಯರು ಮಾತನಾಡದೆ ಶತಪಥ ತುಳಿಯುತ್ತ ಕೇಳುವರು. ಸಾಕೆನಿಸಿದಾಗ ಮುಖದಿಂದ ಸಂಜ್ಞೆ ಮಾಡುವರು. ಕಛೇರಿ ಮುಗಿದ ಕೂಡಲೆ-ಸುಮಾರು ಐದು ಐದೂ ಕಾಲರ ವೇಳೆಗೆ-ಗಾಯಕರು ಎದ್ದು ಒಂದು

ಕೊಠಡಿಯೊಳಗೆ ಹೋಗತಕ್ಕದ್ದು. ಶ್ರೀನಿವಾಸಾಚಾರ್ಯರು ಅಲ್ಲಿಗೆ ಹೋಗಿ ಗೋಪ್ಯವಾಗಿ ಸಂಭಾವನೆ ಮರ್ಯಾದೆ ಸಲ್ಲಿಸತಕ್ಕದ್ದು. ಅಡಿಗೆಯಾತನು ಉಪಾಹಾರ ಕೊಟ್ಟು ಉಪಚರಿಸಿ ಗಾಯಕರನ್ನು ಬೀಳ್ಕೊಡತಕ್ಕದ್ದು. ಹೀಗಿತ್ತು ಅವರ ಏರ್ಪಾಟು. ಇದು ನಾಲ್ಕಾರು ವರ್ಷಕಾಲ ನಡೆಯಿತು. ಗಾಯಕರು ಬಹು ಸಂತೋಷದಿಂದ ಅವರಲ್ಲಿಗೆ ಹೋಗಿ ಬರುತ್ತಿದ್ದರು. ಅವರಿಂದ ಒಂದು ಮೆಚ್ಚಿಕೆಯ ಮಾತು ಬಂದರೆ ಅದು ತಮಗೊಂದು ನಿಧಿಯೆಂದೆಣಿಸಿಕೊಂಡು ಹಿಗ್ಗುತ್ತಿದ್ದರು.

ಮ್ಯುನಿಸಿಪಲ್ ಪಾರ್ಕ್ ಮೊದಲಾದ ಸಾರ್ವಜನಿಕ ಸ್ಥಳಗಳಲ್ಲಿ ವಾರದಲ್ಲೊಂದು ದಿನ ಸಂಜೆ ಓಲಗ ನಡೆಯುವ ಏರ್ಪಾಟನ್ನು ಮೊದಲು ಮಾಡಿದವರು ಆರ್ಕಾಟು ಶ್ರೀನಿವಾಸಾಚಾರ್ಯರು. ಆ ಏರ್ಪಾಟು ಒಂದಿಪ್ಪತ್ತು ವರ್ಷಕಾಲ ಚೆನ್ನಾಗಿ ನಡೆಯಿತೆಂದು ಕಾಣುತ್ತದೆ. ಚಿಕ್ಕಲಾಲ್‌ಬಾಗಿನಲ್ಲಿ ಆದ ಮೇಳವನ್ನು ನಾನು ಹತ್ತಾರು ಭಾನುವಾರ ಕೇಳಿದ್ದೇನೆ. ಆ ನಾಗಸ್ವರ ವಿದ್ವಾಂಸರು ತಮ್ಮ ಕಸಬಿನಲ್ಲಿ ಹೆಮ್ಮೆಯುಳ್ಳವರಾಗಿ, ವಿದ್ಯಾಗೌರವದ ಮೇಲೆ ದೃಷ್ಟಿಯಿಟ್ಟಿದ್ದವರೆಂದು ತೋರುತ್ತದೆ. ಸಾವಿರಾರು ಮಂದಿ ಗುಂಪು ನೆರೆದು ಆ ಸಂಗೀತವನ್ನು ಕೇಳಿ ಆನಂದಿಸುತ್ತಿದ್ದರು. ಅಂಥಾ ನಾಗಸ್ವರ ವಿದ್ವಾಂಸರು ಎಲ್ಲಿ ಹೋದರೋ!

ಶ್ರೀನಿವಾಸಾಚಾರ್ಯರನ್ನು ಭೇಟಿಮಾಡಲು ಪುರಜನರು ಬಹುಮಂದಿ ಹೋಗುತ್ತಿದ್ದರು. ಅವರೊಡನೆ ತೀರಾ ಬಳಕೆಯಿಂದಿರುತ್ತಿದ್ದ ಸ್ನೇಹಿತರಲ್ಲಿ ಸಬ್ ಜಡ್ಜ್ ಪಿ. ಶಿಂಗ್ರಾಚಾರ್ಯರೊಬ್ಬರು. ಪ್ರಸಿದ್ಧ ಸಂಸ್ಕೃತ ವಿದ್ವಾಂಸರು ಛಪ್ಪಲ್ಲಿ ವಿಶ್ವೇಶ್ವರಶಾಸ್ತ್ರಿಗಳವರೂ ಅವರಲ್ಲಿ ಹೋಗಿಬರುತ್ತಿದ್ದರು. ಅನೇಕ ಮಂದಿ ಹಳೆಯ ಕಾಲದ ವರ್ತಕರೂ ಸಾಹುಕಾರರೂ ಅವರನ್ನು ಕಾಣಲು ಬರುತ್ತಿದ್ದರು. ಹತ್ತಾರು ಮಂದಿ ಮುಸಲ್ಮಾನ್ ದೊಡ್ಡ ಮನುಷ್ಯರೂ ಅವರಲ್ಲಿಗೆ ಬಂದು ಗೌರವ ಸಲ್ಲಿಸಿದ್ದನ್ನು ನಾನು ನೋಡಿದ್ದೇನೆ.

ಆರ್ಕಾಟ್ ಶ್ರೀನಿವಾಸಾಚಾರ್ಲು ಅವರು ಮನಸಿನಲ್ಲಿ ಹೇಗೋ ಆಕಾರದಲ್ಲೂ ಹಾಗೆ ಉನ್ನತರು. ಹೆಚ್ಚು ಮಾತಿನವರಲ್ಲ. ಆಡಿದಷ್ಟು ಮಾತು ಅರ್ಥವತ್ತಾದದ್ದು. ಮುಖಭಾವದಲ್ಲಿ ಸೌಮ್ಯ ಮತ್ತು ಗಾಂಭೀರ್ಯ. ಪ್ರತಿ ಸಂಜೆಯೂ ಕೋಲು ಹಿಡಿದು ಮಿತ್ರಗೋಷ್ಠಿಯೊಡನೆ ಲಾಲ್‌ಬಾಗಿನಲ್ಲಿ ವಾಯುಸೇವನೆಗಾಗಿ ಸಂಚರಿಸುವರು.

ನಾನು ಅವರನ್ನು ನೋಡಿದ್ದು ಮೂರು-ನಾಲ್ಕು ಸಾರಿ. ಸಾರಿ ಸಾರಿಯೂ ಅವರಿದ್ದ ಕೋಣೆಯಲ್ಲಿ ಒಂದು ದೊಡ್ಡ ತಟ್ಟೆಯ ತುಂಬ ದೊಡ್ಡ ದೊಡ್ಡ ಮಲ್ಲಿಗೆಯ ಮೊಗ್ಗು ಹೂಗಳ ರಾಶಿ ಘಮಘಮಿಸುತ್ತಿತ್ತು. ಅದೇ ನನಗೆ ಅವರ ನೆನಪು.

# ೧೭

# ಕೆಲವು ಸಾರ್ವಜನಿಕ ಸಂಸ್ಥೆಗಳು

ಮೈಸೂರು ಸಂಸ್ಥಾನದಲ್ಲಿ ಸಾರ್ವಜನಿಕ ಜೀವನಕ್ಕೆ ಒಂದು ಸಂಘಟಿತ ರೂಪವನ್ನು ಕೊಡುವ ಪ್ರಯತ್ನ ಯಾವಾಗ ಮೊದಲಾಯಿತೋ ಗೊತ್ತುಮಾಡಲು ನನಗೆ ಸಾಧನ ದೊರೆತಿಲ್ಲ. ಮದರಾಸಿನಲ್ಲಿ ೧೮೫೨-೫೩ರ ವೇಳೆಗೇ ಅಂಥ ಪ್ರಯತ್ನ ನಡೆದಿತ್ತು. ೧೮೫೭ನೆಯ ಇಸವಿಯ ಸಿಪಾಯಿ ದಂಗೆಗೆ ಹಿಂದೆಯೇ 'ಮದರಾಸ್ ನೇಟಿವ್ ಅಸೋಸಿಯೇಷನ್' ಎಂಬ ಸಂಸ್ಥೆ ಕೆಲಸ ಮಾಡಿತ್ತು. ಗಾಜಲು ಲಕ್ಷ್ಮೀನರಸು ಚೆಟ್ಟಿ, ಜಿ. ಪುರುಷೋತ್ತಮನಾಯಿಡು ಮೊದಲಾದ ಪ್ರಜಾಪ್ರಮುಖರು ಆ ಸಂಸ್ಥೆಯ ನಾಯಕರಾಗಿದ್ದರು. ಆ ಸಂಸ್ಥೆಯು ವರ್ಷವರ್ಷವೂ ಮದರಾಸ್ ಅಧಿಪತ್ಯದ ಸರಕಾರದ ನಡವಳಿಕೆಗಳನ್ನೂ ಪ್ರಜೆಗಳ ಅಭಿಪ್ರಾಯ ಅಪೇಕ್ಷೆಗಳನ್ನೂ ಒಂದು ವರದಿಯ ರೂಪದಲ್ಲಿ ವಿಮರ್ಶೆಮಾಡಿ ಅದನ್ನು ಇಂಗ್ಲೆಂಡಿನ ಪಾರ್ಲಿಮೆಂಟಿಗೂ ಇಲ್ಲಿಯ ಸರಕಾರಗಳಿಗೂ ತಲುಪಿಸುತ್ತಿತ್ತು. ಆ ಸಂಸ್ಥೆಯು ಕೆಲವು ವರ್ತಮಾನ ಪತ್ರಿಕೆಗಳಿಗೂ ಬೆಂಬಲವಾಗಿ ನಿಂತಿತ್ತು. ಆ ಸಂಸ್ಥೆಯ ವಾತಾವರಣದಲ್ಲಿ ಬೆಳೆದಿದ್ದವರು ನಮ್ಮ ದಿವಾನ್ ರಂಗಾಚಾರ್ಯರು. ಅವರು ಮದರಾಸಿನ ಕೆಲವು ಸಾರ್ವಜನಿಕ ಸಂಸ್ಥೆಗಳಿಗೂ ವೃತ್ತಪತ್ರಿಕೆಗಳಿಗೂ ಕಾರ್ಯಶೀಲ ಸಹಾಯಕರಾಗಿದ್ದರೆಂದು ನಾನು ಕೇಳಿದ್ದೇನೆ.

ಅವರು ಮೈಸೂರಿನಲ್ಲಿ ಅಧಿಕಾರಸ್ಥಾನಕ್ಕೆ ಬಂದಮೇಲೆ ಇಲ್ಲಿಯ ರಾಜಕೀಯ ಕ್ಷೇತ್ರದಲ್ಲಿ ಒಂದು ಸಾರ್ವಜನಿಕ ಸಂಸ್ಥೆಯನ್ನು ಸ್ಥಾಪಿಸಲು ಅಂದಿನ ಜನನಾಯಕರನ್ನು ಪ್ರೇರೇಪಿಸಿದ್ದರೆ ಅದರಲ್ಲಿ ಆಶ್ಚರ್ಯವೇನೂ ಇರದು. ಅವರು ಅಂಥ ಸೂಚನೆಗಳನ್ನು ಕೊಡುತ್ತಿದ್ದರೆಂದು ನಾನು ಮೈಸೂರಿನ ವೆಂಕಟಕೃಷ್ಣಯ್ಯನವರಿಂದ ಕೇಳಿದ್ದೇನೆ. ಆದರೆ ಆ ಸೂಚನೆಗಳು ರೂಪಗೊಂಡಂತೆ ತೋರುವುದಿಲ್ಲ. ರಂಗಾಚಾರ್ಯರು ಅಧಿಕಾರ ಪದವಿಯಲ್ಲಿದ್ದ ಕಾಲ ಎರಡು ವರ್ಷಗಳಿಗೂ ಕಡಮೆಯೇ. ಅಷ್ಟರೊಳಗಾಗಿ ಅವರ ಉಪದೇಶ ಫಲಕ್ಕೆ ಬರಲು ಸಮಯ ಸಾಲದೆ ಹೋಗಿರಬಹುದು.

ಆದರೆ ವಿದ್ಯಾಸಂಸ್ಕೃತಿ ಕ್ಷೇತ್ರಗಳಲ್ಲಿ ರಂಗಾಚಾರ್ಯರು ಕೆಲವು ಸಂಸ್ಥೆಗಳನ್ನು ಸ್ಥಾಪನೆ ಮಾಡಿಸಿದ್ದರೆಂದು ತೋರುತ್ತದೆ. ಅವುಗಳ ಪೈಕಿ ಮೈಸೂರು ಬೆಂಗಳೂರುಗಳ 'ಲಿಟರರಿ ಯೂನಿಯನ್' ಎಂಬ ಸಾಹಿತ್ಯ

ಸಂಘಗಳು ಮುಖ್ಯವಾದವು. ಬೆಂಗಳೂರಿನ ಸಾಹಿತ್ಯ ಸಂಘವು ಇಲ್ಲಿಯ ಡಿಸ್ಟ್ರಿಕ್ಟು ಕಛೇರಿಯ ಆವರಣದಲ್ಲಿ ಲಾಯರಸಂಘದ ಅಂಗವಾಗಿ ಈಗಲೂ ಉಳಿದಿದೆ. ಅದರ ಆಶ್ರಯದಲ್ಲಿ, ೧೮೮೦ರಲ್ಲಿ, ಬಂಗಾಳದ ಪಂಡಿತ ಶಿವನಾಥಶಾಸ್ತ್ರಿಗಳು ಸಮಾಜ ಸಂಸ್ಕಾರವನ್ನು ಕುರಿತು ಉಪನ್ಯಾಸ ಕೊಟ್ಟರು. ರಂಗಾಚಾರ್ಯರು ಆ ಸಂದರ್ಭದಲ್ಲಿ ಹಾಜರಿದ್ದು ಭಾಷಣ ಮಾಡಿದರು. ಇತರ ಎಷ್ಟೋ ಸಂದರ್ಭಗಳಲ್ಲಿ ಅವರು ಆ ಸಂಸ್ಥೆಯ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರಂತೆ. ಅದೇ ಸುಮಾರಿನಲ್ಲಿ ಮಹಾರಾಜ ಶ್ರೀಚಾಮರಾಜೇಂದ್ರ ಒಡೆಯರಿಗೆ ಒಬ್ಬ ಆಪ್ತೋಪಾಧ್ಯಾಯರನ್ನು (ಟ್ಯೂಟರ್-ಕಂಪ್ಯಾನಿಯನ್) ನಿಯಮಿಸಬೇಕೆಂದು ರಂಗಾಚಾರ್ಯರು ಉದ್ದೇಶಿಸಿದ್ದರು. ಆ ಜವಾಬ್ದಾರಿಯ ಕೆಲಸಕ್ಕೆ ಕನ್ನಡ ಬಲ್ಲ ಒಬ್ಬ ಮೈಸೂರಿಗನನ್ನೇ ಆರಿಸಿಕೊಳ್ಳಬೇಕೆಂದು ಅವರ ಆಶಯ. ನಳದುರ್ಗದ ಕೃಷ್ಣರಾಯರೆಂಬವರು ಆಗತಾನೆ ಮದರಾಸ್ ವಿಶ್ವವಿದ್ಯಾನಿಲಯದಿಂದ ಎಂ.ಎ.ಪಟ್ಟವನ್ನು ಸಂಪಾದಿಸಿಕೊಂಡಿದ್ದರು. ಅವರ ವಿಷಯವನ್ನು ರಂಗಾಚಾರ್ಯರು ಯಾರಿಂದಲೋ ಕೇಳಿದ್ದರು. ಅವರ ವ್ಯಕ್ತಿ ಸ್ವರೂಪವನ್ನೂ ಭಾಷಣ ಪ್ರಭಾವವನ್ನೂ ತಾವು ಸ್ವತಃ ಕಂಡುಕೊಳ್ಳಬೇಕೆಂದು, ಅದಕ್ಕಾಗಿ ಬೆಂಗಳೂರಿನ ಸಾಹಿತ್ಯ ಸಂಘವು ಅವರಿಂದ ಒಂದು ಉಪನ್ಯಾಸವನ್ನು ಏರ್ಪಡಿಸುವಂತೆ ಸಲಹೆ ಕೊಟ್ಟರಂತೆ. ಅದರ ಮೇರೆಗೆ ಕೃಷ್ಣರಾಯರ ಉಪನ್ಯಾಸ ನಡೆಯಿತು. ರಂಗಾಚಾರ್ಯರು ಹಾಜರಿದ್ದರು. ಅವರು ಉಪನ್ಯಾಸಕರ ವಿದ್ವತ್ತನ್ನು ಮೆಚ್ಚಿ. ಅವರನ್ನು 'ಅಟ್ಯಾಚೆ' ಎಂಬ ಸಹಾಯಕಾಧಿಕಾರ ಸ್ಥಾನಕ್ಕೆ ನಿಯಮಿಸಿದರಂತೆ. ಆ ಕಾಲದಲ್ಲಿ ಹೀಗೆ ಉಪಯುಕ್ತವಾಗಿದ್ದದ್ದು ಬೆಂಗಳೂರಿನ 'ಲಿಟರೆರಿ ಯೂನಿಯನ್.'

ಸರ್ ಕೆ. ಶೇಷಾದ್ರಯ್ಯರವರ ಕಾಲದಲ್ಲಿ ಸಾರ್ವಜನಿಕ ರಾಜಕೀಯಕ್ಕೆ ಹೆಚ್ಚು ಪ್ರೋತ್ಸಾಹವಿದ್ದಂತೆ ತೋರುವುದಿಲ್ಲ. ಅದು ಅಧಿಕಾರ ದರ್ಪದ ಕಾಲ. ಶೇಷಾದ್ರಯ್ಯರವರು ಸ್ವತಃ ಮಹಾ ಸಾಮರ್ಥ್ಯವಂತರಾಗಿದ್ದದ್ದು ಮಾತ್ರವೇ ಅಲ್ಲದೆ, ಅವರ ಸುತ್ತ ಮುತ್ತ ಒಂದು ಸಮರ್ಥ ಜನದ ತಂಡ ಸೇರಿಕೊಂಡು ಅವರಿಗೆ ಬಲ ಕೊಡುತ್ತಿದ್ದದ್ದು ಹೆಚ್ಚಿನ ಸಂಗತಿ. ಈ ಉಪಜೀವಿವರ್ಗವು ಶೇಷಾದ್ರಯ್ಯರವರ ತೇಜಸ್ಸನ್ನೂ ಪ್ರಭಾವವನ್ನೂ ಎಲ್ಲೆಲ್ಲೂ ಕೊಂಡಾಡಿ ಹರಡುತ್ತಿದ್ದದ್ದರಿಂದ ಜನವೆಲ್ಲ ಆ ಹೆಸರಿನ ಹಿರಿಮೆಗೆ ಮನಸೋತಿತ್ತು. ಎಲ್ಲವನ್ನೂ ನೋಡಿಕೊಳ್ಳಲು ಸರ್ವಶಕ್ತರಾದ ದಿವಾನರಿರುವಲ್ಲಿ ಪ್ರಜೆಗಳು ಸ್ವತಃ ಏಕೆ ಚಿಂತಿಸಬೇಕು? ಇಂಥ ಮನೋವೃತ್ತಿ ಆಗ ಪ್ರಬಲಿಸಿತ್ತೆಂದು ತೋರುತ್ತದೆ. 'ದೇಶಾಭಿಮಾನಿ' ಮುಂತಾದ ಒಂದೆರಡು ಪತ್ರಿಕೆಗಳ ಆಕ್ಷೇಪಣೆಗಳು, ಪ್ರಜಾಪ್ರತಿನಿಧಿ ಸಭೆಯಲ್ಲಿ ಕೆಲ ಮಂದಿ ಸದಸ್ಯರು ಮಾಡುತ್ತಿದ್ದ ಟೀಕೆಗಳು-ಇವಿಷ್ಟನ್ನು ಬಿಟ್ಟರೆ ಶೇಷಾದ್ರಯ್ಯರವರ ಕಾಲದಲ್ಲಿ ಸಾರ್ವಜನಿಕ ಧ್ವನಿ ಕೇಳಬಂದಂತಿಲ್ಲ.

೧೮೯೨ರ ಸುಮಾರಿನಲ್ಲಿ ಒಂದು ವಿಶೇಷ ಸಂಗತಿ ನಡೆಯಿತು. ಆಗ ಪ್ರಜಾಪ್ರತಿನಿಧಿ ಸಭೆಯು ವರ್ಷಕ್ಕೊಂದು ಸಾರಿ ಮಾತ್ರ ಸೇರುತ್ತಿತ್ತು. ಸರಕಾರದ ದಿನಂಪ್ರತಿಯ ಆಡಳಿತವನ್ನು ಪರೀಕ್ಷೆಮಾಡಿ ತಿದ್ದುವ ಕೆಲಸವನ್ನು ವರ್ಷದಾದ್ಯಂತವೂ ನಡಸಲು ಅದಕ್ಕೆ ಯಾವ ಉಪಕರಣಾಂಗವೂ ಇರಲಿಲ್ಲ. ಒಂದು ವರ್ಷದ ಅಧಿವೇಶನ ಮುಗಿದ ಬಳಿಕ ಮತ್ತೊಂದು ಅಧಿವೇಶನ ಬರುವವರೆಗೂ ಪ್ರಜಾಪ್ರತಿನಿಧಿ ಸಭೆಯ ಹೆಸರಿನಲ್ಲಿ ಸರಕಾರಕ್ಕೆ ಆಗಾಗ ಸಲಹೆ ಸೂಚನೆಗಳನ್ನು ಕೊಡಲು ಸಭೆಯ ಪ್ರತಿನಿಧಿಯಾಗಿ ಒಂದು ಕೇಂದ್ರ ಸಮಿತಿ ನೇಮಕವಾಗತಕ್ಕದ್ದು ಯುಕ್ತವೆಂದು ಕೆಲಮಂದಿ ದಿವಾನ್ ಶೇಷಾದ್ರಯ್ಯರವರಿಗೆ ಭಿನ್ನಯಿಸಿದರು. ಹಾಗೆ ಸಲಹೆ ಕೊಟ್ಟವರಲ್ಲಿ ದೇಶೀಯರಾದ ಎಂ. ವೆಂಕಟಕೃಷ್ಣನವರು, ಡಿ. ವೆಂಕಟರಾಮಯ್ಯನವರು, ಸಿ. ಶ್ರೀನಿವಾಸರಾಯರು-ಇಂಥವರ ಜೊತೆಗೆ ರೆವರೆಂಡ್ ಹೇಗ್ (Haigh), ಕಾಫೀ ಪ್ಲಾಂಟರ್ ಆಂಡರ್ಸನ್ ಮುಂತಾದ ವಿದೇಶೀಯರೂ ಸೇರಿದ್ದರು. ಅವರ ಸಲಹೆ ಶೇಷಾದ್ರಯ್ಯರವರಿಗೆ ಒಪ್ಪಿತವಾಗಲಿಲ್ಲ. ಅದರ ಮೇಲೆ ಆ ಪ್ರತಿನಿಧಿ ಸಭೆಯ ಸದಸ್ಯರು ತಾವೇ ಸ್ವತಂತ್ರವಾಗಿ ಸಭೆ ನಡಸಿ ಒಂದು ಸ್ಥಾಯೀ ಸಮಿತಿಯನ್ನು (Standing Committee) ನಿಯಮಿಸಿ, ಆ ಸಮಿತಿಯನ್ನು ಸರಕಾರವು ಪ್ರಜಾಪ್ರತಿನಿಧಿ ಸಭೆಯ ಕಾರ್ಯಾಂಗವನ್ನಾಗಿ ಅಂಗೀಕರಿಸಬೇಕೆಂದೂ ಸರಕಾರದ ವರದಿಗಳನ್ನೂ ಶಾಸನ ಯೋಜನೆಗಳನ್ನು ಇತರ ಮುಖ್ಯ ಕಾಗದ ಪತ್ರಗಳನ್ನೂ ಅಭಿಪ್ರಾಯದ ಬಗ್ಗೆ ಆ ಸಮಿತಿಗೆ ಕಳುಹಿಸಬೇಕೆಂದೂ ನಿರ್ಣಯಗಳನ್ನು ಮಾಡಿ ಸರಕಾರಕ್ಕೆ ಕಳುಹಿಸಿದರು. ಶೇಷಾದ್ರಯ್ಯರವರ ಸರಕಾರವು ಈ ಬೇಡಿಕೆಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಸಭೆಯ ಮುಂದಿನ ಅಧಿವೇಶನದಲ್ಲಿ ಕೆಲಮಂದಿ ಸದಸ್ಯರು ಈ ವಿಚಾರವನ್ನೆತ್ತಿದರು.

ಸದಸ್ಯರು: "ನಮ್ಮ ಸ್ಥಾಯೀ ಸಮಿತಿಯ ಕಾಗದಕ್ಕೆ ಸರಕಾರದ ಜವಾಬೆಲ್ಲಿ?"

ಶೇಷಾದ್ರಯ್ಯರ್: "ನಿಮ್ಮ ಆ ಸಮಿತಿ ಸುಟ್ಟುಹೋಯಿತು."

ಸದಸ್ಯರು: "ಆ ಸಮಿತಿಯಲ್ಲಿ ಸುಡದವರು ಇದ್ದಾರೆ."

ಶೇಷಾದ್ರಯ್ಯರ್: "ಹಾಗಾದರೆ ಅದನ್ನು ಹೂಳಲಾಗಿದೆ."

ಸರಕಾರದ ಮುಖ್ಯಸ್ಥರು ಈ ರೀತಿ ಆಡಿದಾಗ ಅದಕ್ಕೆ ಪ್ರತಿ ಹೇಳಲು ಬೇಕಾದಷ್ಟು ಧೈರ್ಯವೂ ಸ್ವಾರ್ಥ ನಿರಪೇಕ್ಷೆಯೂ ಉಳ್ಳ ಮಂದಿ ಆಗ ಹೆಚ್ಚಾಗಿರಲಿಲ್ಲ. ಕೆಲವರು ಅಧಿಕಾರ ಪಕ್ಷದೊಡನೆ ಸೇರಿ ನಕ್ಕರು; ಬಹು

ಜನ ಉಪೇಕ್ಷೆಯಿಂದಿದ್ದರು. ಪ್ರತಿನಿಧಿ ಸಭೆಯ ಸ್ಥಾಯೀ ಸಮಿತಿಯ ಆಲೋಚನೆಯು ಬರಿಯ ಆಲೋಚನೆಯಾಗಿಯೇ ಉಳಿದುಕೊಂಡಿತು.

ನನಗೆ ತಿಳಿದಮಟ್ಟಿಗೆ ಪ್ರಜಾಪ್ರತಿನಿಧಿ ಸಭೆಯ ಸದಸ್ಯರನ್ನು ಸ್ವತಂತ್ರವಾಗಿ ಸಂಘಟನ ಮಾಡಬೇಕೆಂಬ ಪ್ರಯತ್ನ ಮೊದಲು ನಡೆದದ್ದು ೧೯೦೯ರಲ್ಲಿ. ಆಗ ನಾನು ದಿವಾನ್ ರಂಗಾಚಾರ್ಯರ ಜೀವನ ಚರಿತ್ರೆಯನ್ನು ಬರೆದಿದ್ದೆ. ಅವರ ಪ್ರಜಾತಂತ್ರ ಕಲ್ಪನೆಯ ಪ್ರಭಾವ ನನ್ನ ಮನಸ್ಸಿನಲ್ಲಿ ಹೊಸದಾಗಿ ತುಂಬಿತ್ತು. ಆ ಉತ್ಸಾಹದಲ್ಲಿ ನಾನು ಮೈಸೂರಿಗೆ ಹೋಗಿ ವೆಂಕಟಕೃಷ್ಣಯ್ಯನವರೇ ಮುಂತಾದ ಪ್ರಮುಖರನ್ನು ದರ್ಶನಮಾಡಿ ನನ್ನ ಯೋಚನೆಯನ್ನು ಅವರಿಗೆ ಅರಿಕೆಮಾಡಿದೆ. ಪ್ರಜಾಪ್ರತಿನಿಧಿ ಸಭೆಯ ಸದಸ್ಯರು ಸರಕಾರಕ್ಕೂ ಪ್ರಜೆಗೂ ನಡುವೆ ಒಂದು ಸೇತುವೆಯಂತೆ ಇರುತ್ತಾರೆ. ಅವರು ಒಂದು ಪಕ್ಕದಲ್ಲಿ ಪ್ರಜೆಯ ಮನಸ್ಸನ್ನು ತಿಳಿದುಕೊಳ್ಳುತ್ತಿರಬೇಕು; ಇನ್ನೊಂದು ಪಕ್ಕದಲ್ಲಿ ಸರಕಾರದ ಮನಸ್ಸನ್ನು ತಿದ್ದುತ್ತಿರಬೇಕು. ಈ ಕೆಲಸ ಸಾರ್ಥಕವಾಗಬೇಕಾದರೆ ಅವರು ವರ್ಷದ ೩೬೫ ದಿವಸದಲ್ಲಿ ಒಂದು ನಾಲ್ಕೈದು ದಿನ ಮಾತ್ರ ಮೈಸೂರಿಗೆ ಬಂದು ಕುಳಿತು ಮಾತನಾಡಿ ಹೋದರೆ ಸಾಲದು. ತಿಂಗಳು ತಿಂಗಳೂ ಅವರು ಆ ಕೆಲಸವನ್ನು ಮಾಡುತ್ತಿರಬೇಕು. ಆ ಕೆಲಸಕ್ಕೆ ಸಾಧಕವಾಗಿ ಅವರು ಒಂದು ಸಂಸ್ಥೆಯನ್ನು ಸ್ಥಾಪಿಸಿಕೊಳ್ಳಬೇಕು. ಆ ಸಂಸ್ಥೆಯ ಕಾರ್ಯಸಮಿತಿಗಳು ಈ ಕಡೆ ಪ್ರಜಾಜನವನ್ನೂ ಆ ಕಡೆ ಸರಕಾರವನ್ನೂ ಸಂತತವಾಗಿ ಕೃಷಿ ಮಾಡುತ್ತಿರಬೇಕು. ಇದು ನಾನು ಮಾಡಿದ ಅರಿಕೆ. ಆ ಸಂದರ್ಭದಲ್ಲಿ ಆಗ ಪ್ರಜಾಪ್ರತಿನಿಧಿಸಭೆಯ ಯುವಕ ಸದಸ್ಯರಾಗಿದ್ದ ಹಾಸನದ ಎಚ್. ವಿ. ರಂಗಸ್ವಾಮಿಯವರನ್ನು ನಾನು ನಾಲ್ಕಾರು ಸಾರಿ ಕಂಡು ಅಜೂಜುವಾರಿ ಮಾಡಿದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ.

ನಾನು ಮಾಡಿದ್ದ ಸೂಚನೆ ವೆಂಕಟಕೃಷ್ಣಯ್ಯನವರಿಗೆ ಒಪ್ಪಿಗೆಯಾಯಿತು. ಅವರು ಇತರರನ್ನು ಒಪ್ಪಿಸಿದರು. ಅದರಂತೆ ಒಂದು ದಿನ ಸಂಜೆ ಮೈಸೂರು ನಂಜರಾಜ ಬಹದ್ದೂರ್ ಛತ್ರದಲ್ಲಿ ಸಭೆ ಸೇರಿ, ಅಲ್ಲಿ 'ಮೈಸೂರು ಸಾರ್ವಜನಿಕ ಸಭೆ' ಎಂಬ ಸಂಸ್ಥೆಯು ಸ್ಥಾಪಿತವಾಯಿತು. ಅಡ್ವೋಕೇಟರಾಗಿದ್ದ ಶ್ರೀ ಸಂತೇಬಾಚಹಳ್ಳಿ ನಂಜಪ್ಪನವರು ಕಾರ್ಯದರ್ಶಿಯಾಗಿ ನಿಯಮಿತವಾದರು.

ಸಂತೇಬಾಚಹಳ್ಳಿ ನಂಜಪ್ಪನವರು ದೊಡ್ಡಮನುಷ್ಯರು; ಸಾತ್ತ್ವಿಕರು. ಅವರನ್ನು ಜನಪ್ರಿಯರನ್ನಾಗಿ ಮಾಡಿದ್ದ ಗುಣಗಳಲ್ಲಿ ಮುಖ್ಯವಾದವು ಎರಡು: (೧) ಅವರ ಹಾಸ್ಯರಸಿಕತೆ, (೨) ಸೊಗಸಾದ ಕೈಬರಹ. ಅವರಿಗಿಂತ ಸುಂದರವಾಗಿ ಕನ್ನಡ ಅಕ್ಷರವನ್ನು (ಇಂಗ್ಲಿಷನ್ನು ಸಹ) ಬರೆಯಬಲ್ಲವರು ಬಹು ವಿರಳ, ಹಾಗೆಯೇ ಕಥೆ

ಹೇಳಿ ನಗಿಸುವುದರಲ್ಲಿಯೂ ಅವರಿಗೆ ಸಮಾನರು ಅಪರೂಪ. ಸಭೆಯ ಕಾರ್ಯಕ್ಕಾಗಿ ನಿಯಮಾವಳಿಯ ಕರಡು ಪ್ರತಿಯನ್ನು ನಾನು ಬರೆದಿದ್ದೆ. ಅದನ್ನು ಸಭೆಯವರು ತಿದ್ದಿ ಅಂಗೀಕರಿಸಿ ಅಚ್ಚುಮಾಡಿಸಿದ್ದರು.

ಆದರೆ ಆ ಸಭೆಯ ಕಾರ್ಯಗಳೇನೂ ಉದ್ದೇಶಪಟ್ಟಿದ್ದಂತೆ ನಡೆಯಲಿಲ್ಲ. ಆ ಸಂಸ್ಥೆ ಎರಡು ಮೂರು ವರ್ಷ ನಾಮಮಾತ್ರದ್ದಾಗಿದ್ದು ಕಣ್ಮರೆಯಾಯಿತು. ಸರಕಾರದ ಪುರಸ್ಕಾರವಿಲ್ಲದೆ ಸ್ವಂತ ಲಾಗೋಡಿನಿಂದ ಕೆಲಸ ಮಾಡಬೇಕಾಗಿದ್ದ ಸಂಸ್ಥೆ ಇನ್ನೇನಾದೀತು? ಹಣಕಾಸಿಲ್ಲದ ಸಾರ್ವಜನಿಕ ಇಷ್ಟೇ.

ಈ ಸುಮಾರಿನಲ್ಲಿ ಬೆಂಗಳೂರಿನಲ್ಲಿ ಸಾರ್ವಜನಿಕ ವಿಷಯದಲ್ಲಿ ನವೋತ್ಸಾಹಭರಿತರಾದ ಯುವಕರು ಕೆಲವರಿದ್ದರು. ಅವರಿಗೆ ಆಶ್ರಯವಾಗಿದ್ದದ್ದು ಚಿಕ್ಕಪೇಟೆಯಲ್ಲಿ ಶ್ರೀ ಕೆ. ಎಸ್. ಕೃಷ್ಣಯ್ಯರವರ ಮನೆ. ಕೃಷ್ಣಯ್ಯರು ಗಣ್ಯ ಮನೆತನದವರು. ಆ ಕಾಲದಲ್ಲಿ ಹಾಗೆ ಪ್ರಸಿದ್ಧ ಕುಟುಂಬದವರಾಗಿ ಬಿ.ಎ. ಪ್ಯಾಸ್ ಮಾಡಿದ ವಿದ್ಯಾವಂತರು ಸರಕಾರದ ಚಾಕರಿಯನ್ನು ಸಂಪಾದಿಸಬೇಕೆಂದು ಇಷ್ಟಪಟ್ಟಿದ್ದಿದ್ದರೆ ಅವರಿಗೆ ಅದು ಅಸಾಧ್ಯವಾಗುತ್ತಿರಲಿಲ್ಲ. ಕೃಷ್ಣಯ್ಯರವರು ಆ ಕಡೆಗೆ ಮನಸ್ಸು ಬಿಡದೆ, ಸ್ವತಂತ್ರ ಜೀವಿಕಾವೃತ್ತಿಯಿಂದ ಬಾಳಬೇಕೆಂದು ನಿಶ್ಚಯ ಮಾಡಿದ್ದವರು. ಅವರ ಸುತ್ತಮುತ್ತ ನಾವು ನಾಲ್ಕಾರು ಮಂದಿ ಸೇರಿಕೊಂಡೆವು. ಅವರ ವಿಶಾಲವಾದ ಮನೆ, ವಿಶಾಲವಾದ ಮನಸ್ಸು. ನಿಗರ್ವಿತೆ, ನೀತಿಶೀಲತೆ, ಸ್ನೇಹತತ್ಪರತೆ, ಔದಾರ್ಯ, ಕ್ಷಮೆ, ವಿದ್ವದಭಿಮಾನ-ಈ ಗುಣಗಳಿಂದ ಅವರ ಆಶ್ರಯ ಆಕರ್ಷಕವಾಗಿತ್ತು. ಇದರ ಜೊತೆಗೆ ಕೆ.ಟಿ. ಅಪ್ಪಣ್ಣನವರ ಹಿಂದೂ ಕಾಫಿ ಕ್ಲಬ್ ಆ ಸಮೀಪದಲ್ಲಿಯೇ ಇದ್ದದ್ದು ಮತ್ತೊಂದು ಆಕರ್ಷಣೆ. ಸಾಮಾನ್ಯವಾಗಿ ನಾವು ಏಳೆಂಟು ಮಂದಿ ಪ್ರತಿ ನಿತ್ಯವೂ ಬೆಳಗ್ಗೆ, ಸಂಜೆ ಕೃಷ್ಣಯ್ಯರವರ ಮನೆಯಲ್ಲಿಯೇ ಇರುತ್ತಿದ್ದೆವು. ಅಲ್ಲಿಗೆ ನಾಲ್ಕಾರು ವರ್ತಮಾನ ಪತ್ರಿಕೆಗಳು ಬರುತ್ತಿದ್ದವು. ಅವುಗಳ ಪೈಕಿ ಅರವಿಂದ ಘೋಷರ 'ವಂದೇಮಾತರಂ' ದಿನಪತ್ರಿಕೆ, 'ಕರ್ಮಯೋಗಿ' ವಾರಪತ್ರಿಕೆ-ಈ ಇಂಗ್ಲೀಷ್ ಪತ್ರಿಕೆಗಳು ಬಹು ಉತ್ತೇಜಕಗಳಾಗಿದ್ದವು. ಅದು ಬಂಗಾಳೀ ಚಳವಳಿಯ ಕಾಲ; ತಿಲಕರ ಕಾಲ. ನಮ್ಮ ಕಾಫಿ ಫಲಾಹಾರಗಳ ನಡುನಡುವೆ ಸಾರ್ವಜನಿಕ ಜಿಜ್ಞಾಸೆಗಳು ನಡೆಯುತ್ತಿದ್ದವು. ಆಗ ಹುಟ್ಟಿದ ಸಮಾರಂಭಗಳ ಪೈಕಿ ಪ್ರಸಿದ್ಧ ದೇಶಭಕ್ತರ ಜ್ಞಾಪಕೋತ್ಸವಗಳದು ಒಂದಂಶ. ಹೀಗೆ ನಡೆದದ್ದು ಹಿಂದೆ ಡಿ. ವೆಂಕಟರಾಮಯ್ಯನವರನ್ನು ಕುರಿತ ಪ್ರಕರಣದಲ್ಲಿ ನಾನು ಪ್ರಸ್ತಾವಿಸಿರುವ ರಯಾನಡೆ ಜ್ಞಾಪಕೋತ್ಸವ.

ಕೆ.ಟಿ. ಅಪ್ಪಣ್ಣನವರು ನಮಗೆ ಪ್ರೋತ್ಸಾಹಕರಾಗಿಯೂ ಸಹಾಯಕರಾಗಿಯೂ ಇದ್ದರು. ಅವರು ಅಹಮದ್ ಬಿಲ್ಡಿಂಗ್ಸ್ ಕಟ್ಟಡದಲ್ಲಿ ಹಿಂದೂ ರೆಸ್ಟೊರೆಂಟ್ ಎಂಬ ಉಪಾಹಾರ ಮಂದಿರವನ್ನು ಪ್ರಾರಂಭಿಸಿದಮೇಲೆ. ಅವರು ಚಿಕ್ಕಪೇಟೆಯಲ್ಲಿದ್ದ ಹಿಂದೂ ಕಾಫಿ ಕ್ಲಬ್ ಜಾಗ ಬಿಡುವಾಯಿತು. ಆ ಕಟ್ಟಡದಲ್ಲಿ ಶ್ರೀರಾಮಕೃಷ್ಣ

ಸೇವಾ ಸಂಘ ಎಂಬ ಸಂಸ್ಥೆಯನ್ನುಪಕ್ರಮಿಸಿ ಅದರಲ್ಲಿ ಒಂದು ವಾಚನಾಲಯವನ್ನೂ ಗ್ರಂಥ ಭಂಡಾರವನ್ನೂ ಏರ್ಪಡಿಸಿದ್ದೆವು. ಅದು ನವರಾತ್ರಿಯ ಕಾಲದಲ್ಲಿ. ಅಂದು ಕೃಷ್ಣಯ್ಯರೂ ನಾವೂ ಮೇಜು ಬೆಂಚುಗಳನ್ನು ಹೊತ್ತು ತಂದದ್ದು ನನ್ನ ಜ್ಞಾಪಕದಲ್ಲಿ ನಿಂತಿದೆ. ಆ ವಾಚನಾಲಯ ಸುಮಾರು ಒಂದು ವರ್ಷ ನಡೆಯಿತು. ಅದಕ್ಕೆ ಬರುತ್ತಿದ್ದ ಚಂದಾ ಹಣವು ಬಾಡಿಗೆಗೂ ದೀಪದ ಖರ್ಚಿಗೂ ಸಾಕಾಗುತ್ತಿರಲಿಲ್ಲ. ಮೂಲದ್ರವ್ಯವನ್ನು ಕೊಟ್ಟಂತೆಯೇ ಕಂಭರ್ತಿಯ ಹಣವನ್ನೂ ಕೃಷ್ಣಯ್ಯರವರೇ ಆಗಾಗ ಸರಿಮಾಡುತ್ತಿದ್ದರು.

ಅಷ್ಟರಲ್ಲಿ ಕೃಷ್ಣಯ್ಯರವರು ಕೊಂಡುಕೊಳ್ಳಬೇಕಾಗಿ ಬಂದ 'ಐರಿಷ್ ಪ್ರೆಸ್' ಎಂಬ ಮುದ್ರಣ ಕಾರ್ಖಾನೆಯನ್ನು ಅವರು ಸಿದ್ದಿಕಟ್ಟೆಯಲ್ಲಿಯ ಗುಂಡೋಪಂತರ ಮನೆಯ ಕಟ್ಟಡಕ್ಕೆ ಸಾಗಿಸಬೇಕಾಯಿತು. ಆ ಕಟ್ಟಡಕ್ಕೆ ಸೇರಿದಂತೆ ಬೀದಿಯಕಡೆಗೆ ಒಂದು ಸ್ವತಂತ್ರವಾದ ಕೊಠಡಿ ಇತ್ತು. ಅದು ನಮ್ಮ ಮುಂದಿನ ಕಾರ್ಯಕ್ಷೇತ್ರವಾಯಿತು. ಅಲ್ಲಿ ಪಾಪ್ಯುಲರ್ ಎಜುಕೇಷನ್ ಲೀಗ್ (Popular Education League) ಎಂಬ ಸಂಸ್ಥೆಯನ್ನು ಆರಂಭಿಸಿದೆವು. ಅದರಲ್ಲಿ ವಾಚನಾಲಯದ ಜೊತೆಗೆ ವಾರವಾರವೂ ಉಪನ್ಯಾಸಗಳೂ ಕಾವ್ಯವಾಚನಗಳೂ ಆಗುತ್ತಿದ್ದವು. ಎಂ.ಜಿ.ವರದಾಚಾರ್ಯರು ಅಲ್ಲಿ ನಾಲ್ಕಾರು ಸಲ ಭಾಷಣ ಮಾಡಿದರು.

ಆ ಸಂಸ್ಥೆಯು ಮಾಗಡಿ ರಸ್ತೆಯಲ್ಲಿದ್ದ ಕುಷ್ಠರೋಗದ ಮತ್ತು ಅನಿವಾರಣೀಯ ರೋಗಗಳ ಆಸ್ಪತ್ರೆಯಲ್ಲಿ ದೀಪಾವಳಿಯ ಹಬ್ಬದ ನಿಮಿತ್ತ ಸವಿ ತಿಂಡಿಯನ್ನೂ ಬಟ್ಟೆ ಬರೆಗಳನ್ನೂ ಹಂಚುವ ಏರ್ಪಾಟನ್ನು ಕೈಕೊಂಡಿತು. ಇದನ್ನು ಕುರಿತು ಬೇರೆಕಡೆ ಬರೆದಿದ್ದೇನೆ. ಆ ಸೇವಾಕಾರ್ಯ ನಾಲ್ಕೈದು ವರ್ಷ ನಡೆಯಿತು.

ಆಗಿನ ಮತ್ತೊಂದು ಸೇವಾಕಾರ್ಯ ಗುಡ್ಸ್‌ಷೆಡ್ ರೋಡಿನಲ್ಲಿ ರೈಲ್ವೆ ಜಾಗಕ್ಕೆ ಹತ್ತಿರವಿರುವ ದೇವಸ್ಥಾನದಲ್ಲಿ ರಾತ್ರಿ ಪಾಠಶಾಲೆಯನ್ನು ನಡೆಸಿದ್ದು. ಅದು ಮಿಲ್ ಕೂಲಿಗಳೂ ಮತ್ತು ಇತರ ಕೆಲಸಗಾರರೂ ಹೆಚ್ಚಾಗಿ ವಾಸ ಮಾಡುತ್ತಿದ್ದ ಪ್ರದೇಶ. ಅವರ ಪ್ರಯೋಜನಕ್ಕಾಗಿ ಗೋಖಲೆಯವರ ಹೆಸರಿನಲ್ಲಿ ಆ ನೈಟ್ ಸ್ಕೂಲನ್ನು ನಡಸಬೇಕೆಂದು ಸಂಕಲ್ಪಿಸಿದೆವು. ಅದಕ್ಕನುಕೂಲವಾಗಿ ಶ್ರೀ ಹನುಮಂತಯ್ಯ ಎಂಬವರು ಅಲ್ಲಿ ಉಪಾಧ್ಯಾಯರಾಗಿರಲು ದೊರೆತರು. ಅವರು ಉತ್ಸಾಹಿಗಳು. ಕೆಲವು ಕಾಲದ ತರುವಾಯ ಅವರು 'ಕುರುಬರ ಚರಿತ್ರೆ' ಎಂಬ ಗ್ರಂಥವನ್ನು ಬರೆದದ್ದಲ್ಲದೆ ಕುರುಬ ಜನಾಂಗದ ಉದ್ಧಾರಕ್ಕಾಗಿ ಪತ್ರಿಕಾ ಪ್ರಯತ್ನವನ್ನು ಮಾಡಿದ್ದರು. ಹನುಮಂತಯ್ಯನವರ ಉತ್ಸಾಹ ಶ್ರದ್ಧೆಗಳ ಫಲವಾಗಿ ಆ ರಾತ್ರಿ-ಪಾಠಶಾಲೆ ಚೆನ್ನಾಗಿ ನಡೆಯಿತು. ಎರಡು ಮೂರು ವರ್ಷಗಳ ತರುವಾಯ ಅದರ ಯಾಜಮಾನ್ಯವನ್ನು ಅವರೇ

ಒಪ್ಪಿಕೊಂಡು, ಆಮೇಲೆ ಅದನ್ನು ಸರಕಾರಕ್ಕೆ ಕೊಟ್ಟುಬಿಟ್ಟರೆಂದು ನನ್ನ ಜ್ಞಾಪಕ. ನಮ್ಮ ಲೀಗ್ ಸಂಸ್ಥೆ ನಾಲ್ಕೈದು ವರ್ಷಗಳಿದ್ದು ತನ್ನ ಪೂರ್ವಿಕರ ದಾರಿಯನ್ನು ಹಿಡಿಯಿತು.

ನನಗೆ ಜ್ಞಾಪಕದಲ್ಲಿರುವ ಇನ್ನೊಂದು ಪ್ರಯತ್ನವೆಂದರೆ "ಬೆಂಗಳೂರು ಸ್ಟಡಿ ಕ್ಲಬ್" ಎಂಬ ಗ್ರಂಥ ವ್ಯಾಸಂಗ ಗೋಷ್ಠಿ. ಇದರ ಕಾರ್ಯಸ್ಥಾನವೂ ಕೃಷ್ಣಯ್ಯರವರ ಐರಿಷ್ ಪ್ರೆಸ್. ತಿಂಗಳಿಗೆ ಒಂದು ಸಲ ಸಂಜೆ ವೇಳೆ ಸದಸ್ಯ ಮಿತ್ರರು ಸೇರುವುದು, ಭೋಜನ, ಉಪನ್ಯಾಸ, ಚರ್ಚೆ-ಇಷ್ಟು ಅದರ ಕಾರ್ಯಕ್ರಮ. ಆಗ ನಮ್ಮೊಂದಿಗಿದ್ದವರಲ್ಲಿ ಸಿ. ಎಸ್.ಅನಂತಪದ್ಮನಾಭಯ್ಯರ್ ಎಂಬವರೂ ಡಾ ॥ ಕೆ.ಕುನ್ಹಿಕಣ್ಣನ್ ಎಂಬವರೂ ಸ್ಮರಣೀಯರಾಗಿದ್ದಾರೆ.

ಅನಂತಪದ್ಮನಾಭಯ್ಯರವರು ಕೌನ್ಸಿಲರ್ ಆಗಿದ್ದ ಶ್ರೀ ಬಾಲಸುಂದರಂ ಅಯ್ಯರವರ ಜ್ಞಾತಿ ಸಹೋದರರು; ಸ್ವಾರಸ್ಯವಾಗಿ ಉಪನ್ಯಾಸ ಮಾಡಬಲ್ಲವರು; ಸಾಹಿತ್ಯಪ್ರಿಯರು ಮತ್ತು ಸಾತ್ತ್ವಿಕ ಶಿರೋಮಣಿಗಳು. ಅವರು ಹೈಸ್ಕೂಲಿನಲ್ಲಿ ಉಪಾಧ್ಯಾಯರಾಗಿದ್ದು ತಮ್ಮ ಬೋಧನ ಸಾಮರ್ಥ್ಯದಿಂದಲೂ ವಿದ್ಯಾರ್ಥಿ ವಾತ್ಸಲ್ಯದಿಂದಲೂ ಮಾನ್ಯತೆಯನ್ನೂ ಕೃತಜ್ಞತೆಯನ್ನೂ ಗಳಿಸಿದ್ದರು. ವಿದ್ಯಾರ್ಥಿಗಳಲ್ಲಿ ಯಾವಾಗಲೂ ಸಲಿಗೆಯಿಂದ ನಡೆದು, ಒಡನಾಡಿಗಳಾಗಿದ್ದು, ಶಿಸ್ತಿನ ಪ್ರಶ್ನೆ ಬಂದಾಗ ಮಾತ್ರ ನಿರ್ದಾಕ್ಷಿಣ್ಯರಾಗುತ್ತಿದ್ದರು.

ಡಾ ॥ ಕುನ್ಹಿಕಣ್ಣನ್‌ರವರು ವ್ಯವಸಾಯದ ಇಲಾಖೆಯಲ್ಲಿ ಕೀಟಶಾಸ್ತ್ರ ಪ್ರವೀಣರಾಗಿದ್ದರು. ಅವರು ತಮ್ಮ ಹೆಸರನ್ನು "ಕೆ.ಕೆ.ಕೆ." ಎಂಬ ಸಂಜ್ಞಾಕ್ಷರಗಳಿಂದ ಸಹಿ ಮಾಡುತ್ತಿದ್ದರು. ನಾವು ಇದಕ್ಕೆ ಕ್ರಿಮಿಕೀಟಕಾಲಾಂತಕ ಎಂದು ಅರ್ಥಮಾಡುತ್ತಿದ್ದೆವು. ಅವರು ಒಳ್ಳೆಯ ಮೇಧಾವಿಗಳು ಮತ್ತು ಸತ್ತ್ವಪ್ರಧಾನರು. ಅವರಿಗೆ ವಿಸ್ತಾರವಾದ ಗ್ರಂಥಾಲೋಚನೆ ಇತ್ತು. ಅವರು ಸ್ವತಂತ್ರ ವಿಚಾರಶೀಲರು. ಇಂಗ್ಲಿಷನ್ನು ಬಾಯಿ ಮಾತಿನಲ್ಲಿಯೂ ಬರವಣಿಗೆಯಲ್ಲಿಯೂ ಚೆನ್ನಾಗಿ ಬಳಸಬಲ್ಲವರಾಗಿದ್ದರು. ಅವರು ನಾನಾ ದೇಶ ಸಂಚಾರ ಮಾಡಿದ್ದರು. ಅವರು "ಈಸ್ಟ್ ಅಂಡ್ ವೆಸ್ಟ್" ಎಂಬ ಪೌರಸ್ತ್ಯ ಪಾಶ್ಚಾತ್ಯ ನಾಗರಿಕತೆಗಳ ವಿಮರ್ಶನ ಗ್ರಂಥವೊಂದನ್ನು ಬರೆದಿದ್ದಾರೆ. ಅವರು ನಮಗೆಲ್ಲ ತುಂಬಾ ಪ್ರಿಯರೂ ಮಾನ್ಯರೂ ಆಗಿದ್ದರು.

ನಮ್ಮ ವ್ಯಾಸಂಗ ಗೋಷ್ಠಿಯ ಕಾರ್ಯಕ್ರಮದಲ್ಲಿ ಊಟ ಮೊದಲೆ, ಉಪನ್ಯಾಸ ಮೊದಲೆ? ಎಂಬುದೇ ಒಂದು ದಿವಸದ ತರ್ಕವಾಯಿತು. ಊಟ ಮೊದಲಾಗಬೇಕೆಂಬುದಕ್ಕೆ ಬಹುಮತ ಬಂದದ್ದರಿಂದ ಅದರಂತೆ ನಡೆಯಬೇಕಾಯಿತು. ಊಟ ಪುಷ್ಕಳವಾಗಿರುತ್ತಿತ್ತು. ಅದಾದಮೇಲೆ ಸದಸ್ಯರು ತಾಂಬೂಲ ಸವಿಯುತ್ತ ಗೋಡೆಗಳಿಗೂ ಕಂಬಗಳಿಗೂ ಒರುಗತ್ತಿದ್ದರು. ಅಂಥ ವಾತಾವರಣದಲ್ಲಿ ಆಗಬೇಕಾಗಿತ್ತು

ಉಪನ್ಯಾಸ. ಒಂದು ಸಲ ನಮಗೆಲ್ಲ ಪರಮಪ್ರಿಯರೂ ಮಾನ್ಯರೂ ಆಗಿದ್ದ ಮಹಾವಿದ್ವಾಂಸರಾದ ಎನ್. ನರಸಿಂಹಮೂರ್ತಿಯವರು- 'Grotius: Father of International Law'. 'ದೇಶ ವಿದೇಶ ನ್ಯಾಯಶಾಸ್ತ್ರಕ್ಕೆ ಮೂಲ ಪುರುಷನಾದ ಗ್ರೋಷಸ್' -ಎಂಬ ವಿಚಾರವಾಗಿ ಒಂದು ಪ್ರಬಂಧವನ್ನು ಬರೆದಿದ್ದರು. ಅದನ್ನು ಅವರು ನಮ್ಮ ಗೋಷ್ಠಿಯಲ್ಲಿ ಓದಬೇಕೆಂದು ನಾವೆಲ್ಲ ಆಶೆಪಟ್ಟುಕೊಂಡು ಅವರನ್ನು ಒಪ್ಪಿಸಿದೆವು. ಅಂದು ರಾತ್ರಿ ಯಥಾಪ್ರಕಾರವಾಗಿ ಭೋಜನ ನಡೆಯಿತು. ಈರುಳ್ಳಿ ತರಕಾರಿಯ ಹುಳಿ, ಹಪ್ಪಳ ಸಂಡಿಗೆಗಳು ಬಹು ಪಕ್ವವಾಗಿ ಬಂದಿದ್ದವು. ಭೋಜನಾನಂತರ ಉಪನ್ಯಾಸ ಪ್ರಾರಂಭವಾಯಿತು. ಅಲ್ಲಿಂದ ೧೫ ನಿಮಿಷಗಳೊಳಗಾಗಿ ನಾಲ್ಕಾರು ಮಂದಿ ಕಣ್ಣು ಮುಚ್ಚಿ ಮೈ ಮರೆತಿದ್ದರು. ಇನ್ನು ನಾಲ್ಕೈದು ಮಂದಿ ಕಣ್ಣುಮುಚ್ಚುತ್ತಲೂ ತೆರೆಯುತ್ತಲೂ ಆಗಾಗ ಆಕಳಿಸುತ್ತಲೂ ಇದ್ದರು. ಎಚ್ಚೆತ್ತು ಕುತೂಹಲದಿಂದ ಕೇಳುತ್ತಿದ್ದವರು ನಾಲ್ವರೈವರು. ಉಪನ್ಯಾಸಕರಿಗೆ ಇದು ಒಳ್ಳೆಯ ಪ್ರೋತ್ಸಾಹವಲ್ಲವೆ? ಆ ನಮ್ಮ ಭೋಜನ ಸಂಸ್ಕೃತಿ ಸಮ್ಮೇಳನಗಳಲ್ಲಿ ನಿದ್ದೆಗೆ ಅವಕಾಶಕೊಡದೆ ಮಾತಾಡುತ್ತಿದ್ದವರು ಹಾಸ್ಯೋಪಾಸಿಗಳಾದ ಎಂ.ಜಿ. ವರದಾಚಾರ್ಯರಂಥವರು ಮಾತ್ರ. ಆದರೆ ಅಂಥ ಭಾಷಣದಿಂದ ನಮಗೆಲ್ಲ ನಗುಬಂದು ಜ್ಞಾನಕ್ಕಿಂತ ಜೀರ್ಣಕ್ಕೆ ಹೆಚ್ಚು ಸಹಾಯವಾಗುತ್ತಿತ್ತು. ಈ ಸಮಾರಂಭವೂ ಬಹುಕಾಲ ನಡೆಯಲಿಲ್ಲ.

ಅದೇ ಸುಮಾರಿನಲ್ಲಿ 'ಬುಕ್ ಕ್ಲಬ್' ಎಂಬ ಗ್ರಂಥ ಗೋಷ್ಠಿಯೊಂದನ್ನು ಕೆಲವರು ಪ್ರಾರಂಭಿಸಿದ್ದರು. ಅದರಲ್ಲಿ ಸಿ.ಎಸ್.ಬಾಲಸುಂದರಂ ಅಯ್ಯರವರು ಪ್ರಮುಖರು. ಆ ಕ್ಲಬ್ಬಿನ ಸದಸ್ಯರಲ್ಲಿ ಅಧಿಕ ಸಂಖ್ಯೆ ಸರಕಾರೀ ಅಧಿಕಾರಿಗಳದು. ಡಾ ॥ ಕುನ್ಹಿಕಣ್ಣನ್‌ರವರೂ ಅದರಲ್ಲಿದ್ದರು. ಅವರಲ್ಲಿ ಬಹುಮಂದಿ ನನ್ನ ಮಿತ್ರರಿದ್ದದ್ದರಿಂದ ಅದರ ಕಾರ್ಯಗಳಲ್ಲಿ ನನಗೂ ಅವಕಾಶ ದೊರೆತಿತ್ತು. ಈ ಸಂಸ್ಥೆ ನಡೆದದ್ದೂ ಒಂದೆರಡು ವರ್ಷ ಮಾತ್ರವೇ.

ಮೇಲೆ ಹೇಳಿರುವ ಪ್ರಯತ್ನಗಳಲ್ಲಿ ಒಂದೆರಡು ಹೊರತು ಉಳಿದವು ರಾಜಕೀಯ ರಂಗದವಲ್ಲ. ಹಿಂದೆ ಪ್ರಸ್ತಾವ ಮಾಡಬೇಕಾಗಿದ್ದ ಒಂದು ಸಂಸ್ಥೆ 'ನಗರ ಸಭೆ' ಎಂಬುದು. ಅದು ಮೈಸೂರು ಸಂಸ್ಥಾನದಲ್ಲಿ ಹಿಂದೆ ಇದ್ದ 'ನಗರದ ಡಿವಿಜನ್' ಎಂಬ ವಿಭಾಗಕ್ಕೆ ಸೇರಿದ್ದು. ಅದರಲ್ಲಿ ಶಿವಮೊಗ್ಗ ಕಡೂರು ಹಾಸನ ಡಿಸ್ಟ್ರಿಕ್ಟುಗಳಿದ್ದವು. ಒಟ್ಟಿನಮೇಲೆ ಅದು ಮಲೆನಾಡಿನ ಪ್ರದೇಶ. ಈ 'ನಗರ ಸಭೆ' ಯ ವಿಷಯ ನನಗೆ ಹೆಚ್ಚಾಗಿ ತಿಳಿಯದು, ಆದರೆ ಅದರ ಹೆಸರನ್ನು ಕೇಳಿದ್ದೇನೆ ಮತ್ತು ಪ್ರಜಾಪ್ರತಿನಿಧಿ ಸಭೆಯ ವರದಿಗಳಲ್ಲಿ ನೋಡಿದ್ದೇನೆ. ಆ ಸಭೆಯ ಸದಸ್ಯರ ಪೈಕಿ ಇಬ್ಬರೋ ಮೂವರೋ 'ನಗರ ಸಭೆ' ಯಿಂದ ಆರಿಸಿಬಂದವರು. ಆ ಸಭೆಯ ಮುಖ್ಯ ಕಾರ್ಯಸ್ಥಳ ಶಿವಮೊಗ್ಗ. ಚಿಕ್ಕಮಗಳೂರಿನ ಕಾಫಿ

ಪ್ಲಾಂಟರುಗಳಾದ ಶ್ರೀನಿವಾಸರಾಯರೂ ವಾಸುದೇವರಾಯರೂ ಶಿವಮೊಗ್ಗೆಯ ಸಿ.ಸುಬ್ಬರಾಯರೂ ಬಾಲಕೃಷ್ಣರಾಯರೂ ಶಂಕರನಾರಾಯಣರಾಯರೂ ನಗರ ಪ್ರತಿನಿಧಿಗಳಾಗಿ ಮಾತನಾಡುತ್ತಿದ್ದರು. ಇದು ಬಹಳ ಹಿಂದಿನ-೧೯೦೭-೮ರ ಮಾತು. ಆ ಸಂಸ್ಥೆ ಏನಾಯಿತೋ ನನಗೆ ತಿಳಿದಿಲ್ಲ. ಮೈಸೂರಿನ ಸಾರ್ವಜನಿಕ ಸಭೆಯ ದಾರಿಯನ್ನೇ ಅದೂ ಹಿಡಿದಿರಬಹುದೆಂದು ನಾನು ಊಹಿಸಿಕೊಂಡಿದ್ದೇನೆ.

ಸರ್.ಕೆ.ಶೇಷಾದ್ರಯ್ಯರವರ ಕಾಲದಲ್ಲಿ ಒಂದು ಸಂಘಟಿತ ಸಂಸ್ಥೆ ಇಲ್ಲವಾಗಿದ್ದರೂ ಜನದಲ್ಲಿ ಚಳಿವಳಿಯೇನೋ ಆಗಾಗ ನಡೆಯುತ್ತಿತ್ತು. ಶ್ರೀ ಚಾಮರಾಜೇಂದ್ರ ಒಡೆಯರವರು ದೈವಾಧೀನರಾದಮೇಲೆ ರಾಜ್ಯಪದವಿಗೆ 'ರೀಜೆನ್ಸಿ' ಏರ್ಪಾಟು ಮಾಡಬೇಕೆ? ಬೇರೆ ಏರ್ಪಾಟಾಗಬೇಕೆ? ರೀಜೆಂಟ್ ಪದವಿಗೆ ಶೇಷಾದ್ರಯ್ಯರವರನ್ನು ನಿಯಮಿಸಬಹುದೆ?-ಮೊದಲಾದ ಪ್ರಶ್ನೆಗಳು ಜನದ ಮನಸ್ಸನ್ನು ಕಲಕುತ್ತಿದ್ದವು. ಆಗ ಪ್ರಜಾಭಿಪ್ರಾಯಕ್ಕೆ ಸಂಘಟಿತ ರೂಪವನ್ನು ಕೊಡಲು ಮೈಸೂರಿನಲ್ಲಿಯೂ ಬೆಂಗಳೂರಿನಲ್ಲಿಯೂ ಅನೇಕ ಭಾರಿ ಸಭೆಗಳು ನಡೆದುವು. ಬೆಂಗಳೂರಿನ ಸಭೆಗಳಲ್ಲಿ ಡಿ. ವೆಂಕಟರಾಮಯ್ಯ ನವರು ಮುಖ್ಯ ಭಾಗವಹಿಸಿದ್ದರು. ಆ ಪ್ರಜಾ ಸಭೆಗಳ ಕೋರಿಕೆಯಂತೆಯೇ ಆಗಿನ ಮಹಾರಾಣಿಯವರನ್ನು ಇಂಡಿಯ ಸರಕಾರದವರು ರೀಜೇಂಟರನ್ನಾಗಿ ನಿಯಮಿಸಿದರು.

ಒಂದು ಸಲ ನವರಾತ್ರಿಯ ಕಾಲದಲ್ಲಿ ಮೈಸೂರು ಪಟ್ಟಣದ ಮಂಡಿ ಮೊಹಲ್ಲದಲ್ಲಿ ವರ್ತಕರಿಗೆ ಅನನುಕೂಲ ಕಾರಣವಾದ ಒಂದಾನೊಂದು ಮಾರ್ಪಾಟನ್ನು ಸರಕಾರದವರು ಜಾರಿಗೆ ತಂದರು. ಆ ಮಂಡಿಪೇಟೆಯು ಬಹು ಇಕ್ಕಟ್ಟಾಗಿದ್ದದ್ದರಿಂದಲೂ ಆಗ ಕಾಲರಾ ಪ್ಲೇಗ್ ಮೊದಲಾದ ಅಂಟುರೋಗಗಳ ಭೀತಿ ಹೆಚ್ಚಾಗಿದ್ದದ್ದರಿಂದಲೂ ಹಳ್ಳಿಪಳ್ಳಿಗಳಿಂದ ಬರುವ ಗಾಡಿಗಳು ದೂರದಲ್ಲಿ ನಿಲ್ಲತಕ್ಕದ್ದೆಂದು ಸರಕಾರದವರು ವಿಧಾಯಕ ಮಾಡಿದ್ದರಂತೆ. ಈ ಅಪ್ಪಣೆಯ ಉದ್ದೇಶವೇನೋ ಶ್ಲಾಘ್ಯವಾದದ್ದೆಂಬುದು ಸ್ಪಷ್ಟವಾಗಿಯೇ ಇದೆ. ಆದರೆ ಆ ಅಪ್ಪಣೆಯನ್ನು ಕಾರ್ಯರೂಪಕ್ಕೆ ತರಬೇಕಾದ ಸಣ್ಣ ಅಧಿಕಾರಿಗಳು ವರ್ತಕರ ವಿಷಯದಲ್ಲಿ ಸಣ್ಣ ರೀತಿಯಲ್ಲಿ ವರ್ತಿಸಿದ್ದರೆಂದು ತೋರುತ್ತದೆ. ಇದರಿಂದ ವರ್ತಕರಿಗೆ ಅಸೌಕರ್ಯವಾಗಿ ಆಗ್ರಹ ಬಂತು. ಸರಕಾರದ ಹುಕುಮನ್ನು ಜಾರಿಗೆ ತರುವ ಜವಾಬ್ದಾರಿಯಲ್ಲಿ ಆಗ್ಗೆ ಅಸಿಸ್ಟೆಂಟ್ ಕಮಿಷನರಾಗಿದ್ದ ಟಿ.ಆನಂದರಾಯರವರಿಗೂ ಒಂದು ಭಾಗವಿತ್ತಂತೆ. ವರ್ತಕರು ಸರಕಾರಕ್ಕೆ ಪಾಠ ಕಲಿಸಬೇಕೆಂದು ಮನಸ್ಸು ಮಾಡಿ, ನವರಾತ್ರಿಯ ಕಾಲದಲ್ಲಿ ತಮ್ಮ ಅಂಗಡಿಗಳನ್ನೆಲ್ಲ ಬಂದ್ ಮಾಡಿಬಿಟ್ಟರು. ಈ ಕೋಲಾಹಲ ದಿವಾನ್ ಶೇಷಾದ್ರಯ್ಯರವರ ಗಮನಕ್ಕೆ ಬರಲೇಬೇಕಾಯಿತು. ಅವರು

ತಕ್ಕ ಮಧ್ಯಸ್ಥಗಾರರನ್ನು ಕಳುಹಿಸಿ ವರ್ತಕರಿಗೆ ಸಮಜಾಯಿಷಿ ಹೇಳಿಸಿ ಮಂಡಿ ವ್ಯಾಪಾರವು ಯಥಾಪ್ರಕಾರ ಸಾಗುವಂತೆ ಮಾಡಿದರು.

ಹಳೆಯ ಅರಮನೆಗೆ ಬೆಂಕಿ ತಗುಲಿದ ಸಂದರ್ಭದಲ್ಲಿಯೂ ಜನಾಭಿಪ್ರಾಯವು ಬಹಿರಂಗ ಸಭೆಗಳಲ್ಲಿ ಸಂಘಟಿತ ರೂಪವನ್ನು ತಾಳಿತು. ಶೇಷಾದ್ರಯ್ಯರ್ ಅವರು ಅದಕ್ಕೆ ತಲೆಬಾಗಿ ಆ ವಿಷಾದ ಘಟನೆಯ ಪೂರ್ವೋತ್ತರ ಸಂದರ್ಭಗಳನ್ನು ವಿಮರ್ಶನೆಮಾಡಲು ಒಂದು ಸಮಿತಿಯನ್ನು ನಿಯಮಿಸಿದರು. ಪಿ.ಎನ್.ಕೃಷ್ಣಮೂರ್ತಿ (ಮುಂದಿನ ದಿವಾನ್), ಮುಖ್ಯ ಇಂಜನಿಯರ್ ಕರ್ನಲ್ ಬೊವೆನ್, ಎಸ್, ಎಮ್, ಫ್ರೇಸರ್, ದಳವಾಯಿ ದೇವರಾಜ ಅರಸು-ಇವರು ಆ ಸಮಿತಿಯ ಸದಸ್ಯರು. ಆ ಸಮಿತಿಯ ಸಂದರ್ಭವನ್ನೆಲ್ಲ ಬುಡಮಟ್ಟ ವಿಚಾರಿಸಿ, ಆ ಆಪತ್ತಿಗೆ ಯಾರೊಬ್ಬರ ದುರುದ್ದೇಶವಾಗಲಿ ಕೃತ್ರಿಮವಾಗಲಿ ಕಾರಣವಲ್ಲವೆಂದೂ, ಅದು ಬಹುಶಃ ಕೆಳದರ್ಜೆಯ ನೌಕರನೊಬ್ಬನ ಮರವೆಯಿಂದ ಅರದೆ ನಿಂತುಹೋಗಿದ್ದ ಒಂದು ದೀಪದ ಕಿಡಿಯಿಂದ ಆಗಿರಬಹುದಾದ ಅನಾಹುತವೆಂದೂ ಹೇಗೋ ಕೇವಲ ಆಕಸ್ಮಿಕವೆಂದೂ ಸಿದ್ಧಾಂತ ಮಾಡಿದಂತೆ ನನ್ನ ಜ್ಞಾಪಕ.

ಪ್ಲೇಗ್ ಉಪದ್ರವ ಬಂದಾಗ-ಜನರು ಮನೆ ಬಿಡಬೇಕು, ಮದ್ದು ಚುಚ್ಚಿಸಿಕೊಳ್ಳಬೇಕು ಎಂದು ಸರಕಾರದ ಆಜ್ಞೆ ಹೊರಟಾಗಲೂ-ಅಲ್ಲಲ್ಲಿ ಜನ ತಕರಾರು ಹೂಡಿದರು. ಈ ನಾನಾ ತಕರಾರುಗಳನ್ನು ಈಗ ನೆನಸಿಕೊಳ್ಳುವುದರ ಉದ್ದೇಶ ಆ ಕಾಲದಲ್ಲಿ ಜನದ ಮನಸ್ಸೆಂಬುದು ಎಚ್ಚರಗೊಂಡು ಧೈರ್ಯ ತಾಳಿತ್ತೆಂಬುದನ್ನು ತೋರಿಸುವುದು. ಜನದ ಮನಸ್ಸು ಸಂಘಟಿತವಾಗದೆ ಇದ್ದರೂ ಸಂಘಟನೆಗೆ ಸಿದ್ಧವಾಗಿತ್ತು.

ವಿ.ಪಿ.ಮಾಧವರಾಯರ ಕಾಲದಲ್ಲಿ ಜನದ ಮನಸ್ಸನ್ನು ಕಲಕಿದ ಒಂದೆರಡು ಸಂದರ್ಭಗಳನ್ನು ಬೇರೆ ಕಡೆ ಪ್ರಸ್ತಾವಿಸಿದ್ದೇನೆ. ಅದೇ ತೆರದ ಇನ್ನೊಂದು ಸಂದರ್ಭ ಬೆಂಗಳೂರಿನ ಜನೋಪಕಾರಿ ದೊಡ್ಡಣ್ಣಶೆಟ್ಟರ ಸಭಾಮಂದಿರದ ಕಾಂಪೌಂಡ್ ಗೋಡೆಯನ್ನು ಸರಕಾರದವರು ಒಡೆಸಿದ್ದು. ಇದರ ಮೇಲೂ ತುಂಬ ಗಲಾಟೆ ಎದ್ದಿತು. ದೊಡ್ಡಣ್ಣಶೆಟ್ಟರ ಧರ್ಮಸಂಸ್ಥೆಗೆ ಡಿ.ವೆಂಕಟರಾಮಯ್ಯನವರು(ಟ್ರಸ್ಟಿ) ನ್ಯಾಸಪಾಲಕರಾಗಿಯೂ ಅಭಿಮಾನಿಗಳಾಗಿಯೂ ಇದ್ದದ್ದರಿಂದ ಸರಕಾರಕ್ಕೆ ಆ ಸಂಸ್ಥೆಯ ಮೇಲೆ ಆಗ್ರಹ ಬಂದಿತ್ತೆಂದು ಜನ ಆಡಿಕೊಳ್ಳುತ್ತಿದ್ದರು. ಒಟ್ಟಿನಮೇಲೆ ವಿ.ಪಿ.ಮಾಧವರಾಯರ ಕಾಲ ಅನವಶ್ಯವಾಗಿ ಗದ್ದಲದ ಕಾಲವಾಯಿತು. ಮಾಧವರಾಯರು ಕಾರ್ಯಸಮರ್ಥರೆಂಬುದನ್ನು ಯಾರೂ ಸಂದೇಹಿಸಲಾರರು. ಅವರು ಉದಾರಿಗಳೂ ಹೌದು. ಪ್ರಗತಿ ದೃಷ್ಟಿ ಇದ್ದವರೂ ಹೌದು. ಜನಸೇವೆಗೆ

ಅತ್ಯಂತಾವಶ್ಯಕವಾದ ಗುಣಗಳು ಅವರಲ್ಲಿ ಹೇರಳವಾಗಿದ್ದುವು. ಆದರೂ ಜನಾನುರಾಗವನ್ನು ಸಂಪಾದಿಸಿಕೊಳ್ಳುವ ಒಂದು ವಿನಯಾನುವರ್ತನೆ ಅವರಲ್ಲಿ ಸಾಲದೆ ಹೋಯಿತು.

ವಿಶ್ವೇಶ್ವರಯ್ಯನವರ ಕಾಲದಲ್ಲಿ ರಾಜಕೀಯಕ್ಕಾಗಿ ಸ್ವತಂತ್ರವಾದ ಪ್ರಜಾಸಂಸ್ಥೆ ಹುಟ್ಟಲು ಯಾವ ಅಡ್ಡಿಯೂ ಇರಲಿಲ್ಲ. ಅವರು ಅಂಥ ಸಂಸ್ಥೆಯನ್ನು ವಿರೋಧಿಸುತ್ತಿದ್ದವರಲ್ಲ; ಪ್ರೋತ್ಸಾಹಿಸುತ್ತಿದ್ದವರೇ. ಆದರೆ ಅಂಥ ಸಂಸ್ಥೆಯನ್ನು ಕಟ್ಟಬೇಕೆಂಬ ಆವಶ್ಯಕತೆ ಆ ಕಾಲದ ಜನದ ಮನಸ್ಸಿಗೆ ಬಲವತ್ತಾಗಿ ತೋರಲಿಲ್ಲ. ವಿಶ್ವೇಶ್ವರಯ್ಯನವರು ನಿರ್ಮಿಸಿದ್ದ 'ಎಕನಾಮಿಕ್ ಕಾನ್ಫರೆನ್ಸ್' ಎಂಬ ಸಂಪತ್ಸಮೃದ್ಧಿಸಭೆಯ ಸಮಿತಿಗಳೂ ಶಾಖಾಸಮಿತಿಗಳೂ ಉಪಸಮಿತಿಗಳೂ ಹತ್ತಾರಾಗಿ ಸಂಸ್ಥಾನದಲ್ಲೆಲ್ಲ ಹರಡಿಕೊಂಡಿದ್ದವು. ಯಾವುದೇ ಕಾರಣದಿಂದಾಗಲಿ ಅಷ್ಟೋ ಇಷ್ಟೋ ಗಣ್ಯನೆನಿಸಿದ್ದ ಪ್ರತಿಯೊಬ್ಬನೂ, ಎಷ್ಟೋ ಮಂದಿ ಗಣನೆಗೆ ಬಾರದವರೂ ಸಹ, ಆ ನಾನಾ ಸಮಿತಿ ಉಪಸಮಿತಿಗಳಲ್ಲಿ ಸದಸ್ಯರಾಗಿದ್ದರು. ಆ ಸದಸ್ಯರುಗಳಿಗೆ ಪ್ರಯಾಣದ ವೆಚ್ಚ. ದಿನ ಭತ್ಯ, ಫಲಾಹಾರ ಪ್ರತಿಷ್ಠೆಗಳು ಅವರು ಹಿಂದೆಂದೂ ಕಾಣದಷ್ಟು ಧಾರಾಳವಾಗಿ ದೊರಕುತ್ತಿದ್ದವು. ಹೀಗೆ ಲಾಭ ಪುರಸ್ಕಾರಗಳೆರಡನ್ನೂ ದೊರಕಿಸುವ ಸಂಸ್ಥೆಗಳು ಎಲ್ಲೆಲ್ಲೂ ತುಂಬಿರುವಲ್ಲಿ ಸ್ವಂತ ಲಾಗೋಡಿನಿಂದ ನಡೆಯಬೇಕಾದ ಪ್ರಜಾಸಂಸ್ಥೆಯನ್ನು ಸ್ಥಾಪಿಸಲು ಯಾರು ಉತ್ಸಾಹಪಡಬೇಕು?

೧೯೧೫ರಲ್ಲಿ ಗೋಪಾಲಕೃಷ್ಣ ಗೋಖಲೆಯವರು ಮೃತರಾದರು. ಇಂಡಿಯ ಆದ್ಯಂತವೂ ಗೋಳಾಡಿತು. ಶೋಕವನ್ನು ವ್ಯಕ್ತಪಡಿಸಲು ಬೆಂಗಳೂರಿನಲ್ಲಿಯೂ ಮಹಾಜನ ಸಭೆ ನಡೆಯಿತು. ಕರ್ಪೂರ ಶ್ರೀನಿವಾಸರಾಯರು ಅಧ್ಯಕ್ಷರಾಗಿದ್ದರು. ಆ ಸಭೆಯಲ್ಲಿ ದಿವಾನ್ ವಿಶ್ವೇಶ್ವರಯ್ಯನವರು ತಮ್ಮ ಪರಮಮಿತ್ರರಾಗಿದ್ದ ಗೋಖಲೆಯವರಿಗೆ ಒಂದು ಸೊಗಸಾದ ಭಾಷಣದಲ್ಲಿ ಬಾಷ್ಪಾಂಜಲಿಯನ್ನಿತ್ತರು. ಆ ಸಂದರ್ಭದಲ್ಲುದಿಸಿದ ಸ್ಫೂರ್ತಿಯಿಂದ ಕೆಲಮಂದಿ ಯುವಕರು ಗೋಖಲೆ ದೇಶಸೇವಾಸಂಘವೆಂಬ ಒಂದು ಸಂಸ್ಥೆಯನ್ನು ಹೂಡಲುದ್ಯುಕ್ತರಾದರು. ಅದರಂತೆ ಕೊಂಚ ಕೆಲಸವೂ ನಡೆಯಿತು. ಒಂದೆರಡು ಲಘು ಗ್ರಂಥ ಪ್ರಕಟನೆ, ಒಂದೆರಡು ಸಭೆ, ಒಂದೆರಡು ರಾತ್ರಿ-ಪಾಠಶಾಲೆಗಳು-ಈ ಬಗೆಯ ಕಾರ್ಯಗಳು ಒಂದಿಷ್ಟು ನಡೆದವು. ಈ ಸಂಸ್ಥೆಯ ಚಾಲಕರೂ ಹಿಂದಿನ ಸಂಸ್ಥೆಗಳವರೇ. ಆಗ ಈ ಬಗೆಯ ಸಂಬಳವಿಲ್ಲದ ಚಾಕರಿಗಾಗಿ ನಡುಕಟ್ಟಿ ನಿಂತಿದ್ದವರು ಊರಿನಲ್ಲಿ ಕೈಬೆರಳಿನಷ್ಟು ಮಂದಿ-ಶಾಮು, ಶೀನ, ವೆಂಕ, ಮಂಕ. ಸಂಸ್ಥೆಯ ಹೆಸರೇನಾದರೂ ಅದರ ಜೀವ ಈ ನಾಲ್ವರು ಆಸಾಮಿಗಳೇ. ಗೋಖಲೆಯವರ ನಾಮದ ಬಲದಿಂದ ಹೂಡಿದ ಒದ್ದಾಟವೂ ಒಂದೆರಡು ವರ್ಷಗಳೊಳಗಾಗಿ ಕೊನೆಗಂಡಿತು.

೧೯೧೬-೧೭ರ ಸುಮಾರಿನಲ್ಲಿ ಬೇರೆ ಒಂದು ರಾಜಕೀಯ ಸಮಾರಂಭ ಹುಟ್ಟಿಕೊಂಡಿತು. ಅದು 'ಪ್ರಜಾಮಿತ್ರ ಮಂಡಲಿ' ಎಂಬುದು. ಇದಕ್ಕೆ ಕೆಲವು ತಿಂಗಳುಗಳ ಹಿಂದೆ ಮದರಾಸಿನಲ್ಲಿ ಅದೇ ಪ್ರಕಾರದ ಧ್ಯೇಯಗಳಿಗಾಗಿ 'ಜಸ್ಟಿಸ್ ಪಾರ್ಟಿ' ಎಂಬ ಬ್ರಾಹ್ಮಣೇತರ ಜನಕಕ್ಷಿ ಹುಟ್ಟಿಕೊಂಡಿತ್ತು. ಮೈಸೂರಿನಲ್ಲಿ ಬ್ರಾಹ್ಮಣೇತರ ಚಳವಳಿಗೆ ಬೀಜಬಿತ್ತಿದವರು ದಿವಂಗತ ಬಸವಯ್ಯನವರು. ಅವರು ಮೈಸೂರು ಪಟ್ಟಣಿಗರಾಗಿ ಅಲ್ಲಿಯೇ ವಿದ್ಯಾಭ್ಯಾಸ ಮಾಡಿದವರಾಗಿ ಕೆಲವು ಕಾಲ ಬಳ್ಳಾರಿಯಲ್ಲಿ ವಕೀಲರಾಗಿದ್ದು ಆಮೇಲೆ ಬೆಂಗಳೂರಿಗೆ ಬಂದವರು. ಬಸವಯ್ಯನವರು, ನವಾಬ್ ಗುಲಾಂ ಅಹಮದ್ ಕಲಾಮಿ, ಎಂ. ಸುಬ್ಬಯ್ಯನವರು-ಇವರು ಆ ಮಂಡಲಿಯ ಪ್ರಮುಖ ನಾಯಕರು. ಜನಾಬ್ ಮಹಮದ್ ಅಬ್ಬಾಸ್ ಖಾನರವರೂ ಅವರ ಸಹೋದ್ಯಮಿಗಳಾಗಿದ್ದರು. ಇನ್ನು ಕೆಲಮಂದಿ ಪ್ರಸಿದ್ಧ ಸಹೋದ್ಯಮಿಗಳಿದ್ದರು. ಅವರಲ್ಲಿ ಕೆಲವರು ಸರಕಾರದ ಹುದ್ದೆಗಳಲ್ಲಿದ್ದರು. ಈಗ ನಾನು ಹೆಸರು ಹೇಳಿರುವ ನಾಲ್ಕು ಮಂದಿಯನ್ನು ನಾನು ಸ್ವತಃ ತಕ್ಕಮಟ್ಟಿಗೆ ಬಲ್ಲೆ. ಬಸವಯ್ಯನವರೂ ನಾನೂ ಮುನಿಸಿಪಲ್ ಕೌನ್ಸಿಲ್‌ನಲ್ಲಿ ಸಹಸದಸ್ಯರಾಗಿದ್ದೆವು. ಸುಬ್ಬಯ್ಯನವರೂ ನಾನೂ ಹಿಂದಿನಿಂದ ಸ್ನೇಹಿತರಾಗಿದ್ದೆವು. ಕಲಾಮಿಯವರೂ ಅಬ್ಬಾಸ್‌ಖಾನರೂ ಆ ವೇಳೆಗೂ ಅಲ್ಲಿಂದೀಚೆಗೂ ನನ್ನ ವಿಷಯದಲ್ಲಿ ವೈಯಕ್ತಿಕವಾಗಿ ವಿಶ್ವಾಸ ತೋರಿಸುತ್ತಿದ್ದರು. ಅವರಿಬ್ಬರೂ ಸೆಂಟ್ರಲ್ ಮಹಮದೀಯ ಸಂಘವನ್ನು ಸ್ಥಾಪಿಸುವುದರಲ್ಲಿ ನನ್ನ ಸಹಾಯವನ್ನು ಕೋರಿದ್ದರು. ಅವರ ಆ ಕಾರ್ಯವನ್ನು ನಾನು ನೋಡಿದ್ದೆ.

ಪ್ರಜಾಮಿತ್ರ ಮಂಡಲಿಯ ಅಥವಾ ಪ್ರಜಾಪಕ್ಷದ ಮುಖ್ಯ ತತ್ತ್ವವನ್ನು ನಾನು ಆಕ್ಷೇಪಿಸುವವನಲ್ಲ. ಆ ತತ್ತ್ವದಲ್ಲಿ ಗುಣಾಂಶವುಂಟೆಂಬುದನ್ನು ನಾನು ಮನಸಾ ಒಪ್ಪಿಕೊಂಡಿದ್ದೇನೆ. ಆ ತತ್ತ್ವವೇನೆಂದರೆ ಇದು:

ಒಂದು ಜನಾಂಗದ ಯಾವ ಒಂದು ಭಾಗವೂ, ಯಾವ ಒಂದು ಪಂಗಡವೂ, ತಾನು, 'ಇತರರಿಗಿಂತ ಹಿಂದುಳಿದುಕೊಂಡಿದ್ದೇನೆ' ಎಂದು ಕೊರತೆಪಟ್ಟುಕೊಳ್ಳುವಂತೆ ಇರಬಾರದು. ಯಾವ ಸಮಾಜದಲ್ಲಿಯಾದರೂ ಅದರ ಒಂದು ಭಾಗವು ತನಗೆ ಇತರರಿಂದ ನ್ಯಾಯ ತಪ್ಪಿತು ಎಂದುಕೊಳ್ಳುವಂತಾದರೆ ಆ ಕೊರತೆಯಿಂದ ಒಟ್ಟು ಸಮಾಜಕ್ಕೇ ಅಂದೋ ಮುಂದೆಂದೋ ಅಪಾಯವು ಸಿದ್ಧವಾಗಿರುತ್ತದೆ. ಒಂದು ಸರಪಣಿಯಲ್ಲಿ ಒಂದೇ ಒಂದು ಕೊಂಡಿ ಮಾತ್ರವೇ ಸವೆದುಹೋಗಿದ್ದರೂ ಆ ಒಂದು ಸಣ್ಣ ದೌರ್ಬಲ್ಯದಿಂದ ಆ ಸರಪಣಿಯೆಲ್ಲವೂ ಅಪಾಯಕ್ಕೊಳಗಾಗುತ್ತದೆ. ಒಂದು ಜನಾಂಗದ ನಾನಾ ಭಾಗಗಳ ಬಲಾಬಲಗಳೂ ತೃಪ್ತಿ ಅತೃಪ್ತಿಗಳೂ ಅದರಂತೆಯೇ. ಯಾವ ಪಂಗಡದಲ್ಲಿಯೇ ಆಗಲಿ ಅಸಂತೃಪ್ತಿ ತಲೆದೋರಿದ್ದರೆ-ಅದರ ಕಾರಣವೇನೇ ಇರಲಿ, ಅದು ಸರಿಯಾದದ್ದಾಗಲಿ ತಪ್ಪು

ತಿಳಿವಳಿಕೆಯದಾಗಲಿ-ಅದನ್ನು ಆಮೂಲಾಗ್ರವಾಗಿ ವಿಚಾರಮಾಡಿ, ಅಲ್ಲಿ ಸಮಾಧಾನವನ್ನು ನೆಲೆಗೊಳಿಸಲು ತಕ್ಕ ವ್ಯವಸ್ಥೆ ನಡಸುವುದು ಸಮಾಜ ಹಿತೈಷಿಗಳಿಗೆ ಕರ್ತವ್ಯವಾಗುತ್ತದೆ. ಇದು ಸಾಧುವಾದ ತತ್ತ್ವವೆಂದು ನನ್ನ ಅಭಿಪ್ರಾಯ.

ಆದರೆ ರಾಜಕೀಯದ ಕಾರ್ಯಸೂತ್ರದಲ್ಲಿರಬೇಕಾದದ್ದು ಒಂದೇ ಒಂದು ನೂಲಲ್ಲ. ಅದು ಯಾವಾಗಲೂ ಅನೇಕ ತತ್ತ್ವಗಳ ಹೆಣಿಗೆಯಿಂದಾದ ಒಂದು ಜಡೆ. ಹಿಂದುಳಿದವರನ್ನು ಮುಂದಕ್ಕೆ ತರಬೇಕೆಂಬ ತತ್ತ್ವದ ಜೊತೆಗೆ ಸೇರಬೇಕಾದ ತತ್ತ್ವಗಳು ಇನ್ನೂ ನಾಲ್ಕಾರು ಇರುತ್ತವೆ. ಹಿಂದುಳಿದವರನ್ನು ಮುಂದಕ್ಕೆ ತರುವ ಪ್ರಯತ್ನದಲ್ಲಿ ಮುಂದೆ ಹೋಗಿರುವವರನ್ನು ಹಿಂದಕ್ಕೆ ಸೆಳೆಯಬಾರದೆಂಬುದು ಅಷ್ಟೇ ಮುಖ್ಯವಾದ ಇನ್ನೊಂದು ತತ್ತ್ವ. ಹಿಂದುಳಿದವರೂ ಮುಂದೆ ಹೋದವರೂ ನಡುವೆ ನಿಂತವರೂ ಎಲ್ಲರೂ ಸೇರಿರುವ ಮಹಾಸಮಾಜಕ್ಕೆ ಆಗಬೇಕಾಗಿರುವ ಸೇವೆ ಎಷ್ಟು ಗುಣಾಧಿಕ್ಯವುಳ್ಳದ್ದಾಗಿರುವುದು ಸಾಧ್ಯವೋ ಅದಕ್ಕಿಂತ ಗುಣದಲ್ಲಿ ಕಡಮೆಯಾಗದೆ ದೇಶ ಸಮಷ್ಟಿಗೆ ಸೇವೆ ದೊರೆಯುವಂತೆ ಮಾಡಬೇಕೆಂಬುದು ಎಲ್ಲಕ್ಕಿಂತ ಮೇಲಾದ ತತ್ತ್ವ. ಈ ಮೂರೂ ತತ್ತ್ವಗಳನ್ನೂ ಸಮನ್ವಯ ಮಾಡಿದರೆ ಉಂಟಾಗುವುದು ನ್ಯಾಯವಾದ ಕಾರ್ಯಸೂತ್ರ. ಈ ಇತರ ತತ್ತ್ವಗಳ ಕಡೆಗೆ ಪ್ರಜಾಮಿತ್ರ ಮಂಡಲಿ ಗಮನ ತಿರುಗಿಸಲಿಲ್ಲ. ಅದಕ್ಕೆ ಸಮಗ್ರ ಸಮಾಜದ ದೃಷ್ಟಿ ಇರಲಿಲ್ಲ. ಇದನ್ನು ನನ್ನ ಸ್ನೇಹಿತರು ಮರೆತರೆಂಬುದೇ ನನಗೂ ಅವರಿಗೂ ಇದ್ದ ತಕರಾರು. ಅವರ ಸಮಾರಂಭವನ್ನು ಕುರಿತು ಇನ್ನು ಹೆಚ್ಚಾಗಿ ನಾನು ಹೇಳಲಾರೆ. ಅದನ್ನು ಕುರಿತು ಮಾತನಾಡುವ ಅಧಿಕಾರ ನನಗೆ ಇಲ್ಲ. ಪ್ರಜಾಮಿತ್ರ ಮಂಡಲಿಯ ಮತ್ತು ಅದರ ಸಂತತಿಯ ಚರಿತ್ರೆಯನ್ನು ಬರೆಯಬಲ್ಲವರು ಅನೇಕರಿದ್ದಾರೆ. ನಾನು ಅದಕ್ಕೆ ಕೈಹಚ್ಚತಕ್ಕದ್ದು ಯುಕ್ತವಲ್ಲ.

ಪ್ರಜಾಮಿತ್ರ ಮಂಡಲಿಯು ಸ್ವಲ್ಪ ಕಾಲ ಕೆಲಸಮಾಡಿ ತನ್ನ ಸ್ವರೂಪವೆಂಥಾದ್ದೆಂಬುದನ್ನು ಪ್ರಕಟಪಡಿಸಿಕೊಂಡ ಬಳಿಕ, ಅದರಿಂದ ಜನಸಾಮಾನ್ಯದ ಮನಸ್ಸಿನ ಮೇಲೆ ಆದ ಪ್ರತಿಪ್ರಭಾವವನ್ನು ರೂಪಿಸಲು ಬೇರೊಂದು ಸಂಸ್ಥೆ ಅವಶ್ಯವೆಂದು ಕೆಲಮಂದಿಗೆ ಅನ್ನಿಸಿತು. ಅದರಂತೆ ಸುಮಾರು ೧೯೧೮-೧೯ರಲ್ಲಿ ಬೆಂಗಳೂರಿನಲ್ಲಿ ಹುಟ್ಟಿದ್ದು ಮೈಸೂರು ಮಹಾಜನಸಭೆ, ಅದು ಪ್ರಾರಂಭವಾದದ್ದು ಸುಲ್ತಾನ್ ಪೇಟೆಯಲ್ಲಿ: ಬಿ.ರುದ್ರಪ್ಪ ಎಂಬವರ ಮನೆಯಾಗಿದ್ದು, ಎಸ್.ಆರ್.ನಂಜುಂಡಯ್ಯನವರ ಸ್ಕೂಲು ನಡೆಯುತ್ತಿದ್ದ ಕಟ್ಟಡದ ಮಹಡಿಯಲ್ಲಿ. ಆ ಹೊತ್ತು ಸಭಾಕಾರ್ಯಗಳಲ್ಲಿ ಭಾಗವಹಿಸಿದವರ ಪೈಕಿ ಅಡ್ವೊಕೇಟ್ ಸಿ. ಕೃಷ್ಣಮೂರ್ತಿಗಳೂ ಎಂ.ಎಸ್. ಪುಟ್ಟಣ್ಣನವರೂ ಮುಖ್ಯರಾಗಿದ್ದರು. ಈ ಸಭೆಯ ಕಾರ್ಯಸ್ಥಾನಕ್ಕಾಗಿ ಚಿಕ್ಕಪೇಟೆಯಲ್ಲಿ ಒಂದು ಕಟ್ಟಡವನ್ನು ಬಾಡಿಗೆಗೆ ತೆಗೆದುಕೊಂಡೆವು. ಆ ಕಟ್ಟಡವು ಆಗ

ಸೆಂಟ್ರಲ್ ಮಹಮಡನ್ ಅಸೋಸಿಯೇಷನ್ನಿನ ಸ್ವತ್ತಾಗಿತ್ತು. ಅದು ಚಿಕ್ಕಪೇಟೆಯಲ್ಲಿ ಆರ್ಕಾಟ್ ಶ್ರೀನಿವಾಸಾಚಾರ್ಲು ರಸ್ತೆಯ ಮೂಲೆಯಿಂದ ಪೂರ್ವಕ್ಕೆ ಹೋಗುತ್ತ ಎಡಗಡೆ ನಾಲ್ಕನೆಯ ಅಥವಾ ಐದನೆಯ ಮಹಡಿಯ ಕಟ್ಟಡ (ಈಶ್ವರನ ಗುಡಿಯ ಹತ್ತಿರ). ಈ ಸಭೆ ಎರಡು ಮೂರು ವರ್ಷ ನಡೆಯಿತು. ಅಲ್ಲಿ ಸಾಮಾನ್ಯವಾಗಿ ಭಾನುವಾರ ಭಾನುವಾರವೂ ಸಭೆ ಸೇರುತ್ತಿತ್ತು. ಜನರಲ್ ಪೋಸ್ಟಾಫೀಸಿನ ಮುಖ್ಯಾಧಿಕಾರಿ ಪದವಿಯಿಂದ ಆಗತಾನೇ ನಿವೃತ್ತರಾಗಿದ್ದ ರಾವ್ ಬಹದ್ದೂರ್ ಕೆ. ಶ್ರೀನಿವಾಸರಂಗಾಚಾರ್ಯರು ಕೆಲವು ಕಾಲ ಅದರ ಅಧ್ಯಕ್ಷರಾಗಿದ್ದರು. ಪ್ರಮುಖ ಸದಸ್ಯರಲ್ಲಿ ಅಡ್ವೊಕೇಟ್ ಎ.ಆರ್. ನಾಗೇಶ್ವರಯ್ಯರ್‌ರವರೂ ಸಿ.ಕೃಷ್ಣಮೂರ್ತಿಗಳೂ ಇದ್ದರು. ಅನೇಕ ಸಾರ್ವಜನಿಕ ವಿಷಯಗಳನ್ನು ಕುರಿತು ಆಗಾಗ ನಿರ್ಣಯಗಳನ್ನು ಮಾಡಿ ಸರಕಾರಕ್ಕೆ ಕಳುಹಿಸಿದೆವು. ಈ ಕೆಲಸದಲ್ಲಿ ಉತ್ಸಾಹಿಗಳಾಗಿದ್ದವರ ಸಂಖ್ಯೆ ಹೆಚ್ಚಿನದೇನೂ ಅಲ್ಲ. ಈ ಕೆಲಸಕ್ಕೆ ಮಹಾಜನರಿಂದಲಾಗಲಿ ಸರಕಾರದಿಂದಾಗಲಿ ದೊರೆಯುತ್ತಿದ್ದ ಪ್ರೋತ್ಸಾಹ ಕೇಳಿಕೊಳ್ಳಲರ್ಹವಾದದ್ದಲ್ಲ.

ಮೈಸೂರು ಮಹಾಜನಸಭೆ ಭಾನುವಾರ ಸೇರಬೇಕೆಂಬುದು ಉದ್ದೇಶ. ಆದರೆ ಎಷ್ಟು ಹೊತ್ತಿಗೆ? ಮಧ್ಯಾಹ್ನ ನಾಲ್ಕೂವರೆ ಎಂದರೆ ರಾಹುಕಾಲ ಬಂದು ಬಿಡುತ್ತದೆಂದು ಶ್ರೀನಿವಾಸರಂಗಾಚಾರ್ಯರ ಅಡಚಣೆ. ನಾಲ್ಕು ಘಂಟೆಗೆ ಸೇರೋಣವೆಂದರೆ ಅದು ತುಂಬ ಬೇಗ. ಲಾಯರುಗಳಿಗೆ ಭಾನುವಾರ ಕೂಡ ಕೊಂಚವೂ ಪುರಸತ್ತಿಲ್ಲದೆ ಹೋಗುತ್ತದೆ.

ಹೀಗೆ ಬಹು ಚರ್ಚೆ ನಡೆದು ಒಂದು ತೀರ್ಮಾನಕ್ಕೆ ಬಂದೆವು: ನಾಲ್ಕು ಘಂಟೆಗೆ ಉಪಾಹಾರವನ್ನು ಪ್ರಾರಂಭಿಸುವುದು! ಎಂದರೆ ನಾಲ್ಕೂವರೆಗೆ ಮುಂಚೆಯೇ ಸಭೆ ಪ್ರಾರಂಭವಾದಂತಾಯಿತಷ್ಟೆ? ಸಾಮಗ್ರಿಗಳ ಸೇವನೆ ಮುಗಿದು ಭಾಷಣ ಪ್ರಾರಂಭವಾಗುವ ವೇಳೆಗೆ ನಾಲ್ಕೂವರೆ ಘಂಟೆ. ಸಭೆ ಮೊದಲೇ ಪ್ರಾರಂಭವಾಗಿದ್ದದ್ದರಿಂದ ರಾಹುಕಾಲದ ಬಾಧಕವಿಲ್ಲ.

ಆದರೆ ತಿಂಡಿಯ ಹೊತ್ತಿಗಿದ್ದ ಜನ ಸಭೆಯ ಹೊತ್ತಿಗೆ ಇರುತ್ತಿರಲಿಲ್ಲ. ಏನೋ ನೆವ ಹೇಳಿ ಹೊರಟುಹೋಗುತ್ತಿದ್ದರು.

ಆ ಸಂಸ್ಥೆಯನ್ನು ವಿಸರ್ಜಿಸಿದಂತೆ ಮಾಡಿ, ಆ ಕಟ್ಟಡವನ್ನು ಖಾಲಿಮಾಡಿದ ಮೇಲೆ ಅದೇ ಜಾಗದಲ್ಲಿ ಮೈಸೂರು ವರ್ತಕ ಸಂಘ ಎಂಬ ಸಂಸ್ಥೆ ಸ್ಥಾಪಿತವಾಯಿತು. ಅ ಸಂಘದ ಮಹಾವತಾರವೇ ಇಂದಿನ 'ಚೇಂಬರ್ ಆಫ್ ಕಾಮರ್ಸ್.'

ಮಹಾಜನಸಭೆಯ ಮೂಲಕವಾಗಿ ನಡೆದ ಬಹು ದೊಡ್ಡ ಕಾರ್ಯವೆಂದರೆ ೧೯೧೯ನೆಯ ಡಿಸೆಂಬರಿನಲ್ಲಿ ಬೆಂಗಳೂರಿನಲ್ಲಿ ಸೇರಿದ 'ಮೈಸೂರು ಪೀಪಲ್ಸ್ ಕನ್‌ವೆನ್‌ಷನ್', ಮೈಸೂರು ಪ್ರಜಾಜನ ಪರಿಷತ್ತು ಎಂಬ ರಾಜಕೀಯ ಮಹಾಸಭೆ. ಅದಕ್ಕೆ ಸಂಸ್ಥಾನದ ಎಲ್ಲ ಭಾಗಗಳ ಪ್ರತಿನಿಧಿ ಪ್ರಮುಖರುಗಳೂ-ಸುಮಾರು ೩೦೦ ಮಂದಿ-ಬಂದಿದ್ದರು. ಸಮಗ್ರ ಜನತಾ ದೃಷ್ಟಿಯುಳ್ಳ ಸಾರ್ವಜನಿಕ ಪುರುಷರು ಸಂಸ್ಥಾನದಲ್ಲಿ ಯಾರುಯಾರು ಇದ್ದರೋ ಅವರೆಲ್ಲ ಬಂದಿದ್ದರು. ಮೈಸೂರಿನ ವೆಂಕಟಕೃಷ್ಣಯ್ಯನವರು, ಸಿ.ನರಸಿಂಹಯ್ಯನವರು, ಬಿ. ನರಸಿಂಗರಾಯರು, ಚಿಕ್ಕಮಗಳೂರಿನ ಸಿ.ಶ್ರೀನಿವಾಸರಾಯರು, ವಾಸುದೇವರಾಯರು, ಶಿವಮೊಗ್ಗೆಯ ಸಿ.ಸುಬ್ಬರಾಯರು, ಎಸ್.ಆರ್.ಬಾಲಕೃಷ್ಣರಾಯರು, ಕೆ.ಶಂಕರನಾರಾಯಣರಾಯರು, ಕೋಲಾರದ ಸಿ.ಬಿ.ಗೋಪಾಲರಾಯರು, ಎಂ.ಎಸ್.ರಾಮಾಚಾರ್ಯರು, ಟಿ.ಶ್ರೀನಿವಾಸಾಚಾರ್ಯರು, ಹಾಸನದ ವೆಂಕಟೇಶಯ್ಯನವರು, ನಂಜುಂಡಯ್ಯನವರು, ಬೆಂಗಳೂರಿನ ಎ.ಆರ್. ನಾಗೇಶ್ವರಯ್ಯರವರು, ಎಂ.ಪಿ. ಸೋಮಶೇಖರರಾಯರು-ಇಂಥವರು ಸಭಾಕಾರ್ಯಗಳಲ್ಲಿ ಮುಖ್ಯ ಭಾಗವಹಿಸಿದ್ದರು. ರಾವ್ ಬಹದ್ದೂರ್ ಕೆ.ಶ್ರೀನಿವಾಸರಂಗಾಚಾರ್ಯರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿದ್ದರು. ಸಭೆಗೆ ಗೊತ್ತಾಗಿದ್ದ ದಿವಸಕ್ಕೆ ಒಂದೆರಡು ದಿನ ಹಿಂದೆ ಮಾಂಟೆಗು ಚೆಲ್ಮ್‌ಸ್‌ಫರ್ಡ್ ಸುಧಾರಣೆಗಳ ವರದಿ ಪ್ರಕಟವಾಗಿತ್ತು. ಆ ವರದಿಯನ್ನು ಶ್ರೀನಿವಾಸರಂಗಾಚಾರ್ಯರು ತಮ್ಮ ಭಾಷಣದಲ್ಲಿ ಆಮೂಲಾಗ್ರವಾಗಿ ವಿಮರ್ಶನ ಮಾಡಿದ್ದರು. ಸಭಾಧ್ಯಕ್ಷರಾಗಿದ್ದ ರಿಟೈರ್ಡ್ ಡೆಪ್ಯುಟಿ ಕಮಿಷನರ್ ಎಂ. ಚೆಂಗಯ್ಯಶೆಟ್ಟರು ಜನಾಭಿಪ್ರಾಯವನ್ನು ಸಂಗ್ರಹವಾಗಿ ಪ್ರತಿಬಿಂಬಿಸಿ ಭಾಷಣ ಮಾಡಿದರು. ಸಭೆ ಮೂರು ದಿವಸ ನಡೆಯಿತು. ಸರಕಾರದ ಮಂತ್ರಿಮಂಡಲಕ್ಕೆ ಪ್ರಜಾಪ್ರತಿನಿಧಿಗಳನ್ನು ಸೇರಿಸಿಕೊಳ್ಳಬೇಕು; ಪ್ರಜಾಜನದ ರಾಜಕೀಯ ಸ್ವಾತಂತ್ರ್ಯ ಪೌರ ಸ್ವಾತಂತ್ರ್ಯಗಳನ್ನು ವಿಸ್ತಾರಪಡಿಸಬೇಕು; ಇಂಡಿಯದ ಸರಕಾರದಲ್ಲಿ ಮೈಸೂರಿಗೆ ನ್ಯಾಯವಾಗಿ ಸಲ್ಲಬೇಕಾದ ಅಧಿಕಾರ ಪ್ರಭಾವಗಳನ್ನು ದೊರಕಿಸುವಂತೆ ಭಾರತ ರಾಜ್ಯವ್ಯವಸ್ಥೆಯನ್ನು ಪರಿಷ್ಕಾರಗೊಳಿಸಬೇಕು-ಇವೇ ಮೊದಲಾದ ನಾಲ್ಕಾರು ನಿರ್ಣಯಗಳನ್ನು ಆ ಮಹಾಸಭೆ ಅಂಗೀಕರಿಸಿತ್ತು; ಮತ್ತು ತನ್ನ ಉದ್ದೇಶವನ್ನೂ ತಾನು ಅಂದು ಪ್ರಾರಂಭಿಸಿದ. ಕಾರ್ಯಕ್ರಮವನ್ನೂ ಕೈಗೊಳ್ಳಲಿಕ್ಕಾಗಿ ಒಂದು ಸಮಿತಿಯನ್ನು ನಿಯಮಿಸಿತು. ಮೈಸೂರು ದೇಶದಲ್ಲಿ ಪ್ರಜಾಸಮಷ್ಟಿಯ ರಾಜಕೀಯ ಮನೋಗತಕ್ಕೆ ಒಂದು ಸಂಘಟಿತ ರೂಪವನ್ನು ಕೊಡಲು ನಡೆದ ಸಮಾರಂಭಗಳಲ್ಲಿ ಈ ಪೀಪಲ್ಸ್ ಕನ್‌ವೆನ್‌ಷನ್ ಎಂಬುದೇ ಮೊಟ್ಟಮೊದಲನೆಯದು. ಅದಕ್ಕೆ ಹಿಂದೆ ಆ ಪ್ರಕಾರದ ಸಮಾರಂಭ ಅಷ್ಟು ದೊಡ್ಡ ಆಕಾರದಲ್ಲಿ ಯಾವುದೂ ಆಗಿರಲಿಲ್ಲ. ಆ ಕನ್‌ವೆನ್‌ಷನ್ ಸಭೆ ತುಂಬ ಯಶಸ್ವಿಯಾಗಿ ನಡೆಯಿತು.

೧೯೨೦ ರಿಂದ ೧೯೨೮ರ ವರೆಗಿನ ಎಂಟು ವರ್ಷಗಳಲ್ಲಿ ನಡೆದ ಮಹಾಜನ ಸಮಾರಂಭಗಳಲ್ಲಿ ಮುಖ್ಯವಾದವು ಎರಡು: (೧) ಪ್ರಜಾಮಿತ್ರಮಂಡಲಿಯ ಅಥವಾ ಬ್ರಾಹ್ಮಣೇತರ ಜನವರ್ಗದ ಪರವಾಗಿ ನಡೆದ, ಚಳವಳಿ; ಮಿಲ್ಲರ್ ಕಮಿಟಿಯ ವರದಿ ಮೊದಲಾದವು ಇದಕ್ಕೆ ಸೇರಿದವು. (೨) ಪ್ರಗತಿಕಾರರ ಪಕ್ಷ.

ಮೊದಲನೆಯದನ್ನು ಕುರಿತು ನಾನು ಹೇಳಬಹುದಾದದ್ದನ್ನು ಹೇಳಿದ್ದಾಗಿದೆ. ಎರಡನೆಯದು ವಿಶೇಷವಾಗಿ ಹೊಸಕೊಪ್ಪ ಕೃಷ್ಣರಾಯರವರ ಪ್ರಯತ್ನದಿಂದ ಆದದ್ದು. ಮೈಸೂರಿನ ಸಾರ್ವಜನಿಕ ಜೀವನದ ಚರಿತ್ರೆಯಲ್ಲಿ ದಿವಂಗತ ಹೊಸಕೊಪ್ಪ ಕೃಷ್ಣರಾಯರವರೂ ಜ್ಞಾಪಕಕ್ಕೆ ಬರಬೇಕಾದವರು.

ಹೊಸಕೊಪ್ಪ ಕೃಷ್ಣರಾಯರು ಸಾರ್ವಜನಿಕಕ್ಕೆ ಪ್ರವೇಶಮಾಡಿದ್ದು ಬಹುಶಃ ೧೯೧೩-೧೪ರಲ್ಲಿ. ಆಗ ವಿಶ್ವೇಶ್ವರಯ್ಯನವರ ದಿವಾನಗಿರಿಯ ಆರಂಭ. ಕೃಷ್ಣರಾಯರು ಆಗ ಪ್ರಜಾಪ್ರತಿನಿಧಿ ಸಭೆಗೆ ಸದಸ್ಯರಾಗಿ ಬಂದಿದ್ದ ತರುಣರು. ರೂಪವೇಶಗಳಲ್ಲಿ ಆಕರ್ಷಕರಾಗಿದ್ದರು. ತೆಳ್ಳಗೆ ಎತ್ತರವಾಗಿದ್ದ ಆಳು; ಪ್ರಕಾಶವುಳ್ಳ ಕಣ್ಣುಗಳು; ನಗುಮುಖ. ಆಗಿನ ಫ್ಯಾಷನ್ ಪ್ರಕಾರ ಉಡುಪು ಧರಿಸಿದ್ದರು. ಅದು ಸೊಗಸಾದ ಉಣ್ಣೆಯ ಸೂಟು, ಮೈಗೊಪ್ಪುವಂತೆ ಹೊಲೆದದ್ದು; ನೆಕ್‌ಟೈ, ಜರಿಮಾವಿನಕಾಯಿ ತುಂಬಿದ ಪೊರೆಯಂಥ ಬಿಳಿಯ ಪೇಟ, ಜೇಬಿನಿಂದ ಮೇಲಕ್ಕೆದ್ದು ಕಾಣುವ ರೇಷ್ಮೆಯ ಕರವಸ್ತ್ರ, ವೆಸ್ಟ್ ಕೋಟಿನ ಜೇಬಿನಲ್ಲಿ ಗಡಿಯಾರ, ಅದರಿಂದ ಇನ್ನೊಂದು ಜೇಬಿಗೆ ಸೇರಿದ ಚಿನ್ನದ ಸರಪಣಿ, ಕೈಯಲ್ಲಿ ಉಂಗುರ-ಇವೆಲ್ಲ ಆ ರೂಪಕ್ಕೆ ಒಂದು ವೈಶಿಷ್ಟ್ಯವನ್ನುಂಟುಮಾಡಿತ್ತು. ಹೊಸಕೊಪ್ಪ ಕೃಷ್ಣರಾಯರು ಜಮೀನ್ದಾರರು; ಕಾಫಿ ಪ್ಲಾಂಟರು. ಆ ಕಾಲಕ್ಕೆ ತಕ್ಕಮಟ್ಟಿಗೆ ಅನುಕೂಲಸ್ಥರು ಮತ್ತು ಅನುಕೂಲಸ್ಥವಾದ ಬಂಧುವರ್ಗವಿದ್ದವರು. ಆ ಕಾಲದಲ್ಲಿ ಸಭಾಪ್ರಾರಂಭದ ದಿವಸ ದಿವಾನರ ಭಾಷಣವಾದ ಮೇಲೆ ಸದಸ್ಯರಲ್ಲಿ ಕೆಲವರು ಅಪ್ಪಣೆ ಪಡೆದು ಬಿನ್ನವತ್ತಳೆಗಳನ್ನು ಒಪ್ಪಿಸುವುದು ವಾಡಿಕೆಯಾಗಿತ್ತು. ಅದರ ಮೇರೆಗೆ ಹೊಸಕೊಪ್ಪ ಕೃಷ್ಣರಾಯರು ಒಂದು ಬಿನ್ನವತ್ತಳೆಯನ್ನು ವಿಶ್ವೇಶ್ವರಯ್ಯನವರಿಗೆ ಓದಿ ಅರ್ಪಿಸಿದರು. ಆ ಬಿನ್ನವತ್ತಳೆ 'ಲೇಡೀಸ್ ವಿಸಿಟಿಂಗ್ ಕಾರ್ಡ್' ಎಂದು ಹೇಳುವ ಇಸ್ಪೀಟ್ ಚೀಟಿಯ ಅಗಲದ ಕಾರ್ಡುಗಳ ಮೇಲೆ ಅಚ್ಚಾಗಿ ಪುಸ್ತಕದಂತೆ ಬೈಂಡ್ ಆಗಿತ್ತು. ಅದು ಅಂದವಾಗಿ ನಿಜವಾಗಿಯೂ ಅಪೂರ್ವ ವಸ್ತುವಾಗಿದ್ದದ್ದರಿಂದ ಎಲ್ಲರ ದೃಷ್ಟಿಗೂ ಪಾತ್ರವಾಯಿತು. ಮಾರನೆಯ ದಿವಸವೂ ವಿಶ್ವೇಶ್ವರಯ್ಯನವರು ಕೃಷ್ಣರಾಯರವರನ್ನು ತಮ್ಮಲ್ಲಿಗೆ ಕರೆಸಿಕೊಂಡು ಮಾತನಾಡಿದರಂತೆ. ಆಕಾರದಲ್ಲಿ ಠಾಕ್‌ಠೀಕ್ ಆಗಿದ್ದು ತನ್ನ ಕರ್ತವ್ಯವನ್ನು ಅಷ್ಟು ಮುತುವರ್ಜಿಯಿಂದ ನಡಸಿದ ಯುವಕನನ್ನು ಕಂಡದ್ದರಿಂದ ವಿಶ್ವೇಶ್ವರಯ್ಯನವರಿಗೆ ತುಂಬಾ ಸಂತೋಷವಾಗಿರಬೇಕೆಂಬುದನ್ನು ಅವರನ್ನು ಬಲ್ಲವರೆಲ್ಲ ತಾವೇ ಊಹಿಸಿಕೊಂಡಾರು. ಆ ಭೇಟಿಯ

ಸಂದರ್ಭದಲ್ಲಿ ಹೊಸಕೊಪ್ಪ ಕೃಷ್ಣರಾಯರು ಇಂಗ್ಲೀಷ್ ಬಲ್ಲವರಲ್ಲವೆಂಬುದು ವಿಶ್ವೇಶ್ವರಯ್ಯನವರಿಗೆ ತಿಳಿದುಬಂತು, ಇಂಗ್ಲೀಷ್ ಕಲಿಯದಿದ್ದವರು ಉಡುಪಿನಲ್ಲಿಯೂ ನಡತೆಯಲ್ಲಿಯೂ ಅಷ್ಟು ಫ್ಯಾಷನ್ ದಾರರಾಗಿದ್ದದ್ದು ವಿಶ್ವೇಶ್ವರಯ್ಯನವರಿಗೆ ಆಶ್ಚರ್ಯವನ್ನುಂಟುಮಾಡಿತು. ಕೃಷ್ಣರಾಯರು ಚಾಲಾಕಾಗಿದ್ದವರೂ ಹೌದು. ಆಗ ವಿಶ್ವೇಶ್ವರಯ್ಯನವರು ಕೃಷ್ಣರಾಯರಿಗೆ ಅವರು ಇಂಗ್ಲೀಷ್ ಕಲಿತು ಕೊಳ್ಳಬೇಕೆಂದೂ ಸಾರ್ವಜನಿಕರಲ್ಲಿ ಹೆಚ್ಚು ವ್ಯಾಸಂಗ ಮಾಡಬೇಕೆಂದೂ ಕ್ರಮೇಣ ದೇಶ ನಾಯಕತ್ವಕ್ಕೆ ಅರ್ಹರಾಗಬೇಕೆಂದೂ ಹಿತಬೋಧನೆ ಮಾಡಿದರಂತೆ. ಆ ಉಪದೇಶವು ಕೃಷ್ಣರಾಯರ ಮನಸ್ಸಿನಲ್ಲಿ ನಾಟಿತು. ಅಲ್ಲಿಂದ ಮುಂದಕ್ಕೆ ಕೃಷ್ಣರಾಯರ ಸಾರ್ವಜನಿಕ ವಿಚಾರದ ಅಭಿವೃದ್ಧಿ ತೀವ್ರವಾಗಿ ನಡೆಯಿತು.

ನಾಲ್ಕೈದು ವರ್ಷಗಳೊಳಗಾಗಿ ಅವರ ಇಂಗ್ಲೀಷ್ ಭಾಷಾ ಜ್ಞಾನ ತಕ್ಕಮಟ್ಟಿನದಾಯಿತು. ಕನ್ನಡದಲ್ಲಿ ಅವರ ವಾಗ್ಧೋರಣೆ ಪರಿಣಾಮಕಾರಿಯಾಗುವಷ್ಟಾಯಿತು. ರಾಜಕೀಯ ವ್ಯವಹಾರ ಜ್ಞಾನವೂ ಬೆಳೆದುಕೊಂಡುಬಂತು. ಅವರು 'ಪ್ರೋಗ್ರೆಸಿವ್ ಪಾರ್ಟಿ' ಅಥವಾ ಪ್ರಗತಿಶೀಲ ಪಕ್ಷ ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದರು. ಅದು ವಿಶೇಷವಾಗಿ ಪ್ರಜಾಪ್ರತಿನಿಧಿ ಸಭೆಯ ಸದಸ್ಯರನ್ನೊಳಗೊಂಡ ಸಂಸ್ಥೆ. ಆ ಸಂಸ್ಥೆಯ ಹೆಸರಿನಲ್ಲಿ ಕೃಷ್ಣರಾಯರು ಬಹುವಿಧವಾಗಿ ಪ್ರಚಾರಕಾರ್ಯ ನಡಸಿದರು. ಆಗಿಂದಾಗ್ಗೆ ಹುಟ್ಟಿಕೊಂಡ ಸಾರ್ವಜನಿಕ ಪ್ರಶ್ನೆಗಳನ್ನು ಕುರಿತು ಅವರು ಇಂಗ್ಲಿಷಿನಲ್ಲಿಯೂ ಕನ್ನಡದಲ್ಲಿಯೂ ಟೀಕೆಗಳನ್ನು ಬರೆದು ಪತ್ರಿಕೆಗಳಲ್ಲಿ ಪ್ರಕಟಮಾಡಿಸುತ್ತಿದ್ದರು. ಇಂಡಿಯ ದೇಶಕ್ಕೆ ಎಂಥ ರಾಜ್ಯವ್ಯವಸ್ಥೆ ಇರಬೇಕೆಂಬುದನ್ನು ಕುರಿತು ಅವರು ಒಂದು ದೊಡ್ಡ ಗ್ರಂಥವನ್ನು ಬರೆದು ಪ್ರಕಟಿಸಿದರು. ಅದರಲ್ಲಿ ಇಂಡಿಯದ ರಾಷ್ಟ್ರಧ್ವಜ ಹೇಗಿರಬೇಕೆಂಬುದರ ನಮೂನೆಗಳನ್ನು ಕೂಡ ಕೊಟ್ಟಿದ್ದಂತೆ ನನ್ನ ಜ್ಞಾಪಕ.

ಅವರ ಲೇಖನಕಾರ್ಯಕ್ಕಾಗಿ ಅವರು ಕೆಲವು ಮಂದಿ ಸಹಾಯಕರನ್ನು ಗೊತ್ತುಮಾಡಿಕೊಂಡಿದ್ದರು. ಅವರಲ್ಲಿ ಮುಖ್ಯರಾದವರು ಪ್ರಸಿದ್ಧ ಪತ್ರಿಕೋದ್ಯೋಗಿಗಳಾಗಿದ್ದ ವಿ.ಎಸ್. ಸಂಜೀವರಾಯರು. ಸಾಮಾನ್ಯವಾಗಿ ವಾರಕ್ಕೊಮ್ಮೆಯಾದರೂ ಹೊಸಕೊಪ್ಪ ಕೃಷ್ಣರಾಯರ ಯಾವುದೋ ಒಂದು ಹೇಳಿಕೆ ಪತ್ರಿಕೆಯಲ್ಲಿ ಬರುತ್ತಿತ್ತು. "Mr. Hosakoppa Krishna Rao writes" ಎಂಬುದಕ್ಕಿಂತ "Mr. Hosakappa Krishna Rao wires" ಎಂಬುದೇ ಹೆಚ್ಚಾಗಿ ಬರುತ್ತಿತ್ತು. ಈ ಪ್ರಚಾರದಲ್ಲಿ ಕೃಷ್ಣರಾಯರು ಧಾರಾಳವಾಗಿ ಹಣ ವೆಚ್ಚಮಾಡಿದರು. ಅವರ ಬಾಯಿಮಾತಿಗಿಂತ ಅವರ ಹೆಸರಿನಲ್ಲಿ ಬಂದ ಲೇಖನಗಳು ಹೆಚ್ಚು ಸಾಮರ್ಥ್ಯವನ್ನು ತೋರಿಸುತ್ತಿದ್ದುವು.

ಕೃಷ್ಣರಾಯರು ಒಳ್ಳೆಯ ರಸಿಕರು, ಉದಾರಿಗಳು. ಅವರಿದ್ದ ಕಡೆ ಒಂದು ಸತ್ರ. ಅವರ ಆತಿಥ್ಯದ ರುಚಿ ನನಗೆ ನೆನಪಿದೆ. ಅವರಿಗೆ ತಾಳ ಮದ್ದಲೆ ಯಕ್ಷಗಾನಗಳಲ್ಲಿ ತುಂಬ ಪರಿಶ್ರಮವಿತ್ತು. ಅವರು ಈ ವಿನೋದದಲ್ಲಿ ಮಿತ್ರ ವರ್ಗವನ್ನು ಸೇರಿಸಿಕೊಂಡ ಒಂದೆರಡು ಸಂದರ್ಭಗಳಲ್ಲಿ ನಾನೂ ಹಾಜರಿದ್ದು ಸಂತೋಷಪಟ್ಟೆ. ಅವರು 'ಹಿಂದೂಸ್ಥಾನ್ ಸೇವಾದಳ' ಮುತಾಂದ ಅನೇಕ ಸಮಾರಂಭಗಳಲ್ಲಿ ಪ್ರಮುಖರಾಗಿದ್ದರು. ಕೆಲವು ಕಾಲ ಕಡೂರು ಡಿಸ್ಟ್ರಿಕ್ಟ್ ಬೋರ್ಡಿನ ಪ್ರೆಸಿಡೆಂಟರಾಗಿದ್ದರು. ಅವರ ಕಡೆಕಡೆಯ ದಿವಸಗಳು ಅಷ್ಟೇನೂ ಸುಖಮಯವಾಗಿರಲಿಲ್ಲ. ನಾನು ಅವರ ಪ್ರೋಗ್ರೆಸ್ ಪಾರ್ಟಿಯ ಒಳಗಡೆ ಇದ್ದವನಲ್ಲ. ಆ ಪಾರ್ಟಿಯು ಒಟ್ಟಿನಮೇಲೆ ಕೃಷ್ಣರಾಯರ ವೈಯಕ್ತಿಕ ಪ್ರಭಾವದಿಂದ ನಡೆಯುತ್ತಿದ್ದ ಪಾರ್ಟಿ. ಪ್ರಜಾಮಿತ್ರಮಂಡಲಿಯ ಕೋಮುವಾರು ತತ್ತ್ವದ ಚಳವಳಿಯನ್ನು ತಡೆಗಟ್ಟಲು ಅದು ಸಮರ್ಥವಾಗಲಿಲ್ಲ. ಆದರೂ ಸಮಗ್ರ ಜನತೆಯ ದೃಷ್ಟಿಯೊಂದುಂಟು; ದೇಶಪ್ರಗತಿ ಎಂಬ ಧ್ಯೇಯವೊಂದುಂಟು-ಎಂಬುದನ್ನು ಮಹಾಜನರ ಜ್ಞಾಪಕಕ್ಕೆ ಆಗಾಗ ತರಲು ಕೃಷ್ಣರಾಯರ ಪ್ರಯತ್ನವು ಅಷ್ಟಿಷ್ಟು ಸಾಧಕವಾಯಿತು.

೧೯೨೮ನೆಯ ಇಸವಿಯು ಸುಲ್ತಾನ್‌ಪೇಟೆಯ ಗಲಭೆಯಿಂದ ಚರಿತ್ರಾರ್ಹ ಮಾಡಲ್ಪಟ್ಟದ್ದು. ಆ ಘಟನೆಯ ಫಲಿತಾಂಶಗಳು ಎರಡು: (೧) ಹಿಂದೂ ಸಂಘಟನೆಯ ಚಳವಳಿ; (೨) ಪ್ರಜಾ ರಾಜಕೀಯದ ಚಳವಳಿ.

ಹಿಂದೂ ಜನದಲ್ಲಿ ಒಗ್ಗಟ್ಟನ್ನುಂಟುಮಾಡಿ ಹಿಂದು ಮತಕ್ಕೂ ಹಿಂದೂ ಸಮಾಜಕ್ಕೂ ಒದಗಬಹುದಾದ ಆತಂಕಗಳನ್ನು ನಿವಾರಣೆ ಮಾಡಿಸಬೇಕೆಂಬ ಉದ್ದೇಶದಿಂದ ಹಿಂದೂ ಮಹಾಸಭೆಯೊಂದು ಸ್ಥಾಪಿತವಾಯಿತು. ಸಂಪಿಗೆ ವೆಂಕಟಪತಯ್ಯನವರು ಈ ಸಮಾರಂಭದಲ್ಲಿ ಪ್ರಮುಖರಾಗಿದ್ದರು. ಗಣೇಶೋತ್ಸವ, ಗರಡಿ ವ್ಯಾಯಾಮದ ಪ್ರೋತ್ಸಾಹ ಮುಂತಾದ ಕೆಲವು ಕಾರ್ಯಗಳು ಆ ಸಂಸ್ಥೆಯಿಂದ ನಾಲ್ಕೈದು ವರ್ಷ ನಡೆದವು.

ಒಂದು ಸಣ್ಣ ತಮಾಷೆ ಇಲ್ಲಿ ಜ್ಞಾಪಕಕ್ಕೆ ಬರುತ್ತದೆ. ಹಿಂದೂ ಸಾರ್ವಜನಿಕರಲ್ಲಿಯೇ ಆಗ ಎರಡು ಪಂಗಡಗಳಿದ್ದವು. ಅವುಗಳಲ್ಲಿ ಒಂದು ಸರಕಾರದ ಕಡೆಯದೆಂದು ಇನ್ನೊಂದರ ಶಂಕೆ. ಒಂದು ಪಂಗಡದ ಮುಖಂಡರ ಪೈಕಿ ಎಚ್.ಸಿ.ದಾಸಪ್ಪನವರಿದ್ದರು. ಇನ್ನೊಂದು ಪಂಗಡದಲ್ಲಿ ವಿ. ವೆಂಕಟಪ್ಪನವರಿದ್ದರು. ಮೊದಲನೆಯ ಪಂಗಡದವರು ಹಿಂದೂಮಹಾ ಸಭೆಯೆಂಬ ಹೊಸ ಸಂಸ್ಥೆ ಅನವಶ್ಯಕವೆನ್ನುತ್ತಿದ್ದರು. ಇನ್ನೊಂದು ಪಂಗಡದವರು ಹಿಂದೂ ಸಂಘಟನೆ ತುರ್ತು ಅವಶ್ಯವೆನ್ನುತ್ತಿದ್ದರು. ಈ ಎರಡನೆಯ ಪಂಗಡದವರು ಹಿಂದೂ ಮಹಾಸಭೆಯ ಒಂದು ಶಾಖೆಯನ್ನು ಮೈಸೂರು ಪಟ್ಟಣದಲ್ಲಿ ಸ್ಥಾಪನೆ ಮಾಡಬೇಕೆಂಬ ಉದ್ದೇಶದಿಂದ ಮೈಸೂರಿನ ಟೌನ್‌ಹಾಲಿನಲ್ಲಿ ಒಂದು ಮಹಾಸಭೆಯನ್ನು

ಏರ್ಪಡಿಸಿದರು: ಆ ದಿನದ ಅಧ್ಯಕ್ಷ ಪದವಿಗೆ ಯಾರನ್ನೋ ದೊಡ್ಡ ಮನುಷ್ಯರನ್ನು-ಬಹುಶಃ ಬನುಮಯ್ಯನವರನ್ನೋ ವರ್ಧಮಾನಯ್ಯನವರನ್ನೋ-ಗೊತ್ತು ಮಾಡಿಕೊಂಡಿದ್ದರು. ಸಭೆಯ ಉಪಕ್ರಮ ಬೆಳಿಗ್ಗೆ ೮-೩೦ ಘಂಟೆಗೆ ಎಂದು ನೋಟೀಸುಗಳಲ್ಲಿ ಪ್ರಕಟವಾಗಿತ್ತು. ಸಭೆಯ ಮುಖ್ಯ ಚಾಲಕರು ಸಭೆಗೆ ಅಧ್ಯಕ್ಷರನ್ನು ಕರೆತರಲು ಅವರ ಮನೆಗೆ ಹೋಗಿದ್ದರು. ಹಿಂದಿರುಗಿ ಬರುವುದಕ್ಕೆ ಮುಂಚೆಯೇ ಟೌನ್ ಹಾಲಿನ ಗಡಿಯಾರದಲ್ಲಿ ೮-೩೦ ಘಂಟೆ ಬಡಿಯಿತು. ಆ ತತ್ಕ್ಷಣವೇ ಸಭೆಯಲ್ಲಿದ್ದ ಒಬ್ಬರು ಎದ್ದು: "ಶ್ರೀಮಾನ್ ನೀಲಗಿರಿ ಸಂಜೀವಯ್ಯನವರು ಈ ಸಭೆಗೆ ಅಧ್ಯಕ್ಷರಾಗಬೇಕೆಂದು ನಾನು ಸೂಚಿಸುತ್ತೇನೆ" ಎಂದರು. ಹತ್ತಾರು ಮಂದಿ ಚಪ್ಪಾಳೆ ತಟ್ಟಿದರು ಶ್ರೀ ಸಂಜೀವಯ್ಯನವರು ಕೂಡಲೆ ಸಭಾವೇದಿಕೆಯನ್ನು ಹತ್ತಿ ಅಧ್ಯಕ್ಷಪೀಠವನ್ನು ಹಿಡಿದು ಸಭಿಕರನ್ನು ವಂದಿಸಿ ಮುಂದಿನ ಕಾರ್ಯ ಆಗಬಹುದೆಂದು ಹೇಳಿ ಅಗ್ರಾಸನದಲ್ಲಿ ಮಂಡಿಸಿದರು. ಅಲ್ಲಿಂದ ಎರಡು ಮೂರು ನಿಮಿಷಗಳೊಳಗಾಗಿ ಅಧ್ಯಕ್ಷಸ್ಥಾನಕ್ಕೆ ಗೊತ್ತಾಗಿದ್ದ ದೊಡ್ಡ ಮನುಷ್ಯರೂ ಸಭಾಚಾಲಕರೂ ಅಲ್ಲಿಗೆ ಬಂದರು. ತಮ್ಮ ಕಾಲಾತೀತತ್ವದ ಫಲಿತಾಂಶವನ್ನು ಕಂಡು ಕೈ ಕೈ ಹಿಸುಕಿಕೊಂಡರು. ಸಭೆಯನ್ನು ಎದುರು ಪಂಗಡದವರು ಆಕ್ರಮಿಸಿದ್ದರು.

ಸುಲ್ತಾನ್‌ಪೇಟೆಯ ಗಲಭೆಯ ಎರಡನೆಯ ಫಲಿತಾಂಶವು ಸಾರ್ವತ್ರಿಕವಾದ ರಾಜಕೀಯ ಜಾಗೃತಿ. ರಾಜಕೀಯಾಧಿಕಾರವು ಒಬ್ಬಾನೊಬ್ಬ ಅಧಿಕಾರಿಯ ಕೈಯಲ್ಲಿ ಕೇಂದ್ರೀಕೃತವಾಗಿದ್ದರೆ ಅಂಥ ಅನರ್ಥಗಳು ತಪ್ಪಲಾರವೆಂದೂ, ದೇಶಕ್ಕೆ ಪ್ರಥಮತಃ ಬೇಕಾದದ್ದು ಪ್ರಜಾವಿಹಿತ ರಾಜ್ಯವ್ಯವಸ್ಥೆಯೆಂದೂ, ಸರಕಾರವು ಪ್ರಜೆಗೆ ವಿಧೇಯವಾಗಿ ನಡೆದು ಸಮಾಧಾನ ಹೇಳತಕ್ಕದ್ದಾಗಿರಬೇಕೆಂದೂ ಆಗ ಜನರ ಮನಸ್ಸಿಗೆ ಚೆನ್ನಾಗಿ ವಿದಿತವಾಯಿತು. ಇದನ್ನು ಅನುಸರಿಸಿಯೇ ಶ್ರೀ ವಿಶ್ವೇಶ್ವರಯ್ಯ ಸಮಿತಿಯ ವರದಿಯು ಜವಾಬ್ದಾರಿ ಸರಕಾರದ ಪದ್ಧತಿಯನ್ನು ಶಿಫಾರಸು ಮಾಡಿತು. ಜಾತಿ ಯಾವುದೇ ಆಗಲಿ, ಮತ ಯಾವುದೇ ಆಗಲಿ, ಕೋಮು ಯಾವುದೇ ಆಗಲಿ, ಕಸಬು ಯಾವುದೇ ಆಗಲಿ -ಜವಾಬ್ದಾರಿ ಸರಕಾರದ ವ್ಯವಸ್ಥೆ ಎಲ್ಲ ಜನದ ದೃಷ್ಟಿಯಿಂದಲೂ ಆವಶ್ಯಕವಾದದ್ದು ಎಂಬ ತತ್ತ್ವವು ಪ್ರಜಾ ಸಾಮಾನ್ಯದ ಮನಸ್ಸಿಗೆ ಸ್ಥಿರಪಟ್ಟದ್ದು ಆಗ. ಆ ತತ್ವವನ್ನು ಅನುಸರಿಸಿ ಹೊಸದಾಗಿ 'ನ್ಯಾಷನಲ್ ಪ್ರೋಗ್ರೆಸಿವ್ ಲೀಗ್' ಎಂಬ ಹೊಸ ಸಂಸ್ಥೆ ೧೯೨೮-೨೯ರ ಸುಮಾರಿನಲ್ಲಿ ಪ್ರಾರಂಭವಾಯಿತು. ಅದು ಕೆಲವು ಧ್ಯೇಯ ನಿರೂಪಣೆಗಳನ್ನೂ ತತ್ತ್ವ ವಿವರಣೆಗಳನ್ನೂ ಪ್ರಕಟಿಸಿ ಒಂದೆರಡು ಸಭೆಗಳನ್ನು ಸೇರಿಸಿ ಮುಗಿಯಿತು.

ಕೆ.ಚೆಂಗಲರಾಯರೆಡ್ಡಿಯವರು ರಾಜಕೀಯಕ್ಕೆ ಕಾಲಿಟ್ಟದ್ದು ಈ ೧೯೨೮-೨೯ರ ಸುಮಾರಿನಲ್ಲಿ. ಆಗ ಅವರು ಪ್ರಜಾಪ್ರತಿನಿಧಿಸಭೆಗೆ ಸದಸ್ಯರಾಗಿ ಬಂದರು. ಕೆಲಕಾಲ ಯಾವ ಪಾರ್ಟಿಗೂ ಸೇರದೆ ಇದ್ದರು. ೧೯೩೧ರಲ್ಲಿ

ಲಂಡನ್ ಪಟ್ಟಣದಲ್ಲಿ ಇಂಡಿಯದ ರಾಜ್ಯವ್ಯವಸ್ಥೆಯ ಪುನಃಪರಿಷ್ಕಾರಕ್ಕಾಗಿ 'ರೌಂಡ್ ಟೇಬಲ್ ಕಾನ್ಫರೆನ್ಸ್' ಎಂಬ ನಾನಾ ಪಕ್ಷ ಸಮ್ಮೇಳನ ನಡೆಯುವುದಾಗಿತ್ತು. ಅದಕ್ಕೆ ಮೈಸೂರಿನ ಪ್ರತಿನಿಧಿಯಾಗಿ ದಿವಾನ್ ಸರ್ ಮಿರ್ಜಾ ಸಾಹೇಬರು ಹೋಗಬೇಕಾಗಿತ್ತು. ಸರ್ ಮಿರ್ಜಾರವರು ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ಪ್ರಜಾಭಿಪ್ರಾಯವನ್ನೂ ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ಒಂದು ಪ್ರಜಾಪ್ರಮುಖ ಸಭೆಯನ್ನು ಬೆಂಗಳೂರಿನಲ್ಲಿ ಸೇರಿಸಿದ್ದರು. ಆ ಸಭೆಗೆ ಆಹ್ವಾನಿತರಾಗಿದ್ದವರಲ್ಲಿ ಕೆಲಮಂದಿ ತಾವು ಖಾಸಗಿಯಾಗಿ ಪೂರ್ವಭಾವಿಯಾಗಿ ಸೇರಿ ಪ್ರಜಾಭಿಪ್ರಾಯಕ್ಕೆ ಒಂದು ಸಂಘಟಿತ ರೂಪವನ್ನು ಕೊಡುವ ವಿಜ್ಞಾಪನ ಪತ್ರಿಕೆಯನ್ನು ತಯಾರು ಮಾಡಿ ಅದನ್ನು ಸಭೆಯಲ್ಲಿ ಓದಿ ಸರ್ ಮಿರ್ಜಾ ಸಾಹೇಬರಿಗೆ ಒಪ್ಪಿಸತಕ್ಕದ್ದೆಂದು ನಿಶ್ಚಯ ಮಾಡಿಕೊಂಡರು. ಅದರಂತೆ ವಿಜ್ಞಾಪನ ಪತ್ರಿಕೆ ತಯಾರಾಯಿತು. ಅದರಲ್ಲಿ ದೇಶೀಯ ಸಂಸ್ಥಾನಗಳಿಗೆ ಜವಾಬ್ದಾರಿ ಸರಕಾರದ ಆವಶ್ಯಕತೆಯನ್ನೂ ಸಂಸ್ಥಾನಗಳಿಗೆ ಸಕಲ ಇಂಡಿಯದ ರಾಜ್ಯವ್ಯವಸ್ಥೆಯಲ್ಲಿ ಸಲ್ಲಬೇಕಾದ ಸ್ಥಾನಮಾನಗಳನ್ನೂ ಕಾರಣ ಪೂರ್ವಕವಾಗಿ ತೋರಿಸಿಕೊಟ್ಟಿತ್ತು. ಪತ್ರಿಕೆಯ ಮೂಲಪ್ರತಿಯನ್ನು ತಿದ್ದಿ ಅಂಗೀಕರಿಸುವ ಬಗ್ಗೆ, ಅದಕ್ಕೆ ಯಾರು ಯಾರು ಸಹಿ ಹಾಕಬೇಕು, ಯಾವ ಕ್ರಮದಲ್ಲಿ ಹೆಸರುಗಳು ಬರಬೇಕು-ಎಂಬ ಬಗ್ಗೆ ತಕರಾರುಗಳು ಹುಟ್ಟಿದವು. ಆ ಆಲೋಚನೆಯ ಪ್ರಾರಂಭಕರ್ತರು ಈ ತಕರಾರುಗಳಲ್ಲಿ ಹಟಹಿಡಿಯದೆ-ಗೌಣ ವಿಚಾರಗಳಲ್ಲಿ ಯಾವ ಬದಲಾವಣೆಯಾದರೂ ಆಗಲಿ, ಹೆಸರುಗಳು ಹೇಗಾದರೂ ಬರಲಿ, ಮುಖ್ಯೋದ್ದೇಶ ಪತ್ರಿಕೆಯಲ್ಲಿದ್ದರೆ ಸಾಕು ಎಂಬ ರಾಜಿಯ ಮಾರ್ಗವನ್ನು ಹಿಡಿದದ್ದರಿಂದ ಆ ಆಲೋಚನೆ ನೆರವೇರಿತು. ಶ್ರೀ ಡಿ.ಎಸ್.ಮಲ್ಲಪ್ಪನವರು ಆ ವಿಜ್ಞಾಪನ ಪತ್ರಿಕೆಯನ್ನು ಆ ಪ್ರಗತಿವಾದಿಗಳ ಗುಂಪಿನ ಪರವಾಗಿ ಓದಿ ದಿವಾನರಿಗೆ ಒಪ್ಪಿಸಿದರು. ಅದಕ್ಕೆ ಬಹುಮಂದಿ ಗಣ್ಯಜನರು-ಎಲ್ಲ ಜಾತಿ, ಎಲ್ಲ ಕೋಮು, ಎಲ್ಲ ಕಕ್ಷಿಗಳವರೂ-ಸಹಿ ಮಾಡಿದ್ದರು.

೧೯೩೧ರಲ್ಲಿ ಸ್ಟೇಟ್ಸ್ ಪೀಪಲ್ಸ್ ಕಾನ್‌ಫರೆನ್ಸ್ (ದೇಶೀಯ ಸಂಸ್ಥಾನಗಳ ಪ್ರಜಾಪರಿಷತ್ತು) ಬೆಂಗಳೂರಿನಲ್ಲಿ ನಡೆಯಿತು. ಸಾಂಗ್ಲಿ ಸಂಸ್ಥಾನದ ವಕೀಲ್ ಮತ್ತು ಪೂನಾ ಲಾ ಕಾಲೇಜಿನ ಪ್ರೊಫೆಸರ್ ಜಿ.ಆರ್. ಅಭಯಂಕರ್ ಅವರು ಅಧ್ಯಕ್ಷರಾಗಿದ್ದರು. ದೇಶೀಯ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರಕಾರ ಬರಬೇಕು; ಮತ್ತು ಸಂಸ್ಥಾನಗಳು ಸಮಸ್ತ ಇಂಡಿಯದ ರಾಜ್ಯವ್ಯವಸ್ಥೆಯಲ್ಲಿ ಭಾಗಿಗಳಾಗಿ ಒಟ್ಟುಗೂಡಬೇಕು-ಎಂಬುದೇ ಮೊದಲಾದ ನಿರ್ಣಯಗಳು ಅಂಗೀಕೃತವಾದವು.

೧೯೩೨ರಲ್ಲಿ ಮಧುಗಿರಿಯಲ್ಲಿ ಲಾಯರ್ ಸಮ್ಮೇಳನ ನಡೆಯಿತು. ಅದೇ ಸಮಯದಲ್ಲಿ ರಾಜಕೀಯಪಕ್ಷ ಸಮ್ಮೇಳನ (All Parties'Conference) ಒಂದು ನಡೆಯಿತು. ಆ ಸಮ್ಮೇಳನದಲ್ಲಿ ಆಗಿನ ಇಂಡಿಯ ಸೆಕ್ರೆಟರಿ ಸರ್ ಸ್ಯಾಮ್ಯುಯಲ್ ಹೋರ್ ಅವರು ಹೊರಡಿಸಿದ್ದ ಕರಡು ಯೋಜನೆ (White Paper) ಯನ್ನು ವಿಮರ್ಶೆ ಮಾಡಿ, ಆ ಯೋಜನೆಯಲ್ಲಿ ಸಂಸ್ಥಾನ ಪ್ರಜೆಗಳ ಹಿತವಿಚಾರವನ್ನು ತೆಗೆದುಕೊಂಡಿಲ್ಲವೆಂದು ಖಂಡನೆ ಮಾಡಿದ ನಿರ್ಣಯಗಳಾದವು.

ಇಂಡಿಯದ ಕಾಂಗ್ರೆಸ್ ಸಂಸ್ಥೆಯ ಶಾಖೆಯು ಮೈಸೂರಿನಲ್ಲಿ ಬಹುಶಃ ೧೯೨೧-೨೨ರ ವೇಳೆಗೇ ಪ್ರಾರಂಭವಾಗಿತ್ತೆಂದು ತೋರುತ್ತದೆ. ಆಗ ಅದು ಪ್ರಬಲಿಸಿ ಮಹಾಜನದ ದೃಷ್ಟಿಯಲ್ಲಿ ಗಣ್ಯವಾಗಿತ್ತು. ಆದರೆ ಅದಕ್ಕೆ ಶಕ್ತಿ ಪ್ರಭಾವಗಳು ನಿಜವಾಗಿ ಬಂದು ಅದು ಕಾರ್ಯಕಾರಿಯಾದದ್ದು ೧೯೩೭ರ ಸುಮಾರಿನಲ್ಲಿ- ಹಳೆಯ ಪ್ರಜಾಮಿತ್ರ ಮಂಡಲಿಯೂ ಅದರ ಸಂತತಿಯಾದ ಪ್ರಜಾಪಕ್ಷವೂ ಕಾಂಗ್ರೆಸ್ಸಿನಲ್ಲಿ ಐಕ್ಯವಾದಾಗ. ಆಗ್ಗೆ ಕೊಂಚ ದಿನದ ಹಿಂದೆ ಆ ಪಕ್ಷವು ಕೋಲಾರದಲ್ಲಿ ಸಭೆ ನೆರೆದಿತ್ತು. ಆಮೇಲೆ ಒಂದು ದಿನ ಹೊರಗಿನಿಂದ ನೋಡುವವರಿಗೆ ಆಕಸ್ಮಿಕ ಘಟನೆ ಎಂದು ತೋರುವಂತೆ, ಆ ಪಕ್ಷದ ನಾಯಕರು ಕಾಂಗ್ರೆಸ್ ಸಂಸ್ಥೆಯ ಸದಸ್ಯರಾಗಿಬಿಟ್ಟರು. ರುಮಾಲು ಹ್ಯಾಟುಗಳನ್ನು ಗೂಟಗಳಿಗೆ ತಗಲಿಸಿ ರಾತ್ರಿ ಮಲಗಿದವರು ಬೆಳಗೆದ್ದು ಗಾಂಧಿಟೋಪಿಗಳನ್ನು ಧರಿಸಿದರು. ಹೀಗೆ ಪರಿವರ್ತನೆಯಾದವರಲ್ಲಿ ಹಿಂದಿನಿಂದಲೂ ಖಾದಿ ಧರಿಸಿ ಗಾಂಧೀ ತತ್ತ್ವವನ್ನು ಘೋಷಿಸುತ್ತಿದ್ದವರೂ ಕೆಲವರಿದ್ದರು. ಏವಂ ಚ ಸಂಸ್ಥಾನದ ರಾಜಕೀಯಕ್ಕೆ ವೀರ್ಯ ಬಂದದ್ದು ಈ ಘಟನೆಯಿಂದ. ಇಲ್ಲಿಗೆ ಈ ಕಥೆಯನ್ನು ಬಿಡುತ್ತೇನೆ.

ಮೇಲಣ ಸಂಗತಿಗಳನ್ನೆಲ್ಲ ನಾನು ಬರಿಯ ಜ್ಞಾಪಕದಿಂದ ಹೇಳಿದ್ದೇನೆ. ತತ್ಸಂಬಂಧವಾದ ಕಾಗದ ಪತ್ರಗಳೂ ದಾಖಲೆಗಳೂ ನನ್ನೆದುರಿಗಿಲ್ಲ. ಅವುಗಳನ್ನು ಹುಡುಕಿ ಸಂಪಾದಿಸಲು ನನಗೆ ಬಿಡುವಿಲ್ಲ. ನನ್ನ ಜ್ಞಾಪಕದಲ್ಲಿ ಲೋಪಗಳೂ ಪ್ರಮಾದಗಳೂ ಎಷ್ಟೋ ಇರಬಹುದು. ತಾರೀಖುಗಳ ವಿಷಯದಲ್ಲಿ ವ್ಯತ್ಯಾಸಗಳಿರಬಹುದು. ಎಷ್ಟೋ ಮುಖ್ಯವಾದ ಸಂಗತಿಗಳನ್ನು ನಾನು ಮರೆತುಬಿಟ್ಟಿರಬಹುದು. ಈ ಲೇಖನಗಳಲ್ಲಿ ನನ್ನ ಉದ್ದೇಶವು ಯಾವ ವ್ಯಕ್ತಿಗೇ ಆಗಲಿ ಅಗೌರವ ತೋರಿಸಬೇಕೆಂಬುದಲ್ಲ ಮತ್ತು ಅನ್ಯಾಯ ಮಾಡಬೇಕೆಂಬುದಲ್ಲ-ಎಂಬದನ್ನು ಎಲ್ಲ ವಾಚಕರೂ ಗ್ರಹಿಸಿಯಾರೆಂದು ನಾನು ನಂಬಿ ಕೊಂಡಿದ್ದೇನೆ. ನನ್ನ ಉದ್ದೇಶ ಕೆಲವು ಹಳೆಯ ಸಂಗತಿಗಳನ್ನು ಇಂದಿನ ಹೊಸಬರಿಗಾಗಿ ಗುರುತು ಮಾಡುವುದು ಮಾತ್ರ. ನಮ್ಮ ರಾಜಕೀಯವು ಬಹುಕಾಲದ, ಮತ್ತು ಬಹುಮಂದಿಯ, ಮತ್ತು ಬಹುವಿಧದ ಸಂತತ ಪರಿಶ್ರಮದಿಂದ ಬೆಳೆದು ಬಂದಿರುವಂಥಾದ್ದು. ಅದಕ್ಕಾಗಿ ಬಹು ಜನ ದೇಹಶ್ರಮ ಧನಾದಿಗಳನ್ನು

ಮಾತ್ರವಲ್ಲದೆ ತಮ್ಮ ಕಾಲವನ್ನೂ ಚಿಂತನಶಕ್ತಿಯನ್ನೂ ಮನಸ್ಸಿನ ಉತ್ಸಾಹವನ್ನೂ ವ್ಯಯಮಾಡಿರುತ್ತಾರೆ. ಹೀಗೆ ಕಷ್ಟ ಪಟ್ಟು ಗಳಿಸಿದ್ದು ಇಂದಿನ ರಾಜಕೀಯ ಪ್ರಗತಿಯೆಂಬುದನ್ನು ನಮ್ಮ ಯುವಕರು ಕಂಡುಕೊಂಡರೆ ಈ ಕ್ಷೇತ್ರದಲ್ಲಿ ಅವರು ಮುಂದೆ ನಡಸಬೇಕಾಗಿರುವ ಕರ್ತವ್ಯವನ್ನು ಮತ್ತು ಹೆಚ್ಚಿನ ದೀಕ್ಷಾಬುದ್ಧಿಯಿಂದ ನಡಸಿಯಾರೆಂದು ನನ್ನ ನಿರೀಕ್ಷೆ.

## ೧೮

# ಅತ್ತಿಕುಪ್ಪೆ ಕೃಷ್ಣಶಾಸ್ತ್ರಿಗಳು

೧೯೧೯ರ ಡಿಸೆಂಬರಿನಲ್ಲಿ ಬೆಂಗಳೂರಿನಲ್ಲಿ ಮೈಸೂರು ಪೀಪಲ್ಸ್ ಕನ್ ವೆನ್ ಷನ್ ಎಂಬ ಪ್ರಜಾರಾಜಕೀಯ ಪರಿಷತ್ತು ಸೇರಿದ್ದ ಸಂಗತಿಯನ್ನು ಆಗಲೇ ಪ್ರಸ್ತಾವಿಸಿದ್ದೇನೆ. ಆ ಪರಿಷತ್ತಿಗಾಗಿ ಬಂದಿದ್ದ ಸದಸ್ಯರು ಏಳೆಂಟುಮಂದಿ ಶಂಕರಪುರದ ಹಾರ್ಡಿಂಜ್ ರಸ್ತೆಯಲ್ಲಿ ಸಬ್ ಜಡ್ಜಿ ಲಕ್ಷ್ಮೀನಾರಣಪ್ಪನವರ ಮನೆಯಲ್ಲಿ ಇಳಿದುಕೊಂಡಿದ್ದರು. ಮೈಸೂರಿನ ಎಂ. ವೆಂಕಟಕೃಷ್ಣಯ್ಯನವರೂ ಚಿಕ್ಕಮಗಳೂರು ಶ್ರೀನಿವಾಸರಾಯರು ವಾಸುದೇವರಾಯರೂ ನರಸಿಂಗರಾಯರೂ ಇನ್ನಿಬ್ಬರು ಮೂವರೂ ಆ ಪೈಕಿ ಇದ್ದರು. ಆ ಪರಿಷತ್ತಿನ ಮೊದಲನೆಯ ದಿವಸದ ಕಾರ್ಯಗಳು ಸಾಂಗವಾಗಿ ನಡೆದ ಬಳಿಕ ಎಲ್ಲರೂ ಸಂತೋಷದಿಂದ ಅವರವರ ಬಿಡಾರಗಳಿಗೆ ತೆರಳಿದಂತೆ ಈಗ ನಾನು ಹೇಳಿದ ಮಹನೀಯರೂ ತಾವಿಳಿದಿದ್ದ ಕಡೆಗೆ ಬಂದು ಭೋಜನಾನಂತರ ವಿಶ್ರಮಿಸಿಕೊಂಡರು. ಆ ರಾತ್ರಿ ಸುಮಾರು ೧೨ ಘಂಟೆ ಇರಬಹುದು. ಆ ಸರಿಹೊತ್ತಿನಲ್ಲಿ ಯಾರೋ ಬಂದು ಲಕ್ಷ್ಮೀನಾರಣಪ್ಪನವರ ಮನೆಯ ಹೊರಬಾಗಿಲನ್ನು ತಟ್ಟಿದ ಹಾಗಾಯಿತು. ಲಕ್ಷ್ಮೀನಾರಣಪ್ಪನವರು ಮಹಡಿಯ ಮೇಲೆ ಬೀದಿ ಕಡೆಯ ವರಾಂಡಾ ಕೊಠಡಿಯಲ್ಲಿ ಎಂದಿನಂತೆ ಮಲಗಿದ್ದರು. ಸಾಮಾನ್ಯವಾಗಿ ಅವರು ೯ ಘಂಟೆಗೆ ಮಲಗಿ, ಒಂದು ನಿದ್ದೆಯಾದ ಬಳಿಕ ಸುಮಾರು ೧೧-೧೧.೩೦ರ ವೇಳೆಗೆ ಕೊಂಚ ಎಚ್ಚರಗೊಳ್ಳುತ್ತಿದ್ದರು. ಆ ರಾತ್ರಿ ಕದ ತಟ್ಟಿದ ಸದ್ದು ಕೇಳಿಸಿದ ಕೂಡಲೆ ಅವರು ಅಲ್ಲಿಂದಲೇ "ಯಾರದು?" ಎಂದು ಕೂಗಿದರು. ಕೇಳಿನಿಂದ, "ನಾನು, ಕೃಷ್ಣ" ಎಂದು ಉತ್ತರ ಬಂತು. ವ್ಯಕ್ತಿ ಯಾರೋ ನಿಷ್ಕರ್ಷೆಯಾಗಿ ತಿಳಿಯದಿದ್ದರೂ ಧ್ವನಿ ಪರಿಚಿತವಾದದ್ದಾಗಿತ್ತು. ಲಕ್ಷ್ಮೀನಾರಣಪ್ಪನವರು ಕೂಡಲೆ ದೀಪ ಹಾಕಿ ಕೆಳಕ್ಕಿಳಿದು ಬಂದು ಬಾಗಿಲು ತೆರೆದರು. ಅಲ್ಲಿದ್ದಾತ ಅತ್ತಿ ಕುಪ್ಪೆಯ ಕೃಷ್ಣಶಾಸ್ತ್ರಿ.

"ಏನು ಇಷ್ಟು ಹೊತ್ತು?"

"ನೆಂಟರ ಮನೆಗೆ ಊಟಕ್ಕೆ ಹೋಗಿದ್ದೆ. ಅಲ್ಲಿ ಬಹಳ ಹೊತ್ತಾಯಿತು. ಅಲ್ಲಿಯೇ ಮಲಗಿಕೊಳ್ಳಹೇಳಿದರು. ಆದರೆ ಇಲ್ಲಿಯ ಯಜಮಾನರುಗಳ ಕೂಡ ಜರೂರಾಗಿ ಮಾತನಾಡಬೇಕಾದದ್ದು ಇದೆ. ಅದಕ್ಕೋಸ್ಕರ

ಬಂದುಬಿಟ್ಟೆ, ತಮಗೆ ತೊಂದರೆಯಾಯಿತು, ಕ್ಷಮಿಸಬೇಕು."

ಕೃಷ್ಣಶಾಸ್ತ್ರಿಗಳ ಮಾತಿನಲ್ಲಿ ಹೀಗೆ ವಿನಯ ತುಂಬಿದ್ದರೂ ಅವರ ಮುಖದ ಮೇಲೆ ಏನೋ ಚೇಷ್ಟೆ ಸುಳಿದಾಡುತ್ತಿತ್ತು. ಲಕ್ಷ್ಮೀನಾರಣಪ್ಪನವರೂ ಹಾಸ್ಯಪ್ರಿಯರು. ಏನಾಗುತ್ತದೋ ನೋಡೋಣವೆಂದು ಹೆಚ್ಚು ಮಾತನಾಡದೆ ಅವರು "ಒಳ್ಳೆಯದಾಯಿತು. ಇಷ್ಟುಹೊತ್ತಿಗಾದರೂ ಬಂದಿರಲ್ಲ, ಮೇಲೆ ಹಾಸಿಗೆ ಹಾಸಿದೆ. ಮಲಗಿಕೊಳ್ಳಬಹುದು" ಎಂದು ಹೇಳಿ ತಮ್ಮ ಕೋಣೆಗೆ ತಾವು ಹೋಗಿ ಬಾಗಿಲು ಹಾಕಿಕೊಂಡರು.

ಕೃಷ್ಣಶಾಸ್ತ್ರಿಗಳು ಮಹಡಿಯ ಮೇಲಕ್ಕೆ ಬಂದು ಹಾಸಿಗೆ ಕೊಡವಿ ದೀಪವಾರಿಸಿ "ರಾಮ ರಾಮ" ಎನ್ನುತ್ತ ಮಲಗಿಕೊಂಡಂತೆ ಮಾಡಿದರು. ಐದಾರು ನಿಮಿಷ ಕಳೆಯಿತು. ಅಷ್ಟರೊಳಗಾಗಿ ಲಕ್ಷ್ಮೀನಾರಣಪ್ಪನವರು ಮತ್ತೆ ನಿದ್ದೆ ಹೋಗಿರಬೇಕೆಂದು ಕೃಷ್ಣಶಾಸ್ತ್ರಿಗಳು ಭಾವಿಸಿಕೊಂಡು, ಹಾಸಿಗೆಯಿಂದ ಎದ್ದು ದೀಪ ಹಾಕಿದರು. ಹಾಲಿನಲ್ಲಿ ಯಾರ್ಯಾರು ಎಲ್ಲೆಲ್ಲಿ ಮಲಗಿದ್ದರೆಂಬುದನ್ನು ಗುರುತುಮಾಡಿಕೊಂಡರು. ಬಳಿಕ ಒಂದು ಹಾಸಿಗೆಯ ಪಕ್ಕದಲ್ಲಿ ಕುಳಿತು, ತಾವು ಕೈಯಲ್ಲಿ ತಂದಿದ್ದ ಪೊಟ್ಟಣಗಳನ್ನು ಬಿಚ್ಚಿಕೊಂಡು, ಒಂದು ದೂದುಫೇಡವನ್ನು ಮುರಿದು ಗಾಢನಿದ್ರೆಯಲ್ಲಿದ್ದ ಶ್ರೀನಿವಾಸರಾಯರ ಬಾಯಿಗೆ ತುರುಕಿದರು. ಅದು ಹಲ್ಲಿಲ್ಲದ ಬಾಯಿ. ದೂದುಫೇಡ ನೇರವಾಗಿ ನಾಲಿಗೆ ಸೇರಿತು. ರಾಯರು "ಹಾಂ, ಯಾರು?" ಎಂದು ಕೂಗಿದರು. ಶಾಸ್ತ್ರಿಗಳು "ನಾನು, ಮದ್ದು" ಎಂದರು. ಇಷ್ಟು ಹೊತ್ತಿಗೆ ದೂದುಫೇಡ ಅರ್ಧ ಕರಗಿ ಶ್ರೀನಿವಾಸರಾಯರ ಹೊಟ್ಟೆ ಹೊಕ್ಕಿತ್ತು. "ಮದ್ದು" ಎಂದರೆ ಮಧ್ವರಾಯ-ಶ್ರೀನಿವಾಸರಾಯರ ಮಗ. ರಾಯರು ನಗುತ್ತ ಕುಳಿತರು.

ಶಾಸ್ತ್ರಿಗಳು ಅಲ್ಲಿಂದೆದ್ದು ಪಕ್ಕದಲ್ಲಿದ್ದ ವೆಂಕಟಕೃಷ್ಣಯ್ಯನವರ ಬಾಯಿಗೆ ಒಂದು ಚೂರು ಜಹಾಂಗೀರ್ ಹೊಗಿಸಿದರು. ಹಾಗೆಯೇ ವಾಸುದೇವರಾಯರ ತುಟಿಗಳ ನಡುವೆ ಒಂದು ಚಕ್ಕುಲಿ ಮುರುಕನ್ನು ತಳ್ಳಿದರು. ನರಸಿಂಗರಾಯರ ಬಾಯಿಗೆ ಎರಡು ಉಪ್ಪೇರಿಗಳನ್ನು ನೂಕಿದರು. ಅವರೆಲ್ಲರೂ ಥೂ ಥೂ! ಎಂದುಕೊಂಡು ಬಾಯಿಗೆ ಬಂದದ್ದನ್ನು ಸವಿಯುತ್ತ "ಏನಪ್ಪ ಇದು?" ಎಂದು ಗೊಣಗುತ್ತ ಎದ್ದು ಕುಳಿತು ನೋಡುತ್ತಾರೆ: ಎದುರಿಗೆ ಇನ್ನೂ ನಾಲ್ಕು ದೊಡ್ಡ ತಿಂಡಿಯ ಪೊಟ್ಟಣಗಳು! ಎಲ್ಲರೂ ಕೃಷ್ಣಶಾಸ್ತ್ರಿಯನ್ನು ನೋಡಿ "ಏನಯ್ಯ, ಇದೆಲ್ಲ ಇಷ್ಟು ಹೊತ್ತಿನಲ್ಲಿ?" ಎಂದು ಆಕ್ಷೇಪಣೆ ಸೂಚಿಸಿದರು. ಶಾಸ್ತ್ರಿಗಳು, "ತೊಗೊಳ್ಳಿ ಯಜಮಾನರೆ, ತಮಗೋಸ್ಕರ ತಂದೆ. ರುಚಿಯಾಗಿತ್ತು. ತಮ್ಮನ್ನು ಬಿಟ್ಟು ಒಬ್ಬನೇ ಹೇಗೆ ತಿನ್ನಲಿ? ತಾವು ದೊಡ್ಡ ಮನಸ್ಸು ಮಾಡಬೇಕು" ಎಂದರು. ಇದನ್ನೆಲ್ಲ ಪಕ್ಕದ ಕೊಠಡಿಯಿಂದ ಕಿವಿಯ ಮೂಲಕ ತಿಳಿದುಕೊಳ್ಳುತ್ತಿದ್ದ ಲಕ್ಷ್ಮೀನಾರಣಪ್ಪನವರೂ ಉಪಾಹಾರ ಕೂಟದಲ್ಲಿ ಸೇರಿದರು.

ಸುಮಾರು ಎರಡು ಘಂಟೆಯವರೆಗೂ ಆ ತಿಂಡಿ ಹರಟೆಗಳು ನಡೆದವು. ಅದರ ನಡುವೆ ಶಾಸ್ತ್ರಿಗಳು ತಮ್ಮ ಜೇಬಿನಿಂದ ಒಂದು ಹುವ್ವಿನ ಹಾರವನ್ನೂ ಗಂಧದ ಡಬ್ಬಿಯನ್ನೂ ಹೊರಕ್ಕೆ ತೆಗೆದರು. ಶ್ರೀನಿವಾಸರಾಯರು ಅದನ್ನು ನೋಡಿ- "ಎಲ್ಲಿ ಹೋಗಿದ್ದೆಯಯ್ಯಾ? ಯಾರ ತಲೆಯಲ್ಲಿದ್ದದ್ದೋ!" ಎಂದರು. ಲಕ್ಷ್ಮೀನಾರಣಪ್ಪನವರು- "ಯಾರ ತಲೆಯಲ್ಲಿದ್ದದ್ದೋ, ಎಲ್ಲಿದ್ದದ್ದೋ, ನೀವು ಕೇಳಿದರೆ ಹೇಳುತ್ತಾರೆಯೇ?"

ಕೃಷ್ಣಶಾಸ್ತ್ರಿಗಳು- "ತಾವೆಲ್ಲ ಹಿರಿಯರು, ತಾವು ಮಾಡದೆ ಇದ್ದದ್ದು ನಾನೇನು ಮಾಡುತ್ತೇನೆ?" ಎಂದರು.

ಹೀಗೆ ಬೆಳಗಾಗುವವರೆಗೂ ಹರಟೆ, ನಗುವು, ನಗು, ಹರಟೆ ಜರುಗಿತು.

ಆ ಪ್ರದೇಶದಲ್ಲಿಯೇ ವಾಸವಾಗಿದ್ದ ನಾನು ಮಾರನೆಯ ದಿನ ಬೆಳಗ್ಗೆ ಯಜಮಾನರುಗಳನ್ನು ಕುಶಲ ಪ್ರಶ್ನೆ ಮಾಡಬೇಕೆಂದು ಅಲ್ಲಿಗೆ ಹೋದಾಗ ಆ ಕಥೆಯನ್ನೆಲ್ಲ ಕೇಳಿದೆ. ಸ್ವಲ್ಪ ಹೊಟ್ಟೆಕಿಚ್ಚಾಯಿತು. ಕೃಷ್ಣಶಾಸ್ತ್ರಿಗಳನ್ನು ಕುರಿತು "ನನ್ನನ್ನೇಕೆ ಕರೆಯಲಿಲ್ಲ?" ಎಂದು ಕೇಳಿದೆ. ಅವರು "ನೀವು ಇನ್ನೂ ಹುಡುಗರೆಂದು ಇವರು ತಿಳಿದುಕೊಂಡಿದ್ದಾರೆ. ನೀವು ಇಲ್ಲಿದ್ದಿದ್ದರೆ ಅವರು ಆಡಿದ ಆಟಗಳನ್ನೆಲ್ಲ ಹೇಳಲು ಸಂಕೋಚಪಡುತ್ತಿದ್ದರು. ನೀವು ಕೊಂಚ ಮಡಿಯವರು, ಮಡಿ ಮಾತಿನವರು ಗುಡಿಗೆ ಹೋಗಬೇಕು. ಈ ಗೋಷ್ಠಿಗೆ ನೀವು ಬರಬೇಕಾದರೆ ಸ್ವಲ್ಪ ತರಬೇತಾಗಬೇಕು" ಎಂದು ಜವಾಬು ಹೇಳಿದರು.

ವಾಸ್ತವವಾಗಿ ನಾನು ಅಷ್ಟೇನೂ ಪ್ರಾಕೃತನಾಗಿರಲಿಲ್ಲ. ಅದರೆ ಕೃಷ್ಣಶಾಸ್ತ್ರಿಗಳ ಕೂಡ ಸ್ಪರ್ಧೆ ಹೂಡಿ ಜಯಿಸುವಷ್ಟರ ರಸಿಕತನ ನನ್ನಲ್ಲಿತ್ತೆಂದು ನಾನು ಹೇಳಿಕೊಳ್ಳಲಾರೆ.

ಮೇಲೆ ಹೇಳಿದ ಸಂದರ್ಭ ಅತ್ತಿಕುಪ್ಪೆ ಕೃಷ್ಣಶಾಸ್ತ್ರಿಗಳವರ ವ್ಯಕ್ತಿಸ್ವರೂಪಕ್ಕೆ ಉದಾಹರಣೆಯಾಗಿದೆ. ಅವರದು ಸ್ನೇಹಮಯವಾದ ಹೃದಯ, ರಸಿಕ ಸ್ವಭಾವ. ಒಳ್ಳೆಯ ರೂಪ. ಅದು ಆಕಾರದಲ್ಲಿ ಎತ್ತರವೂ ಅಲ್ಲ, ಗಿಡ್ಡೂ ಅಲ್ಲ. ಮಧ್ಯಮ ವಯಸ್ಸು ಮುಗಿದಮೇಲೆ ಕೊಂಚ ಸ್ಥೂಲರಾಗಿದ್ದರು. ಮೈ ಬಣ್ಣ ಕೆಂಪು ಮಿಶ್ರಣವಾದ ಬಿಳಿಪು. ಮುಖದ ಮೇಲೆ ಯಾವಾಗಲೂ ನಗೆ ಸುಳಿದಾಡುತ್ತಿತ್ತು. ಒಟ್ಟಿನಮೇಲೆ ಆಕರ್ಷಕರೂಪ. ಧ್ವನಿ ಮಧ್ಯಮ ಸ್ಥಾಯಿಯದು. ಬಾಯಿಂದ ಅಕ್ಷರಗಳು ಸ್ಫುಟವಾಗಿ ಹೊರಡುತ್ತಿದ್ದವು. ಅವರು ಸಾಹಿತ್ಯವನ್ನು ನಿಷ್ಠದಿಂದ ಅಭ್ಯಾಸ ಮಾಡಿದ್ದವರು. ಅವರಿಗೆ ಸಂಗೀತದ ಪರಿಚಯವೂ ಚೆನ್ನಾಗಿತ್ತು. ಅವರು ಕೆಲವು ಕಾಲ ಯಾವುದೋ ನಾಟಕದ ಕಂಪನಿಯಲ್ಲಿ ಪಾತ್ರ ನಿರ್ವಾಹ ಮಾಡುತ್ತಿದ್ದರೆಂದು ಕೇಳಿದ್ದೇನೆ.

ಕೃಷ್ಣಶಾಸ್ತ್ರಿಗಳವರು ಬಹುವರ್ಷ ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು. ಅವರಿಗೆ ಸಾರ್ವಜನಿಕ ವಿಚಾರಗಳ ಮಾಹಿತಿ ಚೆನ್ನಾಗಿತ್ತು. ಶ್ರದ್ಧೆಯಿಂದ ಕರ್ತವ್ಯ ಮಾಡುತ್ತಿದ್ದವರು ಅವರು. ಅವರು ಗೆಜೆಟಿಯರ್, ಸರಕಾರದ ವರದಿಗಳು ಮುಂತಾದ ಅಧಿಕೃತ ಗ್ರಂಥಗಳನ್ನು ಚೆನ್ನಾಗಿ ವ್ಯಾಸಂಗ ಮಾಡಿ, ಅನುಭವಸ್ಥರೊಡನೆ ಚರ್ಚೆ ನಡಸಿ, ವಿಷಯಗಳನ್ನು ಮನದಟ್ಟು ಮಾಡಿಕೊಂಡು ಸಭೆಯಲ್ಲಿ ಮಾತನಾಡುತ್ತಿದ್ದರು. ಆದದ್ದರಿಂದ ಅವರ ಮಾತನ್ನು ಎಲ್ಲರೂ ಕುತೂಹಲದಿಂದ ಆಲಿಸುತ್ತಿದ್ದರು.

ಆದರೆ ಅವರ ಭಾಷಣದಲ್ಲಿ ವಿಷಯಕ್ಕಿಂತ ಸ್ವಾರಸ್ಯಕರವಾಗಿದ್ದದ್ದು ಅವರ ಶೈಲಿ. ಅವರು ಹುಟ್ಟು ಕನ್ನಡಿಗರು ಮತ್ತು ಸಂಸ್ಕೃತ ವಿದ್ವಾಂಸರು. ಇದರ ಜೊತೆಗೆ ಸ್ವಭಾವತಃ ಹಾಸ್ಯಶೀಲರು. ಈ ಮೂರು ಅನುಕೂಲತೆಗಳೂ ಇದ್ದದ್ದರಿಂದ ಅವರ ಲಘು ಭಾಷಣದಲ್ಲಿ ಪದಸರಣಿ, ಅರ್ಥಸ್ಪಷ್ಟತೆ, ಹಾಸ್ಯ ಈ ಮೂರೂ ಸೊಗಸಿನಿಂದ ಬೆರೆತಿರುತ್ತಿದ್ದುವು.

ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ಪ್ರಜಾಪ್ರತಿನಿಧಿ ಸಭೆಯಲ್ಲಿ ಒಂದು ದಿನ ಏನೋ ಚರ್ಚೆ ಉಗ್ರವಾಗಿ ಬೆಳೆದಿತ್ತು. ಸರಕಾರದ ಒಂದಾನೊಂದು ಇಲಾಖೆಯಲ್ಲಿ ಯಾವುದೋ ವ್ಯವಹಾರ ನಡೆಯುವುದರಲ್ಲಿ ಬಹಳ ತಡವಾಗಿತ್ತು. ಅದನ್ನು ಕುರಿತು ಸದಸ್ಯರು ಕಟುವಾಗಿ ಟೀಕಿಸಿದ್ದರು. ಅದಕ್ಕೆ ಅಧಿಕಾರಿಗಳು ಆಗ್ರಹದಿಂದ ಉತ್ತರ ಹೇಳುತ್ತಿದ್ದರು. ಆ ನಡುವೆ ಕೃಷ್ಣಶಾಸ್ತ್ರಿಗಳು ಎದ್ದುನಿಂತು ಅಧ್ಯಕ್ಷರ ಅಪ್ಪಣೆಬೇಡಿ ಒಂದೆರಡು ಮಾತನ್ನಾಡುವೆನೆಂದರು. ದಿವಾನರು ಆಗಬಹುದೆಂದರು. ಕೃಷ್ಣಶಾಸ್ತ್ರಿಗಳು ಕಾದಂಬರೀ ಕಥೆಯನ್ನೆತ್ತಿ ಅದರಲ್ಲಿ (ಬಹುಶಃ) ಪುಂಡರೀಕನು ಬಾರದೆ ತಡವಾದದ್ದಕ್ಕೆ ಕಾರಣವೇನಿರಬಹುದೆಂದು ಮಹಾಶ್ವೇತೆ ಊಹಾಪೋಹ ನಡಸಿದ ಪ್ರಕರಣವನ್ನೆತ್ತಿಕೊಂಡು ಬಾಣ ಕವಿಯ ಸಂಸ್ಕೃತ ಮಹಾ ಗದ್ಯವನ್ನು ಗಮಕಧಾಟಿಯಲ್ಲಿ ಹೇಳಲಾರಂಭಿಸಿದರು. ಆರಭಿ, ಭೈರವಿ, ಕಲ್ಯಾಣಿ- ಈ ರಾಗಗಳಲ್ಲಿ ಒಂದೊಂದರಲ್ಲಿ ಎರಡೆರಡು ನಿಮಿಷವಾಯಿತು.

ಅಧ್ಯಕ್ಷರು-(ಇಂಗ್ಲಿಷಿನಲ್ಲಿ) "ಸದಸ್ಯರು ವಿಷಯವನ್ನು ಕುರಿತು ಮಾತನಾಡುತ್ತಿಲ್ಲ!"

ಕೃಷ್ಣಶಾಸ್ತ್ರಿಗಳು- "ಅದೇ ವಿಷಯ ಸ್ವಾಮಿ, ತಡವಾದದ್ದಕ್ಕೆ ಕಾರಣ!"

ಅಧ್ಯಕ್ಷರು- "ನೀವು ಹಾಡುತ್ತಿದ್ದೀರಿ."

ಕೃಷ್ಣಶಾಸ್ತ್ರಿಗಳು- "ಅದು ಹಾಡಲ್ಲ ಸ್ವಾಮಿ, ಮಾತು. ಆ ಮಾತು ಹೇಳುವ ರೀತಿ ಹಾಗೆ."

ಅಧ್ಯಕ್ಷರು- “ಹೀಗೆ ಮಾಡಿದರೆ ಹೊತ್ತಾಗುತ್ತದೆ.”

ಕೃಷ್ಣಶಾಸ್ತ್ರಿಗಳು- “ನಿಲ್ಲಿಸೆಂದು ಸಭೆ ಹೇಳಿದರೆ ನಿಲ್ಲಿಸುತ್ತೇನೆ.”

ಸಭಿಕರು- “ಇನ್ನೂ ಆಗಬೇಕು ಸ್ವಾಮಿ. ಬಹಳ ಚೆನ್ನಾಗಿದೆ. ಅವರಿಗೆ ಇನ್ನೂ ಹೊತ್ತು ಕೊಡಬೇಕು.”

ಎಲ್ಲರೂ ನಗಲಾರಂಭಿಸಿದರು. ಆ ನಗುವಿನಲ್ಲಿ ಅಧ್ಯಕ್ಷರೂ ಸೇರಿಕೊಂಡರು. ನಗುನಿಂತ ಬಳಿಕ- “Next Subject” (ಮುಂದಿನ ವಿಷಯ) ಎಂದರು. ಹಿಂದಿನ ಕೋಪದ ಟೀಕೆಗಳೆಲ್ಲ ಮರೆತುಹೋಗಿದ್ದವು.

ದಿವಾನ್ ಬ್ಯಾನರ್ಜಿಯವರ ಕಾಲದಲ್ಲಿ ಒಂದು ಸಲ ಪ್ರಜಾಪ್ರತಿನಿಧಿ ಸಭೆ ನಡೆಯುತ್ತಿದ್ದಾಗ ಮದರಾಸಿನ ಗವರ್ನರ್-ಬಹುಶಃ ಲಾರ್ಡ್ ವಿಲ್ಲಿಂಗ್‌ಡನ್ ಎಂಬಾತನು-ಸಭಾ ಕಾರ್ಯಗಳನ್ನು ನೋಡಬೇಕೆಂಬ ಕುತೂಹಲದಿಂದ ಪತ್ನೀಸಮೇತನಾಗಿ ಅಲ್ಲಿಗೆ ಬಂದನು. ಆತನಿಗೆ ತಮ್ಮ ಒಳ್ಳೆಯ ಭಾಷಣಕಾರರನ್ನು ತೋರಿಸಬೇಕೆಂಬ ಕುತೂಹಲದಿಂದ ದಿವಾನ್ ಬ್ಯಾನರ್ಜಿಯವರು ಹಾಸನದ ವೆಂಕಟೇಶಯ್ಯನವರನ್ನು ಇಂಗ್ಲಿಷಿನಲ್ಲಿ ಮಾತನಾಡಬೇಕೆಂದೂ ಕೃಷ್ಣಶಾಸ್ತ್ರಿಗಳನ್ನು ಕನ್ನಡದಲ್ಲಿ ಮಾತನಾಡಬೇಕೆಂದೂ ಕೇಳಿಕೊಂಡರು. ಆ ಸದಸ್ಯರಿಬ್ಬರೂ ಸಭೆಯ ಮುಂದಿದ್ದ ವಿಷಯವನ್ನು ಕುರಿತು ಹತ್ತು ಹತ್ತು ನಿಮಿಷ ಉಪನ್ಯಸಿಸಿದರು. ಕೃಷ್ಣಶಾಸ್ತ್ರಿಗಳು ತಮ್ಮ ಉಪನ್ಯಾಸದ ಉಪಸಂಹಾರವಾಕ್ಯದಲ್ಲಿ ವಿಲ್ಲಿಂಗ್‌ಡನ್ ದಂಪತಿಗಳಿಗೆ ಅವರು ಬಂದದ್ದಕ್ಕಾಗಿ ವಂದನೆಯನ್ನು ಹೇಳಿ ಕೂಡಲೆ ತಮ್ಮ ಜೇಬಿನೊಳಗಿನಿಂದ ಒಂದು ಹುವ್ವಿನಹಾರವನ್ನು ತೆಗೆದು ಥಟ್ಟನೆ ಹೋಗಿ ಲೇಡಿ ವಿಲ್ಲಿಂಗ್‌ಡನ್ ಕೊರಳಿಗೆ ಹಾಕಿದರು. ಆಕೆಯ ಮುಖ ಹಿಗ್ಗಿ ಹಲ್ಲು ಕಿರಿಯಿತು. ಅದಕ್ಕಿಂತ ಹೆಚ್ಚಾಗಿ ಆದದ್ದು ಸದಸ್ಯರು ಶಾಸ್ತ್ರಿಗಳ ಮೇಲೆ ಸುರಿಸಿದ ಹಾಸ್ಯದ ಮಳೆ.

ಮೇಲೆ ಹೇಳಿದ ಪೀಪಲ್ಸ್ ಕನ್ವೆನ್ಷನ್ ಪರಿಷತ್ತಿನಲ್ಲಿ ಶಾಸ್ತ್ರಿಗಳು ಉತ್ಸಾಹದಿಂದ ಭಾಗವಹಿಸಿದ್ದರು, ೧೯೦೮ನೆಯ ಇಸವಿಯ ವೃತ್ತಪತ್ರಿಕಾ ನಿರೋಧ ಶಾಸನವನ್ನು ಖಂಡಿಸುವ ನಿರ್ಣಯವನ್ನು ಶ್ರೀ ಎ.ಆರ್.ನಾಗೇಶ್ವರಯ್ಯರ್ ಅವರು ಸಭೆಯ ಮುಂದಿಟ್ಟರು. ಕೃಷ್ಣಶಾಸ್ತ್ರಿಗಳು ಅದನ್ನು ಅನುಮೋದಿಸಿ ತಮಗೆ ಸಹಜವಾದ ಸರಸ ಸರಣಿಯಲ್ಲಿ ಭಾಷಣ ಮಾಡಿದರು. ಅದರ ಸಾರಾಂಶ ಹೀಗೆ:

“ನಾನು ಹಿಂದೆ ಮಾಡಿದ ಒಂದು ಪಾಪಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಅವಕಾಶ ಈ ಹೊತ್ತು ನನಗೆ ದೊರೆತಿದೆ. ಇದಕ್ಕಾಗಿ ನಾನು ಈ ಪರಿಷತ್ತಿನ ಚಾಲಕರಿಗೆ ತುಂಬ ಕೃತಜ್ಞನಾಗಿದ್ದೇನೆ. ನಾನು ಮಾಡಿದ ಪಾಪವೇನೆಂದರೆ ಹಿಂದೆ ಈ ಶಾಸನವನ್ನು ವಿಧಿಸಿದಾಗ ನಾನು ಅದಕ್ಕೆ ಬೆಂಬಲ ಕೊಟ್ಟದ್ದು. ಆಗ ಹಾಗೆ

ಮಾಡಿದ್ದಕ್ಕೆ ಕಾರಣ ಆಗಿನ ದಿವಾನರಲ್ಲಿ ನಾನು ಇಟ್ಟಿದ್ದ ನಂಬಿಕೆ. ಅವರು ಮಹಾ ಸಮರ್ಥರು. ಆದ್ದರಿಂದ ಅವರು ಮಾಡಿದ್ದು ಸರಿಯೆಂದು ನಾನು ನಂಬಿದ್ದೆ. ಈಗ ಆ ನಮ್ಮ ಗುರುಗಳೇ ಪಲ್ಟಿ ಹೊಡೆದಿದ್ದಾರೆ. ದಿವಾನ್ ವಿ.ಪಿ. ಮಾಧವರಾಯರು ಈಚೆಗೆ ಇಂಗ್ಲೆಂಡಿಗೆ ಹೋಗಿದ್ದಾಗ ಮೈಸೂರಿನ ಪತ್ರಿಕಾ ನಿರೋಧ ಶಾಸನವು ತಾವು ಸ್ವತಂತ್ರವಾಗಿ ಬುದ್ಧಿಪೂರ್ವಕವಾಗಿ ಮಾಡಿದ ಕೆಲಸವಲ್ಲವೆಂದೂ ತಮಗೆ ಅದು ಇಷ್ಟವಲ್ಲದಿದ್ದರೂ ಇಲ್ಲಿಯ ಬ್ರಿಟಿಷ್ ಅಧಿಕಾರಿಗಳ ಒತ್ತಾಯಕ್ಕಾಗಿ ಮಾಡಲಾದದ್ದೆಂದೂ ಹೇಳಿಕೆ ಕೊಟ್ಟಿದ್ದಾರೆ. ಗುರುಗಳು ಹೀಗೆ ಸ್ಥಾನ ಬದಲಾಯಿಸಿದ ಮೇಲೆ ಶಿಷ್ಯನು ಇದ್ದಂತೆಯೇ ಇರುವುದು ಸರಿಯೆ? ಆದ ಕಾರಣ ಈಗ ನಾನು ಪ್ರಾಯಶ್ಚಿತ್ತರೂಪವಾಗಿ ತಮ್ಮೆದುರಿಗೆ ನಿಂತು ನನ್ನ ಹಿಂದಿನ ತಪ್ಪನ್ನು ಒಪ್ಪಿಕೊಳ್ಳುತ್ತಿದ್ದೇನೆ. ಈ ವೃತ್ತಪತ್ರಿಕಾನಿರ್ಬಂಧ ಶಾಸನ ಅಯುಕ್ತವಾದದ್ದು ತೊಲಗಿಹೋಗಬೇಕಾದದ್ದು."

ಸಭೆಯಿಂದ ಆ ನಿರ್ಣಯ ಅಂಗೀಕೃತವಾಯಿತು. ಎಲ್ಲರಿಗೂ ಸಂತೋಷವಾಯಿತು.

ಅತ್ತಿಕುಪ್ಪೆ ಕೃಷ್ಣಶಾಸ್ತ್ರಿಗಳು ಕಷ್ಟಕ್ಕೆ ಸಿಕ್ಕಿದವರಲ್ಲಿ ಸಹಾನುಭೂತಿಯುಳ್ಳವರು. ಉಪಕಾರ ಪ್ರವೃತ್ತಿಯುಳ್ಳವರು. ವಾಗ್ರಸಿಕರು. ಅಂಥವರು ಸಾರ್ವಜನಿಕ ಸಂಸ್ಥೆಗೆ ಆಕರ್ಷಣಶಕ್ತಿಯನ್ನು ತರಬಲ್ಲವರು.

## ೧೯

# ಡಿ. ವೆಂಕಟರಾಮಯ್ಯನವರು

೧೯೦೭-೮ರ ಸುಮಾರಿನಲ್ಲಿ ಬೆಂಗಳೂರಿನ ಸಾರ್ವಜನಿಕ ಪುರುಷರಲ್ಲಿ ಮೊದಲು ಗಣನೆಗೆ ಬರತಕ್ಕವರೆಂದರೆ ಅಡ್ವೊಕೇಟ್ ಡಿ.ವೆಂಕಟರಾಮಯ್ಯನವರು. ಮಲ್ಲೇಶ್ವರದಲ್ಲಿ ಒಂದು ರಸ್ತೆಯ ಹೆಸರು ಅವರ ನೆನಪನ್ನು ಶಾಶ್ವತಪಡಿಸಿದೆ. ಆ ರಸ್ತೆಯಲ್ಲಿ ಅವರು ಮನೆಕಟ್ಟುವುದಕ್ಕೆ ಮುಂಚೆ ಬಳೆಪೇಟೆಯ ಒಂದು ಅಡ್ಡಬೀದಿಯಲ್ಲಿ 'ರತ್ನಾಕರ' ಎಂಬ ಮನೆಯಲ್ಲಿ ವಾಸವಾಗಿದ್ದರೆಂದು ಕೇಳಿದ್ದೇನೆ.

ಬೆಂಗಳೂರಿನ ಅಡ್ವೊಕೇಟರುಗಳಲ್ಲಿ ಅವರು ಅಗ್ರಶ್ರೇಣಿಯಲ್ಲಿದ್ದವರು. ಆಗ ವರ್ತಕ ಮಂಡಲಿಯಲ್ಲಿ ಏಳುತ್ತಿದ್ದ ಭಾರಿ ಭಾರಿ ಮೊಕದ್ದಮೆಗಳಲ್ಲೆಲ್ಲ ವೆಂಕಟರಾಮಯ್ಯನವರು ಒಂದು ಪಕ್ಷಕ್ಕೆ ಅಲ್ಲದಿದ್ದರೆ ಇನ್ನೊಂದು ಪಕ್ಷಕ್ಕೆ ಲಾಯರಾಗಿರುತ್ತಿದ್ದರು. ಅಷ್ಟೇ ಅಲ್ಲದೆ ಅನೇಕ ಬಾರಿ ಸಾಹುಕಾರರು-ಮಂಡಿ ಕಾಳಪ್ಪನವರು, ಮಂಡಿ ಸಿದ್ಧರಾಮಣ್ಣನವರು, ಇಂಥವರು-ವೆಂಕಟರಾಮಯ್ಯನವರನ್ನು ಕಾಯಂ ಹಿತಾಲೋಚಕರನ್ನಾಗಿ ಇರಿಸಿಕೊಂಡಿರುತ್ತಿದ್ದರು. ಲಕ್ಷಾಂತರ ರೂಪಾಯಿ ಬಾಳುವ ವಹಿವಾಟಿನ ಆಸ್ತಿ ವಿಭಾಗ, ದಾಯಾದರ ತಕರಾರು, ಮೈನರುಗಳ ಹಕ್ಕುದಾರಿ, ಲೇವಾದೇವಿ, ನಿಧಿನಿಕ್ಷೇಪ, ಧರ್ಮಕಾರ್ಯ- ಈ ಎಲ್ಲವನ್ನೂ ಅವರು ವೆಂಕಟರಾಮಯ್ಯನವರ ಆಡಳಿತಕ್ಕೆ ಒಪ್ಪಿಸಿಬಿಟ್ಟಿದ್ದರು. ಅಷ್ಟು ನಂಬಿಕೆ ಆ ಸಾಹುಕಾರರಿಗೆ ವೆಂಕಟರಾಮಯ್ಯನವರ ಪ್ರಾಮಾಣಿಕತೆಯಲ್ಲಿ ಮತ್ತು ದೊಡ್ಡತನದಲ್ಲಿ. ಮೋಕ್ಷಗುಂಡಂ ರಾಮಚಂದ್ರರಾಯರವರು ವೆಂಕಟರಾಮಯ್ಯನವರ ಜೊತೆಯಲ್ಲಿ ವಕೀಲಿ ಕೆಲಸ ಮಾಡುತ್ತಿದ್ದರು.

ನನಗೆ ಡಿ. ವೆಂಕಟರಾಮಯ್ಯನವರ ಪರಿಚಯವಾದದ್ದು ಅವರ ಮಲ್ಲೇಶ್ವರದ ಮನೆಯಲ್ಲಿ. ಆಗ ದೇಶಭಕ್ತರ ತಿಥಿಹಬ್ಬಗಳ ಹುಚ್ಚು ನನ್ನ ತಲೆಯನ್ನು ತಿನ್ನುತ್ತಿತ್ತು. ಮಹಾದೇವ ಗೋವಿಂದ ರಾನಡೆಯವರ ಜ್ಞಾಪಕೋತ್ಸವವನ್ನು ನಡಸಬೇಕೆಂದು ಒಂದು ಸಂಕಲ್ಪ. ಅದಕ್ಕಾಗಿ ನಾಲ್ಕಾರು ಮಂದಿ ಮಿತ್ರರಲ್ಲಿ ಆಲೋಚನೆ ಮಾಡಿದೆ. ಜನೋಪಕಾರಿ ದೊಡ್ಡಣ್ಣನವರ ಸಭಾಮಂದಿರದ ಉಪಯೋಗಕ್ಕೆ ಅನುಮತಿಯನ್ನೂ ಪಡೆದದ್ದಾಯಿತು. ಯಾರನ್ನು ಅಧ್ಯಕ್ಷ ಸ್ಥಾನಕ್ಕೆ ಕರೆಯಬೇಕೆಂಬ ಚರ್ಚೆಯಲ್ಲಿ, ಸರಕಾರದ ಹುದ್ದೆದಾರರು ಬೇಡವೆಂದೂ ಸಾರ್ವಜನಿಕ ಕಾರ್ಯ ಮಾಡುತ್ತಿರುವವರೇ ಬೇಕೆಂದೂ ನಾನು

ವಾದಿಸಿದೆ. ಹಾಗಾದರೆ ಡಿ. ವೆಂಕಟರಾಮಯ್ಯನವರು ಒಬ್ಬರೇ ತಕ್ಕವರೆಂದು ನನ್ನ ಮಿತ್ರ ಮಂಡಲಿಯಲ್ಲಿ ತೀರ್ಮಾನವಾಯಿತು.

ಆ ಮಂಡಲಿಯ ಪೈಕಿ ಕೆ.ಎಸ್. ಕೃಷ್ಣಯ್ಯರ್ ಅವರೊಬ್ಬರು. ಅವರ ಮನೆಯೇ ನಮ್ಮ ಕಾರ್ಯಕ್ಷೇತ್ರ. ಅಲ್ಲಿ ನಾನಿದ್ದಾಗ ವಾಜಪೇಯಂ ವೆಂಕಟಸುಬ್ಬಯ್ಯನವರೂ ಮತ್ತು ಮೋಕ್ಷಗುಂಡಂ ಕೃಷ್ಣಮೂರ್ತಿಗಳೂ ಆ ಕಡೆ ಬಂದರು. ವಾಜಪೇಯಂ ವೆಂಕಟಸುಬ್ಬಯ್ಯನವರು ಆಗ್ಗೆ ಎರಡು ವರ್ಷಗಳ ಹಿಂದೆ ಪೂನಾಕ್ಕೆ ಹೋಗಿ ಅಲ್ಲಿ ಗೋಖಲೆಯವರು ಸ್ಥಾಪಿಸಿದ್ದ ಸರ್ವೆಂಟ್ಸ್ ಆಫ್ ಇಂಡಿಯ ಸೊಸೈಟಿ'ಯ ಸದಸ್ಯರಾಗಿ ಸೇರಿದ್ದರು. ಯಾವುದೋ ಗೃಹಕೃತ್ಯಕ್ಕಾಗಿ ಅವರು ನಾನು ಹೇಳುವ ವೇಳೆಗೆ ಬೆಂಗಳೂರಿಗೆ ಬಂದಿದ್ದು, ಮಾರ್ಗವಶಾತ್ ನನಗೆ ಸಿಕ್ಕಿದರು.

ಅವರೆಲ್ಲರ ಸಲಹೆಯಂತೆ ನಾನು ಡಿ. ವೆಂಕಟರಾಮಯ್ಯನವರ ಮನೆಗೆ ಹೋದೆ. ಆಗ ನಾನು ಧರಿಸಿದ್ದ ಉಡುಪನ್ನು ವರ್ಣಿಸುವುದು ಇಲ್ಲಿ ಸಂಗತವಾಗಿದೆ. ಮೊಣಕಾಲುವರೆಗೆ ಬರುವ ಅರೆನಿಲುವಂಗಿಯನ್ನು ತೊಟ್ಟಿದ್ದೆ. ತಲೆಗೆ ಒಂದು ಗುಲಾಬಿರಂಗಿನ ರೇಷ್ಮೆಯ ಜರತಾರಿ ವಸ್ತ್ರವನ್ನು ಪಂಜಾಬಿಯವರು ಸುತ್ತುವಂತೆ ತಿರಿಕೆಯ ಸುರುಳಿಯ ಗೋಪುರವಾಗಿ ಸೊಟ್ಟಸೊಟ್ಟವಾಗಿ ಸುತ್ತಿ, ಒಂದು ಕಡೆಯ ಸೆರಗನ್ನು ಒಂದು ಮೊಳದುದ್ದ ಚುಂಗು ಬಿಟ್ಟಿದ್ದೆ. ಅದು ಎದೆಯ ಮೇಲೆ ಹಾರಾಡುತ್ತಿತ್ತು. ವೆಂಕಟರಾಮಯ್ಯನವರ ಮನೆ ವರಾಂಡದಲ್ಲಿ ನಿಂತು ಕದ ತಟ್ಟಿದೆ. ಅವರೇ ಒಳಗಡೆಯಿಂದ ಬಂದು ಬಾಗಿಲ ಚೌಕಟ್ಟಿನಲ್ಲಿಯೇ ನಿಂತು, ಇಂಗ್ಲಿಷಿನಲ್ಲಿ "ನೀವು ಯಾರು? ದಯವಿಟ್ಟು ಹೇಳಿ" ಎಂದು ಕೇಳಿದರು. ನಾನು ನನ್ನ ಹೆಸರನ್ನೂ ಕಸಬನ್ನೂ ತಿಳಿಸಿದೆ.

ಅವರು "ನೀವು ಯಾವ ಕಡೆಯವರು?" ಎಂದು ಕೇಳಿದರು. ನಾನು "ಮೈಸೂರು ದೇಶದವನೇ" ಎಂದು ಹೇಳಿದೆ. ಅವರು "ನಿಮ್ಮ ಹೆಸರೇನೋ ಇಲ್ಲಿಯದರ ಹಾಗಿದೆ. ಆದರೆ ಈ ಕಾಲದಲ್ಲಿ ಆಷ್ಟರಿಂದಲೇ ಮನುಷ್ಯರನ್ನು ಗುರುತು ಮಾಡುವುದಕ್ಕಾಗುವುದಿಲ್ಲ. ನಿಮಗೆ ಕನ್ನಡ ಮಾತನಾಡಲಿಕ್ಕೆ ಬರುತ್ತದೆಯೆ?" ಎಂದರು.

ನಾನು ಕನ್ನಡದಲ್ಲಿಯೇ ಉತ್ತರ ಹೇಳಿದೆ.

ಅವರು, "ನಿಮ್ಮ ಬಂಧುಗಳು ಬೆಂಗಳೂರಿನಲ್ಲಿ ಯಾರಿದ್ದಾರೆ?" ಎಂದು ಕೇಳಿದರು. ನಾನು "ಮುನ್ಸಿಫ್ ಕೆ. ಲಕ್ಷ್ಮೀನಾರಣಯ್ಯನವರು" ಎಂದು ಹೇಳಿದೆ.

ಆಮೇಲೆ ನಾನು ಅವರಲ್ಲಿಗೆ ಹೋಗಿದ್ದ ಕಾರ್ಯವನ್ನು ವಿವರಿಸಿದೆ. ವೆಂಕಟರಾಮಯ್ಯನವರು "ಎರಡು ಮೂರುದಿನ ಬಿಟ್ಟು ಬನ್ನಿ. ಯೋಚನೆ ಮಾಡಿ ಹೇಳುತ್ತೇನೆ" ಎಂದರು. ಅಲ್ಲಿಂದ ಎರಡು ಮೂರು ದಿನಗಳೊಳಗೆ ಲಕ್ಷ್ಮೀನಾರಣಯ್ಯನವರು ನನಗೆ ಹೇಳಿ ಕಳುಹಿಸಿ. "ಇದೇನು ನಿನ್ನ ವೇಷ! ಆ ತಲೇ ಮೇಲಿನ ಸೊಟ್ಟ ವಸ್ತ್ರ ಕಿತ್ತುಹಾಕಿ ಎಲ್ಲರ ಹಾಗೂ ಇದ್ದರೆ ಏನಾಗುತ್ತೆ?" ಎಂದು ಛೀಮಾರಿ ಹಾಕಿದರು. ನನಗೆ ಅರ್ಥವಾಗಲಿಲ್ಲ. ಆಗ ಅವರು ಹೇಳಿದರು: "ನೀನು ವರ್ತಮಾನ ಪತ್ರಿಕೆಗಳ ಮನುಷ್ಯ. ಈಗ ದೇಶದಲ್ಲಿ ರಾಜಕೀಯದ ಚಳವಳಿ ನಡೆಯುತ್ತಿರುವುದು ನಿನಗೆ ಗೊತ್ತಿಲ್ಲವೆ? ಪಂಜಾಬು ಮೊದಲಾದ ಕಡೆಯಿಂದ ಕ್ರಾಂತಿಕಾರರು ಬಂದಿದ್ದಾರೆ ಎಂದು ಎಲ್ಲರೂ ಹೇಳಿಕೊಳ್ಳುತ್ತಾರೆ. ಅವರಿಗೆ ಪ್ರತಿಯಾಗಿ ಸರಕಾರದವರು ಬೇಹುಗಾರರನ್ನು ಕಳಿಸಿದ್ದಾರಂತೆ. ಅವರೂ ಇವರೂ ವೇಷ ಹಾಕಿಕೊಂಡು ಊರೂರಲ್ಲಿ ಸುತ್ತುತ್ತಿದ್ದಾರೆ. ಇಂಥಾ ಕಾಲದಲ್ಲಿ ನೀನು ಸೊಟ್ಟ ರುಮಾಲು ಹಾಕಿಕೊಂಡು ತಿರುಗಾಡುತ್ತಿದ್ದರೆ ಯಾರಾದರೂ ನಿನ್ನನ್ನು ಕ್ರಾಂತಿಕಾರನೆಂದೋ ಗೂಢಚಾರನೆಂದೋ ತಿಳಿದುಕೊಳ್ಳುವುದಿಲ್ಲವೆ? ಡಿ.ವೆಂಕಟರಾಮಯ್ಯನವರಿಗೆ ಅಂಥ ಗಾಬರಿಯಾಯಿತು ನಿನ್ನನ್ನು ನೋಡಿ" ಎಂದರು.

ಅದರ ಅಂತರರ್ಥ ಆಗ ನನ್ನ ಮನಸ್ಸಿಗೆ ಬಂತು. ಅದರಂತೆ ಮುಂದಿನ ಶನಿವಾರ ವೇಷವನ್ನು ಕೊಂಚ ಬದಲಾಯಿಸಿ ವೆಂಕಟರಾಮಯ್ಯನವರ ಮನೆಗೆ ಹೋದೆ. ಆ ವೇಳೆಗೆ ಅವರು ಲಕ್ಷ್ಮೀನಾರಣಯ್ಯನವರಿಂದ ನನ್ನ ಸಮಾಚಾರವನ್ನು ತಿಳಿದುಕೊಂಡಿದ್ದರು. ನನ್ನನ್ನು ನೋಡಿದ ಕೂಡಲೆ ನಕ್ಕು ತಾವು ಸಂತೋಷದಿಂದ ರಾನಡೆ ಸಭೆಗೆ ಬರುವುದಾಗಿ ತಿಳಿಸಿದರು.

ಅಲ್ಲಿಂದಾಚೆಗೆ ಬಳಕೆ ಬೆಳೆಯಿತು.

ವೆಂಕಟರಾಮಯ್ಯನವರ ಆಪ್ತ ಮಿತ್ರರೆಂದರೆ ಅವರ ಎದುರು ನೆರೆಮನೆಯ ಎಚ್.ವಿ.ನಂಜುಂಡಯ್ಯನವರು. ಅವರಿಬ್ಬರೂ ಕಲೆತು ಮಾತನಾಡದ ದಿವಸವೇ ಇರಲಿಲ್ಲ. ಹೊರಗಿನವರಿಗೆ ಆ ಇಬ್ಬರೂ ಒಂದೇ ಕುಟುಂಬದವರೋ ಎಂಬಂತೆ ತೋರುತ್ತಿತ್ತು. ಎಚ್.ವಿ. ನಂಜುಂಡಯ್ಯನವರು ಆ ಕಾಲದಲ್ಲಿ ಎಂ. ಎ., ಎಂ. ಎಲ್., ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಬಹುಮುಖವಾದ ವಿದ್ವತ್ತುಳ್ಳವರೆಂದು ಪ್ರಸಿದ್ಧರಾಗಿ ಹೈಕೋರ್ಟಿನಲ್ಲಿ ಮುಖ್ಯ ಜಡ್ಜಿ ಪದವಿಯನ್ನೂ, ಸರಕಾರದಲ್ಲಿ ಕೌನ್ಸಿಲರ್ ಪದವಿಯನ್ನೂ ನಿರ್ವಹಿಸಿ ಕಡೆಗೆ ವಿಶ್ವವಿದ್ಯಾನಿಲಯದ ಮೊದಲನೆಯ ವೈಸ್ ಚಾನ್ಸಲರ್ ಆದವರು. ಆ ಮಹನೀಯರನ್ನು ಕುರಿತು ಪ್ರತ್ಯೇಕ ಲೇಖನವೇ ಇದೆಯಷ್ಟೆ. ಇಲ್ಲಿ ಅವರ ಹೆಸರು

ಬಂದಿರುವುದು ಪ್ರಾಸಂಗಿಕವಾಗಿ-ಡಿ. ವೆಂಕಟರಾಮಯ್ಯನವರು ಮೇಧಾಶಕ್ತಿಯಲ್ಲಿಯೂ ಸಭ್ಯತೆಯಲ್ಲಿಯೂ ಎಂಥ ಉನ್ನತ ಪಂಕ್ತಿಯವರೆಂಬುದನ್ನು ತೋರಿಸುವುದಕ್ಕೋಸ್ಕರ.

ಬೆಂಗಳೂರಿನಲ್ಲಿ ನಡೆದ ಎಲ್ಲ ಸಾರ್ವಜನಿಕ ಸಮಾರಂಭಗಳಲ್ಲಿಯೂ ಡಿ.ವೆಂಕಟರಾಮಯ್ಯನವರಿಗೆ ಅಗ್ರಸ್ಥಾನ ದೊರೆಯುತ್ತಿತ್ತು. ಸತ್ರ ಕಟ್ಟಿಸುವುದು, ದೇವಾಲಯದ ಜೀರ್ಣೋದ್ಧಾರ, ಅನ್ನಸಂತರ್ಪಣೆ-ಮೊದಲಾದ ಧರ್ಮಕಾರ್ಯಗಳು ಎಲ್ಲಿ ನಡೆದರೂ ಅದರದರ ಚಾಲಕರಿಗೆ ಮುಖ್ಯ ಹಿತಸೂಚಕರಾಗಿದ್ದವರು ಡಿ.ವೆಂಕಟರಾಮಯ್ಯನವರು.

ಡಿ.ವೆಂಕಟರಾಮಯ್ಯನವರು ದೊಡ್ಡ ವಾಗ್ಮಿಯೆಂದು ನಾನು ಹೇಳಲಾರೆ. ಅವರ ಬಾಯಿಂದ ಮಾತು ಹೊರಡುತ್ತಿದ್ದದ್ದು ಅವಸರದಿಂದ ಅಲ್ಲ, ರಭಸದಿಂದ ಅಲ್ಲ, ಕಾವಿನಿಂದ ಅಲ್ಲ; ಅವರು ಸಾವಕಾಶವಾಗಿ ಮೆಲ್ಲನೆಯೇ ಮಾತನಾಡುತ್ತಿದ್ದವರು. ಆದರೆ ಆಡಿದ ಮಾತನ್ನು ಆಲೋಚನೆಯಿಂದ ಆಡುತ್ತಿದ್ದವರು. ಅವರಿಗೆ ಅಷ್ಟು ಪ್ರಭಾವ ಬಂದದ್ದು ವಾಗ್ವಿಜೃಂಭಣೆಯಿಂದಲ್ಲ, ಅವರ ಆಲೋಚನ ಚತುರತೆಯಿಂದ ಮತ್ತು ನೀತಿ ಸಮುನ್ನತಿಯಿಂದ.

ಅವರು ತಾಳ್ಮೆವಂತರು; ಯಾವುದರಲ್ಲಿಯೂ ದುಡುಕುವ ಸ್ವಭಾವದವರಲ್ಲ, ಮತ್ತು ಉದಾರಿಗಳು; ಜನವನ್ನು ತೊರೆದುಕೊಳ್ಳುವವರಲ್ಲ. ಹೀಗೆ ಹೇಳಿದ್ದರಿಂದ ಅವರನ್ನು ಯಾರಾದರೂ ಸುಲಭವಾಗಿ ತಮ್ಮ ದಾರಿಗೆ ತಿರುಗಿಸಿಕೊಳ್ಳಲಾಗುತ್ತಿತ್ತೆಂದು ಅರ್ಥವಲ್ಲ. ಅವರು ತತ್ತ್ವೈಕನಿಷ್ಠರು. ಆದರೆ ಆ ನಿಷ್ಠೆಯಲ್ಲಿ ಕಟುತೆ ಇರಲಿಲ್ಲ.

೧೯೦೭ರಲ್ಲಿ ದಿವಾನ್ ವಿ.ಪಿ. ಮಾಧವರಾಯರು 'ನ್ಯೂಸ್ ಪೇಪರ್ಸ್ ರೆಗ್ಯುಲೇಷನ್' ಎಂಬ ವೃತ್ತ ಪತ್ರಿಕಾ ನಿರೋಧಕ ಶಾಸನವನ್ನು, ಆಗ್ಗೆ ಕೆಲವು ತಿಂಗಳ ಹಿಂದೆ ಪ್ರಾರಂಭವಾಗಿದ್ದ ಲೆಜಿಸ್ಲೆಟಿವ್ ಕೌನ್ಸಿಲ್ ಸಭೆಯಿಂದ ಅಂಗೀಕಾರ ಮಾಡಿಸಿದ್ದರು. ಆ ಶಾಸನಕ್ಕೆ ದೇಶದಾದ್ಯಂತವೂ ಪ್ರತಿಭಟನೆ ಮಾಡಿತು. ಮೈಸೂರು ಸಂಸ್ಥಾನದೊಳಗಿನ ಕನ್ನಡ ಇಂಗ್ಲೀಷ್ ಪತ್ರಿಕೆಗಳು ಮಾತ್ರವೇ ಅಲ್ಲದೆ ಇಂಡಿಯ ದೇಶದ ಎಲ್ಲ ಭಾಗಗಳ ವೃತ್ತ ಪತ್ರಿಕೆಗಳೂ ಆ ಶಾಸನವನ್ನು ವಿರೋಧಿಸಿದ್ದವು. ಪ್ರಜಾಪ್ರಮುಖರೆಲ್ಲರೂ ಏಕವಾಕ್ಯದಿಂದ ಅದನ್ನು ಖಂಡಿಸಿದರು. ಮೈಸೂರು ಸಂಸ್ಥಾನದಲ್ಲಿ ಆ ಪ್ರತಿಭಟನೆಯ ಮುಂದಾಳುಗಳಾಗಿ ನಿಂತವರಲ್ಲಿ ನಾಲ್ವರು ಪ್ರಸಿದ್ಧರು: ಮೈಸೂರಿನ ವೆಂಕಟಕೃಷ್ಣಯ್ಯನವರು, ಬೆಂಗಳೂರಿನ ಡಿ.ವೆಂಕಟರಾಮಯ್ಯನವರು, ಶಿವಮೊಗ್ಗೆಯ ಎಸ್.ಆರ್. ಬಾಲಕೃಷ್ಣರಾಯರು ಮತ್ತು ಕೆ.ಶಂಕರನಾರಾಯಣರಾಯರು. ಈ ನಾಲ್ವರೂ

ಪ್ರಜಾಪ್ರತಿನಿಧಿ ಸಭೆಯಲ್ಲಿ ವೃತ್ತಪತ್ರಿಕಾ ಸ್ವಾತಂತ್ರ್ಯಕ್ಕಾಗಿ ನಿಂತು ರಗಳೆ ಎಬ್ಬಿಸಿದರು. ಆ ಸಭೆಯ ಅಧಿಕ ಸಂಖ್ಯೆಯ ಸದಸ್ಯರು ಇವರ ಮಾರ್ಗದರ್ಶಿತ್ವವನ್ನು ಅಂಗೀಕರಿಸಿದರು.

ಇದರ ಫಲಿತಾಂಶ ವಿಚಿತ್ರವಾಯಿತು. ಮಾರನೆಯ ವರ್ಷ ದಿವಾನ್ ವಿ.ಪಿ.ಮಾಧವರಾಯರು ಪ್ರಜಾಪ್ರತಿನಿಧಿ ಸಭೆಗೆ ಒಂದು ಹೊಸ ಅಧಿಕಾರವನ್ನು ಅನುಗ್ರಹಿದರು: ಸಭೆಯು ತನ್ನ ಸದಸ್ಯರ ಪೈಕಿ ಇಬ್ಬರನ್ನು ಚುನಾಯಿಸಿ ಆ ಇಬ್ಬರನ್ನು ಲೆಜಿಸ್ಲೆಟಿವ್ ಕೌನ್ಸಿಲ್ಲಿನ ಸದಸ್ಯರನ್ನಾಗಿ ಅಂಗೀಕರಿಸುವಂತೆ ಸರಕಾರಕ್ಕೆ ಶಿಫಾರಸು ಮಾಡತಕ್ಕದ್ದು. ಈ ಹೊಸ ಅಧಿಕಾರಕ್ಕಾಗಿ ಸಭಿಕರು ಸಂಭ್ರಮಪಟ್ಟರು. ಪತ್ರಿಕಾ ನಿರೋಧ ಶಾಸನದಿಂದ ಜನಕ್ಕೆ ಆಗಿದ್ದ ಅಸಮಾಧಾನವನ್ನು ಮರೆಯಿಸುವುದಕ್ಕಾಗಿ ದಿವಾನರವರು ಈ ವರಪ್ರಸಾದದ ಉಪಾಯವನ್ನು ಹೂಡಿರಬಹುದೆ?-ಎಂಬ ಸಂದೇಹ ಆಗ ಕೆಲವು ಮಂದಿಯ ಮನಸ್ಸಿಗೆ ತೋರದಿರಲಿಲ್ಲ. ಹೇಗಾದರಾಗಲಿ ಬಂದ ಅಧಿಕಾರವನ್ನು ಸರಿಯಾಗಿ ವಿನಿಯೋಗಿಸಬೇಕೆಂದು ಆ ಸಭೆ ತನ್ನ ಸದಸ್ಯರಿಬ್ಬರ ಹೆಸರುಗಳನ್ನು ಸೂಚಿಸಿತು. ಆ ಇಬ್ಬರಿಗೆ ಎದುರಾಳಾಗಿ ನಿಲ್ಲುವ ಯೋಚನೆ ಆ ಸಭಿಕರಲ್ಲಿ ಯಾರಿಗೂ ಬರಲೇ ಇಲ್ಲ. ಆ ಇಬ್ಬರು ಯಾರು? ಯಾರು ದಿವಾನ್ ವಿ.ಪಿ.ಮಾಧವರಾಯರ ಶಾಸನವನ್ನು ತೀವ್ರವಾಗಿ ಖಂಡಿಸಿದ್ದರೋ ಆ ವೆಂಕಟಕೃಷ್ಣಯ್ಯ ಆ ವೆಂಕಟರಾಮಯ್ಯನವರುಗಳೇ.

ಇದರಿಂದ ದಿವಾನ್ ವಿ.ಪಿ.ಮಾಧವರಾಯರಿಗೆ ಆಗ್ರಹ ಬಂದದ್ದು ಸ್ವಾಭಾವಿಕ ತಾನೆ! ಅವರು ಪ್ರತಿನಿಧಿ ಸಭೆಯ ಚುನಾವಣೆಯನ್ನು (ವೀಟೋ) ತಿರಸ್ಕಾರ ಮಾಡಿದರು. ಸಭೆಯಲ್ಲಿ ಮತ್ತಷ್ಟು ಉಲ್ಲೋಲ ಕಲ್ಲೋಲವಾಯಿತು.

ಸಭೆಯಲ್ಲಿ ಎರಡು ಪಕ್ಷಗಳಾದುವು-ಒಂದು ಸರಕಾರದ ಕಡೆಯದು, ಇನ್ನೊಂದು ವಿರೋಧದ್ದು. ಹೀಗೆ ಸಭೆಯನ್ನು ಒಡೆಯಲು ಕೆಲವು ಮಂದಿ ಸರಕಾರಿ ಅಧಿಕಾರಿಗಳೇ ಗೂಢಪ್ರೇರಕರಾಗಿ ಒಳಸಂಚು ಮಾಡಿದರು.

ಸರಕಾರದ ಪಕ್ಷದವರು ಕೊಟ್ಟ ಜವಾಬು ಹೀಗೆ: "ಪ್ರಜಾಪ್ರತಿನಿಧಿ ಸಭೆಯ ಅಧಿಕಾರವು ಚುನಾಯಿಸುವುದೆಷ್ಟೋ ಅಷ್ಟೇ. ಆ ಚುನಾವಣೆಯನ್ನು ಸರಕಾರ ಅಂಗೀಕರಿಸಲೇ ಬೇಕೆಂಬ ನಿರ್ಬಂಧ ಸರಕಾರದ ಹುಕುಂ ನಾಮೆಯಲ್ಲಿಲ್ಲ. ಕೆಲವು ಕಾರಣಗಳಿಂದ ಈಗ ನಡೆದ ಚುನಾವಣೆಯಲ್ಲಿ ಕ್ರಮ ತಪ್ಪಿದೆಯೆಂದು ಸರಕಾರದ ತಿಳಿವಳಿಕೆ. ಅದರಿಂದ ಈ ಚುನಾವಣೆಯನ್ನು ನಿರಾಕರಿಸಬೇಕಾಯಿತು. ಆದರೆ

ಅದರಿಂದ ಸಭೆಗೆ ಕೊಟ್ಟ ಅಧಿಕಾರವನ್ನೇ ಕಿತ್ತುಕೊಂಡಂತಾಯಿತೆಂದು ಭಾವಿಸತಕ್ಕದ್ದಲ್ಲ. ಸಭೆ ಮತ್ತೊಂದು ಸಲ ಚುನಾವಣೆ ನಡಸಲಿ."

ಮೊದಲ ಸಾರಿಯ ಚುನಾವಣೆಯಲ್ಲಿ ಯಾರೂ ಪ್ರತಿಸ್ಪರ್ಧಿಗಳಾಗಿ ಮುಂದೆ ಬಾರದಿದ್ದದ್ದೇ ಒಂದು ಲೋಪವೆಂದು ಸರಕಾರದ ಪಕ್ಷದವರು ಆಡಿಕೊಳ್ಳುತ್ತಿದ್ದರು. ೧೯೦೯ರ ದಸರಾ ಅಧಿವೇಶನದಲ್ಲಿ ಎರಡನೆಯ ಸಲದ ಚುನಾವಣೆ ನಡೆಯಿತು (೩೦-೧೦-೧೯೦೯). ಅದರಲ್ಲಿ ಸಂಸ್ಥಾನದ ಪೂರ್ವ ವಿಭಾಗಕ್ಕೊಬ್ಬರು, ಪಶ್ಚಿಮ ವಿಭಾಗಕ್ಕೊಬ್ಬರು ಪ್ರವೃತ್ತರಾಗತಕ್ಕದ್ದೆಂದು ಸರಕಾರದಿಂದ ವಿಧಾಯಕವಾಗಿತ್ತು. ಅದರಂತೆ ಪೂರ್ವಭಾಗಕ್ಕಾಗಿ ನಾಲ್ಕು ಮಂದಿಯೂ ಪಶ್ಚಿಮ ಭಾಗಕ್ಕಾಗಿ ಐದು ಮಂದಿಯೂ ಅಭ್ಯರ್ಥಿಗಳಾಗಿ ನಿಂತರು. ಈ ಸಾರಿ ಎಂ.ವೆಂಕಟಕೃಷ್ಣಯ್ಯನವರು ಕೆಲವು ವೈಯಕ್ತಿಕ ದಾಕ್ಷಿಣ್ಯಗಳಿಗಾಗಿ ಅಭ್ಯರ್ಥಿಯಾಗಲಿಲ್ಲ. ಅಭ್ಯರ್ಥಿಗಳಾದವರಲ್ಲಿ ಕೆಲವರು ಸರಕಾರದ ಕಡೆಯಿಂದ ಪ್ರೋತ್ಸಾಹ ಪಡೆದಿದ್ದವರು. ಪೂರ್ವಭಾಗಕ್ಕಾಗಿ ಸ್ಥಾನಾರ್ಥಿಗಳಾಗಿದ್ದ ನಾಲ್ವರಲ್ಲಿ ಡಿ. ವೆಂಕಟರಾಮಯ್ಯನವರೇ ಗೆದ್ದು ಬಂದರು. ಪಶ್ಚಿಮ ಭಾಗದವರಲ್ಲಿ ಮೈಸೂರಿನ ಅಡ್ವೊಕೇಟ್ ಎ.ರಾಮಣ್ಣನವರು ಜಯ ಪಡೆದರು. ಹೀಗೆ ಎರಡು ಕಡೆಯೂ ಸರಕಾರದ ಮಿತ್ರರಿಗೆ ಪರಾಭವವಾಯಿತು. ಪ್ರಜಾಪಕ್ಷಕ್ಕೆ ಸಂತೋಷವಾಯಿತು. ದೇಶದಾದ್ಯಂತವೂ ಪ್ರತಿನಿಧಿ ಸಭೆಯನ್ನು ಅಭಿನಂದಿಸಿತು.

೧೯೧೦ರಲ್ಲಿ ಮತ ಜಾತಿಗಳ ದಾಯಾದಾನರ್ಹತಾ ನಿವಾರಣೆಯ ಶಾಸನವೊಂದನ್ನು ರಚಿಸುವ ಯೋಚನೆ ಸರಕಾರಕ್ಕೆ ಬಂದಿತ್ತು. ಆ ಶಾಸನದ ಉದ್ದೇಶವು ಸ್ಥೂಲವಾಗಿ ಏನೆಂದರೆ, ಹಿಂದೂ ಮತಸ್ಥನೊಬ್ಬನು ಬೇರೆ ಮತಕ್ಕೆ ಸೇರಿಕೊಂಡರೂ ಅವನಿಗೆ ತನ್ನ ಪಿತ್ರಾರ್ಜಿತ ಆಸ್ತಿಯಲ್ಲಿರುವ ಹಕ್ಕು ನಷ್ಟವಾಗಿ ಹೋಗದಂತೆ ಮಾಡುವುದು. ಇಂಥ ಕಾನೂನನ್ನು ಮಾಡಬೇಕೆಂದು ಕ್ರೈಸ್ತ ಮಿಷನರಿಗಳು ಒತ್ತಾಯಪಡಿಸುತ್ತಿದ್ದರು. ಅವರಿಗೆ ಬ್ರಿಟಿಷ್ ಅಧಿಕಾರಿಗಳ ಬೆಂಬಲವಿದ್ದದ್ದು ಸಹಜವೇ ತಾನೆ? ಮಿಷನರಿಗಳು ಈ ಸಲಹೆಯನ್ನು ೧೯೦೫ರಲ್ಲಿಯೇ ಮೈಸೂರು ಸರಕಾರದ ಮುಂದೆ ತಂದಿದ್ದರು. ಸರಕಾರದವರು ಅದಕ್ಕಾಗಿ ಒಂದು ಕರಡು ಲೇಖ (ಮಸೂದೆ)ವನ್ನು ತಯಾರುಮಾಡಿ ಮಹಾಜನರ ಅಭಿಪ್ರಾಯಕ್ಕಾಗಿ ಪ್ರಕಟಪಡಿಸಿಯೂ ಇದ್ದರು. ಅದಕ್ಕುತ್ತರವಾಗಿ ಬಂದ ಅಭಿಪ್ರಾಯಗಳಲ್ಲಿ ಅಧಿಕ ಭಾಗ ವಿರೋಧವಾಗಿತ್ತು. ಈ ಕಾರಣದಿಂದ ಸರಕಾರವು ಆ ಯೋಚನೆಯನ್ನು ಅಮಾನತ್ತಿನಲ್ಲಿಟ್ಟಿತ್ತು. ಆಗ್ಗೆ ಲೆಜಿಸ್ಲೆಟಿವ್ ಕೌನ್ಸಿಲ್ ಸಂಸ್ಥೆಯು ಹುಟ್ಟಿರಲಿಲ್ಲ. ಅಂಥಾ ಪ್ರತಿನಿಧಿ ಸಂಸ್ಥೆಯೊಂದರ ಒಪ್ಪಿತವಿಲ್ಲದೆ ಪ್ರಜಾಭಿಪ್ರಾಯಕ್ಕೆ ವಿರೋಧವಾಗಿ ಶಾಸನ ಮಾಡುವುದು ಅಯುಕ್ತವೆಂದು ಸರಕಾರದವರು ಮಿಷನರಿಗಳಿಗೆ

ವಿವರಣೆ ಕೊಡುತ್ತಿದ್ದರು. ೧೯೦೭ರಲ್ಲಿ ಲೆಜಿಸ್ಲೆಟಿವ್ ಸಂಸ್ಥೆ ಸ್ಥಾಪಿತವಾಯಿತು. ಆಮೇಲೆ ಕ್ರಿಸ್ತಪಾದ್ರಿಗಳ ಒತ್ತಾಯ ಮರಳಿ ಬಲವಾಯಿತು. ಅದರ ಫಲಿತಾಂಶವಾಗಿ ೧೯೧೦ರ ಸುಮಾರಿನಲ್ಲಿ ಮತ್ತೊಂದು ಕರಡು ಲೇಖವು ಲೆಜಿಸ್ಲೆಟಿವ್ ಸಭೆಯ ಮುಂದೆ ಬಂತು. ಆಗ ದಿವಾನರು ಟಿ.ಆನಂದರಾಯರವರು.

ಆ ಶಾಸನಕ್ಕೆ ಮಹಾಜನದ ವಿರೋಧವನ್ನು ಪ್ರದರ್ಶನಮಾಡಲು ಒಂದು ಬಹಿರಂಗ ಸಭೆಯನ್ನು ಸೇರಿಸತಕ್ಕದ್ದೆಂದು ನಾವು ಕೆಲವರು ಆಲೋಚಿಸಿದೆವು. ಆ ಸಭೆಗೆ ಅಧ್ಯಕ್ಷರಾಗಲು ವೆಂಕಟರಾಮಯ್ಯನವರನ್ನೇ ಕರೆದೆವು. ಸಭೆ ದೊಡ್ಡಣ್ಣನವರ ಭವನದಲ್ಲಿ ಜೋರಾಗಿ ನಡೆಯಿತು. ಅದಾದ ಕೆಲವು ದಿನಗಳ ತರುವಾಯ ಲೆಜಿಸ್ಲೆಟಿವ್ ಸಭೆಯಲ್ಲಿ ಕರಡುಲೇಖವು ಚರ್ಚೆಗೆ ಬಂದಾಗ ಅಲ್ಲಿಯ ಭಾಷಣಗಳನ್ನು ಕೇಳುವ ಅವಕಾಶ ನನಗೆ ನನ್ನ ಪತ್ರಿಕೋದ್ಯೋಗದ ಕಾರಣದಿಂದ ದೊರಕಿತ್ತು. ಆ ಮಸೂದೆಯನ್ನು ಸಭೆಗೆ ಒಪ್ಪಿಸುವ ಕರ್ತವ್ಯ ಕೆ.ಪಿ. ಪುಟ್ಟಣ್ಣಶೆಟ್ಟರವರ ಪಾಲಿಗೆ ಬಂದಿತು. ಆಗಿನ ವಿರೋಧಭಾಷಣಗಳಲ್ಲಿ ಪರಿಣಾಮಕಾರಿಯಾದವು ಬೆಂಗಳೂರಿನ ಅಡ್ವೊಕೇಟ್ ವೆಂಕಟರಾಮಯ್ಯನವರದು ಮತ್ತು ಮೈಸೂರಿನ ಅಡ್ವೊಕೇಟ್ ಎ. ರಾಮಣ್ಣನವರದು. ಅಧಿಕ ಪಕ್ಷದ ಅಸಮ್ಮತಿಯ ಕಾರಣದಿಂದ ಆ ಮಸೂದೆ ಬಿದ್ದುಹೋಯಿತು.

ಡಿ.ವೆಂಕಟರಾಮಯ್ಯನವರೂ ಎ. ರಾಮಣ್ಣನವರೂ ಕೆಲವು ವಿಷಯಗಳಲ್ಲಿ ಉತ್ತರ ದಕ್ಷಿಣಗಳಂತೆ. ವೆಂಕಟರಾಮಯ್ಯನವರದು ಗಾಂಭೀರ್ಯ, ರಾಮಣ್ಣನವರದು ರಭಸ. ವೆಂಕಟರಾಮಯ್ಯನವರು ಸಾವಕಾಶವಾಗಿ ಒಂದೊಂದು ಮಾತನ್ನೂ ಆರಿಸಿ ಆಡುವರು, ರಾಮಣ್ಣನವರಿಗಿದ್ದ ಬಾಯಿ ಅವರ ಮಾತಿನ ಪ್ರವಾಹಕ್ಕೆ ಸಾಲದು. ಕೋರ್ಟಿನಲ್ಲಿ ಅವರಿಬ್ಬರೂ ವಾದಿಸುತ್ತಿದ್ದ ರೀತಿಯೂ ಹಾಗೆಯೇ ಎಂದು ಕೇಳಿದ್ದೇನೆ. ವೆಂಕಟರಾಮಯ್ಯನವರು ಸೌಮ್ಯವಾಗಿ ಪ್ರಸ್ತುತ ವಿಷಯವೆಷ್ಟೋ ಅಷ್ಟನ್ನೇ ಹಿಡಿದು ವಾದಮಾಡುತ್ತಿದ್ದರು. ರಾಮಣ್ಣನವರ ವಾದ ಸುಂಟರಗಾಳಿ, ಕೋರ್ಟನ್ನೇ ಹಾರಿಸಿಕೊಂಡು ಹೋಗಬಹುದಾದದ್ದು.

ಧರ್ಮಶ್ರದ್ಧೆಯ ವಿಷಯದಲ್ಲಿಯೂ ಹಾಗೆಯೇ. ವೆಂಕಟರಾಮಯ್ಯನವರು ಆಚಾರದ ಬಹಿರ್ಲಾಂಛನಗಳನ್ನು ಬೆಳೆಸಿಕೊಂಡಿರಲಿಲ್ಲ. ರಾಮಣ್ಣನವರದಾದರೋ ಅವರ ಮುಖವನ್ನು ನೋಡಿದ ಕೂಡಲೇ ಅವರ ಪೂರ್ವಾಚಾರ ನಿಷ್ಠೆ ದೊಡ್ಡದೆಂಬುದು ಸ್ಪಷ್ಟಪಡುವಂತಿತ್ತು.

ಡಿ. ವೆಂಕಟರಾಮಯ್ಯನವರು ತುಂಬಾ ಸರಳರು, ಹಸುಮಗುವಿನಂಥವರೆಂದೇ ಹೇಳಬಹುದು. ಅವರ ಮನೆ ಒಂದು ಸತ್ರ. ಅವರ ತಮ್ಮಂದಿರೂ ಮಕ್ಕಳೂ ಅಲ್ಲದೆ ಇತರ ಸಂಬಂಧಿಗಳೂ ಆಶ್ರಿತರೂ ಬಹುಮಂದಿ ಆ ಕುಟುಂಬದಲ್ಲಿದ್ದರು.

ಅವರು ವಿಸ್ತಾರವಾದ ಮಿತ್ರಮಂಡಲಿಯನ್ನೂ ಬೆಳಸಿಕೊಂಡಿದ್ದರು. ಸರ್.ಕೆ.ಶೇಷಾದ್ರಿ ಅಯ್ಯರ್ ಸ್ಮಾರಕ ಭವನದಲ್ಲಿದ್ದ ಕಾಸ್ಮೊಪಾಲಿಟನ್ ಕ್ಲಬ್ ಎಂಬ ಮಿತ್ರ ಗೋಷ್ಠಿಗೆ ಸಾಮಾನ್ಯವಾಗಿ ಪ್ರತಿ ಸಂಜೆಯೂ ಬರುತ್ತಿದ್ದರು.

ಅರ್ಜುನನಿಗೆ ಪೂರ್ವದಲ್ಲಿಯೂ ಶೂರರಿದ್ದರಲ್ಲವೆ? ಕಾಂಗ್ರೆಸ್ ಬರುವುದಕ್ಕೆ ಮುಂಚೆಯೂ ಮೈಸೂರಿನಲ್ಲಿ ಪ್ರಜಾಧಿಕಾರಕ್ಕಾಗಿ ದುಡಿದವರು ಇದ್ದರು. ಅವರಲ್ಲಿ ಮುಖ್ಯರು ಬೆಂಗಳೂರಿನ ಡಿ.ವೆಂಕಟರಾಮಯ್ಯನವರು, ಮೈಸೂರಿನ ವೆಂಕಟಕೃಷ್ಣಯ್ಯನವರು, ದಾವಣಗೆರೆಯ ಎಚ್.ನಂಜುಂಡರಾಯರು, ಚಿಕ್ಕಮಗಳೂರಿನ ಕಾಫಿಪ್ಲಾಂಟರ್ ಶ್ರೀನಿವಾಸರಾಯರು ಮತ್ತು ಅವರ ತಮ್ಮ ವಾಸುದೇವರಾಯರು-ಇವರು ಮೊದ ಮೊದಲಿಗರು. ಸರ್.ಕೆ.ಶೇಷಾದ್ರಿ ಅಯ್ಯರವರ ಕಾಲದಿಂದ ಆನಂದರಾಯರವರ ಕಾಲದವರೆಗಿನ ಪ್ರಜಾಪ್ರತಿನಿಧಿ ಸಭೆಯ ವರದಿಗಳಲ್ಲಿರುವ ಚರ್ಚೆ ಸೂಚನೆಗಳನ್ನು ನೋಡಿದವರಿಗೆ ಅವರ ಆಲೋಚನೆ ಎಂಥಾದ್ದು, ಅವರ ವ್ಯಾಸಂಗ ಎಂಥಾದ್ದು ಎಂಬುದು ಸ್ಪಷ್ಟವಾಗಿ ಗೊತ್ತಾದೀತು. ಅಂದಿನ ಸರಕಾರದ ಅಧಿಕಾರಿಗಳ ಪಾಲಿಗೆ ಅವರು ಹುಲಿಗಳಾಗಿದ್ದರು. ಅವರ ಹೋರಾಟ ಬರಿಯ ಕೂಗಾಟವಾಗಿರಲಿಲ್ಲ. ಅದು ವಾಸ್ತವ ಸಂಗತಿಗಳನ್ನು ಅವಲಂಬಿಸಿದ, ಯುಕ್ತಿಯುಕ್ತವಾದ ಪ್ರಜಾಪಕ್ಷಪ್ರತಿಪಾದನೆ. ಅವರೆಲ್ಲ ಘನತೆ ಗಂಭೀರತೆಗಳೆಂಬುದನ್ನು ವ್ರತಾಚರಣೆ ಮಾಡಿಕೊಂಡಿದ್ದರು. ಅಂದಿನ ಸಾರ್ವಜನಿಕರಲ್ಲಿ ನಯವಿವೇಕವಿತ್ತು; ಲಪಟಾಯಿಸುವುದಿರಲಿಲ್ಲ. ಲೋಕಾಪವಾದಭಯವಿತ್ತು. ಆದದ್ದರಿಂದ ದರ್ಪವಂತರಾದ ಅಧಿಕಾರಿಗಳಿಗೂ ಅವರ ವಿಷಯದಲ್ಲಿ ಭಯ ಗೌರವಗಳಿದ್ದವು. ಒಟ್ಟಿನಲ್ಲಿ ಅದು ಮರ್ಯಾದೆಯ ಕಾಲ. ಆ ದೊಡ್ಡ ಸಂಪ್ರದಾಯಕ್ಕೆ ಆದರ್ಶವಾಗಿದ್ದವರು ಡಿ.ವೆಂಕಟರಾಮಯ್ಯನವರು.

# ೨೦

# ವರದರಾಜಯ್ಯಂಗಾರ್ಯರು ಮತ್ತು ಅಬಲಾಶ್ರಮ

ಅಬಲಾಶ್ರಮದ ಗೃಹಪ್ರವೇಶೋತ್ಸವ ನಡೆದದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ಅದು ಬಹುಶಃ ೧೯೦೯ ಅಥವಾ ೧೯೧೦ರಲ್ಲಿ. ಆ ದಿವಸ ಬೆಳಿಗ್ಗೆ ಓಲಗದೊಡನೆ ಉತ್ಸವ ಪ್ರಾರಂಭವಾಯಿತು. ಹವಾಮಾನ ಶಖೆಯೂ ಇಲ್ಲದೆ, ತಣಿವೂ ಇಲ್ಲದೆ, ಸೂರ್ಯಕಾಂತಿಯಿಂದ ಸುಖಕರವಾಗಿತ್ತು. ಪಟ್ಟಣದ ಪ್ರಮುಖ ಜನ ಬಹುಮಂದಿ ಬಂದಿದ್ದರು. ಅವರಲ್ಲಿ ಮುಖ್ಯರಾದವರು-ರಿ ॥ ಸಬ್‌ಜಡ್ಜಿ ಎಸ್. ವರದರಾಜಯ್ಯಂಗಾರ್ಯರು, ಲಂಡನ್ ಮಿಷನ್ ಹೈಸ್ಕೂಲು ಹೆಡ್ಮಾಸ್ಟರು ಕೆ.ರಾಮಚಂದ್ರರಾಯರು, ಅಡ್ವೊಕೇಟ್ ಕೆ.ಶೇಷಗಿರಿರಾಯರು, ಕೆ.ಎಸ್.ಕೃಷ್ಣಯ್ಯರವರು, ಎ.ಆರ್.ನಾಗೇಶ್ವರ ಅಯ್ಯರವರು, ಪೆನುಗೊಂಡೆಯಿಂದ ಶಿವಶಂಕರಂ ಪಿಳ್ಳೆಯವರು, ಆಂಧ್ರದಿಂದ ಡಾಕ್ಟರ್ ಪಟ್ಟಾಭಿ ಸೀತಾರಾಮಯ್ಯನವರು ಇತ್ಯಾದಿ ಗಣ್ಯಮಹನೀಯರು.

ಕಟ್ಟಡದ ಕೆಲಸ ಮುಕ್ಕಾಲುಪಾಲು ಮುಗಿದಿತ್ತು. ಸಭಾಮಂಟಪದ ಕೆಲಸ ಕೊಂಚ ಇನ್ನೂ ಬಾಕಿ ಇತ್ತು. ಸಭೆ ನಡೆದದ್ದು ಹೊರಗಡೆ ಚಪ್ಪರದಲ್ಲಿ ಎಂದು ನನ್ನ ಜ್ಞಾಪಕ.

ವರದರಾಜಯ್ಯಂಗಾರ್ಯರು ಸಭಾಧ್ಯಕ್ಷರಾಗಿದ್ದರು. ಆ ದಿನದ ಮುಖ್ಯ ಭಾಷಣ ಕೆ.ರಾಮಚಂದ್ರರಾಯರವರದು. ರಾಮಚಂದ್ರರಾಯರು ಉತ್ತಮ ಭಾಷಣಕಾರರು. ಇಂಗ್ಲೀಷ್ ಸಾಹಿತ್ಯದಲ್ಲಿ ನುರಿತ ವಿದ್ವಾಂಸರು, ಮತ್ತು ಸಮಾಜಸೇವಾಕಾರ್ಯಗಳಲ್ಲಿ ಉತ್ಸಾಹಿಗಳು. ಅವರು ನೂರಾರು ಮಂದಿ ವಿದ್ಯಾರ್ಥಿಗಳಿಗೆ ಬಹುವಿಧಗಳಲ್ಲಿ ಉಪಕಾರ ಮಾಡಿದ್ದ ಮಹನೀಯರು. ಅವರ ಭಾಷಣ ಶೈಲಿ ಲಲಿತವಾಗಿ, ಗಂಭೀರವಾಗಿ, ವಿಷಯ ತುಂಬಿರುತ್ತಿತ್ತು. ಆ ದಿವಸ ಅವರು ತಮ್ಮ ಭಾಷಣದಲ್ಲಿ ಅಬಲಾಶ್ರಮ ಸಂಸ್ಥೆಯ ಪ್ರಾರಂಭ ಸಂದರ್ಭವನ್ನೂ, ಉದ್ದೇಶಗಳನ್ನೂ ವಿವರಿಸಿ, ಆ ಸಂಸ್ಥೆಯು ಸಮಸ್ತ ಮಹಾ ಜನರ ಪೋಷಣೆಗೂ ಅರ್ಹವಾದದ್ದೆಂದು ಬಿನ್ನಯಿಸಿ, ಶುಭವನ್ನು ಕೋರಿದರು.

ವರದರಾಜಯ್ಯಂಗಾರ್ಯರ ಅಧ್ಯಕ್ಷ ಭಾಷಣವೂ ಶಿವಶಂಕರಂ ಅವರ ಮುಕ್ತಾಯ ಭಾಷಣವೂ ಆ ದಿನದ ಉತ್ಸವಕ್ಕೆ ಕಳೆಯೇರಿಸಿದುವು.

ಸಂಸ್ಥೆಯ ಚರಿತ್ರೆ ನನಗೆ ತಿಳಿದುಬಂದ ಮಟ್ಟಿಗೆ ಹೀಗೆ: ಪೆನುಗೊಂಡೆ ಬಳ್ಳಾರಿ ಪ್ರಾಂತಗಳಲ್ಲಿ ಐಸ್ಯಾಕ್.ಜೆ.ಪಿಟ್ (I. J. Pitt, I.C.S) ಎಂಬ ಇಂಗ್ಲೀಷ್ ದೊಡ್ಡ ಮನುಷ್ಯ ಇಂಡಿಯನ್ ಸಿವಿಲ್ ಸರ್ವಿಸ್ಸಿಗೆ ಸೇರಿದವನಾಗಿ, ಕಲೆಕ್ಟರ್ ಆಗಿದ್ದ. ಆತ ಇಂಡಿಯ ದೇಶದ ಜನರಲ್ಲಿ ಸ್ನೇಹ ವಿಶ್ವಾಸವುಳ್ಳವನಾಗಿದ್ದ. ಆತನ ಭಾರ್ಯೆಯೂ ಹಾಗೆಯೇ ನಮ್ಮ ದೇಶದ ಸ್ತ್ರೀಜನರ ಹಿತಕ್ಕಾಗಿ ಏನಾದರೊಂದು ಕಾರ್ಯ ನಡಸಬೇಕೆಂದು ಕುತೂಹಲವುಳ್ಳವಳಾಗಿದ್ದಳು. ಆ ಪಿಟ್ ದಂಪತಿಗಳಿಗೂ ಪೆನುಗೊಂಡೆಯ ವಕೀಲ ಶಿವಶಂಕರಂ ಅವರಿಗೂ ಸ್ನೇಹ ಬೆಳೆದಿತ್ತು. ಪಿಟ್ ಎಂಬಾತನು ತನ್ನ ಸರ್ವಿಸ್ ಮುಗಿಯುವುದಕ್ಕೆ ಬಹಳ ಮುಂಚೆಯೇ ತನ್ನ ಪ್ರಾಯದಲ್ಲಿ ತೀರಿಕೊಂಡ. ಅನಂತರ ಆತನ ಭಾರ್ಯೆ ಇಂಗ್ಲೆಂಡಿಗೆ ಹೋಗಿ ಕೇಂಬ್ರಿಡ್ಜ್ ಪಟ್ಟಣದಲ್ಲಿ ವಾಸವಾಗಿದ್ದಳು. ಆಕೆ ಆಗಾಗ್ಗೆ ಶಿವಶಂಕರಂ ಅವರಿಗೆ ಪತ್ರ ಬರೆದು ತನಗೆ ಹಿಂದೆ ಇದ್ದ ಉದ್ದೇಶವನ್ನು ಪ್ರಸ್ತಾವಿಸುತ್ತಿದ್ದಳು. ಆಕೆಯ ಮನಸ್ಸಿಗೆ ತೋರಿದ್ದ ಯೋಚನೆಗಳಲ್ಲಿ, ನಿರ್ಗತಿಕರಾದ ಬಾಲೆಯರಿಗೂ, ಬಾಲವಿತಂತುಗಳಿಗೂ ಸಹಾಯವಾಗುವ ಒಂದು ಸಂಸ್ಥೆಯನ್ನು ನಿರ್ಮಿಸಬೇಕೆಂಬುದೊಂದು. ಆ ಆಲೋಚನೆ ಶಿವಶಂಕರಂ ಅವರಿಗೂ ಒಪ್ಪಿಗೆಯಾಯಿತು. ಆ ಉದ್ದೇಶಕ್ಕಾಗಿ ಆಕೆ ತನ್ನ ಗಂಡನಿಂದ ತನಗೆ ಬಂದಿದ್ದ ಹಣದಲ್ಲಿ ಸುಮಾರು ಮೂರುಸಾವಿರ ರೂಪಾಯಿಗಳ ಕೊಡುವ ಇಷ್ಟವನ್ನು ಸೂಚಿಸಿದ್ದಳು. ಅದು ಅಬಲಾಶ್ರಮದ ಮೂಲಧನವೆಂದು ಈಗ ನನ್ನ ಜ್ಞಾಪಕ.

ಇದಕ್ಕೆ ಪೂರ್ವಚರಿತ್ರೆಯಾಗಿ ಇನ್ನೊಂದು ಪ್ರಕರಣವಿದೆ. ಸುಮಾರು ೧೯೦೪-೫ರಲ್ಲಿ ಬೆಂಗಳೂರಿನಲ್ಲಿ ಇಂಡಿಯನ್ ಪ್ರೋಗ್ರೆಸ್ಸಿವ್ ಯೂನಿಯನ್ ಅಥವಾ ಭಾರತದೇಶಾಭ್ಯುದಯ ಸಂಘ ಎಂಬ ಒಂದು ಸಂಸ್ಥೆ ಪ್ರಾರಂಭವಾಗಿತ್ತು. ವರದರಾಜಯ್ಯಂಗಾರ್ಯರವರು ಅದಕ್ಕೆ ಅಧ್ಯಕ್ಷರಾಗಿದ್ದರೆಂದು ನನ್ನ ನೆನಪು. ಅವರ ಹಿರಿಯ ಮಗ ಅಡ್ವೊಕೇಟ್ ಎಸ್.ವೆಂಕಟಾಚಲಯ್ಯಂಗಾರ್ಯರವರು ಕಾರ್ಯದರ್ಶಿ. ಅದರ ಮುಖ್ಯ ಸದಸ್ಯರಲ್ಲಿ ಕೆ.ರಾಮಚಂದ್ರರಾಯರು, 'ಮೈಸೂರು ಸ್ಟ್ಯಾಂಡರ್ಡ್' ಪತ್ರಿಕೆಯ ಸಂಪಾದಕರಾಗಿದ್ದ ಎಂ.ಶ್ರೀನಿವಾಸ ಅಯ್ಯಂಗಾರ್ಯರು, ಪ್ಲೀಡರ್ ಜಿ.ವೆಂಕಟರಮಣಯ್ಯನವರು, ಸಿ.ವೆಂಕಟವರದಯ್ಯಂಗಾರ್ಯರು ಇವರು ಸೇರಿದ್ದರು. ಆ ಸಂಸ್ಥೆ ಆಗಾಗ ಸಭೆ ಸೇರಿಸಿ ಸಾಮಾಜಿಕ ಪ್ರಶ್ನೆಗಳನ್ನೂ ಸುಧಾರಣೆಯ ಆವಶ್ಯಕತೆಗಳನ್ನೂ ಕುರಿತು ಚರ್ಚೆ ಮಾಡಿಸುತ್ತಿತ್ತು. ಆ ಸಂಘವು ಕನ್ನಡದಲ್ಲಿ

'ಹಿತವಾದಿ' ಎಂಬ ಮಾಸಪತ್ರಿಕೆಯನ್ನೂ ನಡಸುತ್ತಿತ್ತು. ನಾನು ಆಗ ವಿದ್ಯಾರ್ಥಿದೆಶೆಯಲ್ಲಿದ್ದೆ. 'ಹಿತವಾದಿ' ಪತ್ರಿಕೆಯನ್ನು ಓದುತ್ತಿದ್ದೆ. ಗಂಭೀರವಾದ ವಿಷಯಗಳನ್ನು ಕುರಿತು ಸರಳವೂ ಸರಸವೂ ಆದ ಕನ್ನಡದಲ್ಲಿ ಬರೆಯುವುದು ಸಾಧ್ಯವೆಂಬುದನ್ನು 'ಹಿತವಾದಿ' ಪತ್ರಿಕೆಯಿಂದಲೇ ನಾನು ಮೊದಲು ಕಲಿತುಕೊಂಡದ್ದು. ಈಗಲೂ ನನ್ನ ನೆನಪಿನಲ್ಲಿ ನಿಂತಿರುವ 'ಹಿತವಾದಿ' ಲೇಖನಗಳು ಎರಡು. ಅವುಗಳಲ್ಲೊಂದು ಈಶ್ವರಚಂದ್ರ ವಿದ್ಯಾಸಾಗರರ ಜೀವನಚರಿತ್ರೆಯನ್ನು ಕುರಿತದ್ದು. ಈಶ್ವರಚಂದ್ರರು ಬಂಗಾಳದೇಶದ ಪ್ರಸಿದ್ಧ ಸಂಸ್ಕೃತ ವಿದ್ವಾಂಸರು; ಮತ್ತು ಸಮಾಜಸುಧಾರಕರು. ವಿತಂತುವಿವಾಹದ ಯುಕ್ತತೆಯನ್ನು ಪ್ರತಿಪಾದನೆ ಮಾಡಿ, ಆ ಸಂಬಂಧವಾದ ಕಾನೂನಿಗೆ ಸಹಾಯವಾಗಿ ನಿಂತವರು ಈಶ್ವರಚಂದ್ರರು. ಅವರ ಜೀವಿತವನ್ನು ನಮ್ಮ ವಿದ್ವಾಂಸರು ಬೆಳ್ಳಾವೆ ಸೋಮನಾಥಯ್ಯನವರು ಸೊಗಸಾದ ಕನ್ನಡದಲ್ಲಿ ಸೊಗಸಾಗಿ ನಿರೂಪಿಸಿದ್ದರು. 'ಹಿತವಾದಿ' ಪತ್ರಿಕೆಯ ಎರಡನೆಯ ಪ್ರಬಂಧ ನನ್ನ ಜ್ಞಾಪಕದಲ್ಲಿ ಉಳಿದಿರುವುದು 'ಅಶೋಕನೂ ಮಾರ್ಕಸ್ ಔರಿಲಿಯಸ್ (Marcus Aurelius) ನೂ' ಎಂಬ ವಿಷಯವನ್ನು ಕುರಿತದ್ದು. ಇದೂ ಘನವಾದ ಲೇಖನ. ಇದು ಬಹುಶಃ ವೆಂಕಟವರದಯ್ಯಂಗಾರ್ಯರ ಲೇಖನವೆಂದು ತೋರುತ್ತದೆ. ಅಂಥ ಒಳ್ಳೆಯ ಪತ್ರಿಕೆಯನ್ನು ಉಳಿಕೊಳ್ಳುವ ಔದಾರ್ಯ ಕನ್ನಡ ಮಹಾಜನಕ್ಕೆ ಇಲ್ಲದೆ ಹೋಯಿತು.

'ಹಿತವಾದಿ' ಪತ್ರಿಕೆಯ ರಕ್ಷಾಪುಟದ ಮೇಲೆ ದೇಶಾಭ್ಯುದಯ ಸಂಘದ ಪ್ರಕಟಣೆ ಬರುತ್ತಿತ್ತು. ಅದರಲ್ಲಿ ಕಾರ್ಯದರ್ಶಿ ವೆಂಕಟಾಚಲಯ್ಯಂಗಾರ್ಯರ ಹೆಸರು ಇರುತ್ತಿತ್ತು. ಆಗ ಕೋಲಾರ ಮುಳಬಾಗಿಲುಗಳಲ್ಲಿದ್ದ ನಾನು ಆ ಮಹಾನುಭಾವರ ಹೆಸರನ್ನು ನೋಡಿ ಅಂಥವರನ್ನು ಕಂಡು ಮಾತನಾಡಿ ಪರಿಚಯಮಾಡಿಕೊಳ್ಳಬೇಕೆಂದು ಆಶೆಪಡುತ್ತಿದ್ದೆ. ೧೯೦೫-೬ರಲ್ಲಿ ನಾನು ಬೆಂಗಳೂರಿಗೆ ಬಂದಾಗ ವೆಂಕಟಾಚಲಯ್ಯಂಗಾರ್ಯರು ಅರಳೇಪೇಟೆಯ ಒಂದು ಮನೆಯಲ್ಲಿ ಆಫೀಸುಮಾಡಿಕೊಂಡಿದ್ದರು. ರೈಲಿಗಾಗಿ ಹೋಗುವಾಗಲೂ ಬರುವಾಗಲೂ ಅವರ ಹೆಸರಿನ ಬೋರ್ಡನ್ನು ನೋಡಿ ಮೆಚ್ಚಿಕೆಯಿಂದ ಕೈಮುಗಿಯುತ್ತಿದ್ದೆ. ಕೆಲವು ದಿನವಾದ ಬಳಿಕ ಅವರ ಪರಿಚಯದ ಸಂತೋಷ ನನ್ನ ಪಾಲಿಗೆ ಬಂತು. ತಂದೆ ವರದರಾಜಯ್ಯಂಗಾರ್ಯರೂ ಮಗ ವೆಂಕಟಾಚಲಯ್ಯಂಗಾರ್ಯರೂ ನನಗೆ ತಿಳಿದಿರುವ ಸಾಧು ಸತ್ಪುರುಷರಲ್ಲಿ ಪ್ರಥಮ ಗಣ್ಯರು, ಅವರ ನಡವಳಿಕೆ ವಿನಯಸಂಪನ್ನವಾದದ್ದು. ಶೀಲವು ಪರಿಶುದ್ಧವಾದದ್ದು. ಇಬ್ಬರೂ ಸತ್ಯಸಂಧರು. ಅವರ ಮನಸ್ಸು ಉದಾರವಾದದ್ದು. ಅವರ ಪೋಷಣೆಯಲ್ಲಿ ಬೆಳೆದು ದೊಡ್ಡವರಾದ ಜನ ನೂರು ಮಂದಿ ಎಂದರೆ ಅತಿಶಯವಲ್ಲ.

ಇಂಥವರ ಪ್ರಭಾವದಿಂದ ಕೆಲಸ ಮಾಡುತ್ತಿದ್ದದ್ದು ದೇಶಾಭ್ಯುದಯ ಸಂಘ. ಆ ಸಂಘದ ಚರ್ಚೆ ಸಮಾಲೋಚನೆಗಳಿಂದ ರೂಪ ತಾಳಿ ಹೊರಟದ್ದು ಅಬಲಾಶ್ರಮ. ದೇಶಾಭ್ಯುದಯ ಸಂಘವೂ ಅಬಲಾಶ್ರಮವೂ ಅರುವತ್ತು ವರ್ಷಗಳ ಹಿಂದೆ ಬೆಂಗಳೂರಿನಲ್ಲಿದ್ದ ಸಾಮಾಜಿಕ ವಾತಾವರಣ ಎಂಥಾದ್ದು, ಆಗಿನ ಪ್ರಮುಖ ಜನರ ಧ್ಯೇಯಗಳು ಎಷ್ಟು ಉದಾತ್ತವಾದವು, ಅಂದಿನ ವಿದ್ವಜ್ಜನದ ಆಶಯಗಳು ಎಷ್ಟು ಉನ್ನತವಾದವು ಎಂಬುದಕ್ಕೆ ನಿದರ್ಶನವಾಗಿವೆ.

ಮೇಲೆ ವೆಂಕಟವರದಯ್ಯಂಗಾರ್ಯರ ಹೆಸರನ್ನೂ ಸ್ಮರಿಸಿದ್ದೇನೆ. ದೇಶಾಭ್ಯುದಯ ಸಂಘ ಮತ್ತು ಅಬಲಾಶ್ರಮ- ಈ ಎರಡಕ್ಕೂ ಮೂಲಕರ್ತರೂ ಮುಖ್ಯ ಸಂಚಾಲಕರೂ ಆಗಿದ್ದವರು ಚಕ್ರವರ್ತಿ ವೆಂಕಟವರದಯ್ಯಂಗಾರ್ಯರವರು. ಅವರ ಜೀವನ ಕಥೆ ಒಂದು ಪ್ರತ್ಯೇಕ ಗ್ರಂಥಕ್ಕೆ ತಕ್ಕ ವಸ್ತು. ಅವರು ಮಾಲೂರು ಸಮೀಪದ ಒಂದು ಹಳ್ಳಿಯವರು. ಮೈಸೂರು ಪಟ್ಟಣದಲ್ಲಿ ಮಹಾರಾಜಾ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಿದವರು; ಭಾಭಾಸಾಹೇಬರ ಶಿಷ್ಯರು. ಅವರು ಎಫ್, ಎ. ಕ್ಲಾಸಿನಲ್ಲಿ ಓದುತ್ತಿದ್ದಾಗಲೇ ಕಾಂಗ್ರೆಸ್ಸಿಗಾಗಿ ವಿದ್ಯಾರ್ಥಿಗಳಿಂದ ಚಂದಾ ಹಣ ಕೂಡಿಸಿ ಕಾಂಗ್ರೆಸ್ಸಿಗೆ ಕಳುಹಿಸುತ್ತಿದ್ದರು. ಉತ್ತರೋತ್ತರ ಅವರು ಗೌರ್ನ್‌ಮೆಂಟ್ ಪ್ರೆಸ್ಸಿನಲ್ಲಿ ಕರಡು ಶೋಧಕರು (Proof-Examiner) ಆಗಿದ್ದರು. ಅವರ ವಿವಾಹ ಕೊಂಚ ಮಟ್ಟಿಗೆ 'Reform' ಎಂದರೆ ಪರಿಷ್ಕೃತ ರೀತಿಯದು. ಅವರ ಭಾರ್ಯೆ ಶ್ರೀಮತಿ ಕೃಷ್ಣಮ್ಮನವರು ಮಾಧ್ವರು. ಅವರ ಸ್ಥಳ ಪೆನುಗೊಂಡೆ. ಆಕೆಗೂ ಸಮಾಜ ಸಂಸ್ಕಾರದ ವಿಷಯದಲ್ಲಿ ನೈಜವಾದ ಶ್ರದ್ಧೆಯಿತ್ತು. ಅವರಿಬ್ಬರಿಗೂ ಸ್ನೇಹಿತರಾದವರು ಪೆನುಗೊಂಡೆಯ ಶಿವಶಂಕರಂ ಅವರು. ಶಿವಶಂಕರಂ ಅವರು ಆಂಧ್ರ ಸಾಹಿತ್ಯದಲ್ಲಿ ತುಂಬಾ ಅಭಿರುಚಿಯುಳ್ಳವರು, ಭಾಗವತ ಪ್ರೇಮಿಗಳು, ಇಂಗ್ಲೀಷ್ ಭಾಷೆಯ ಪ್ರಯೋಗಗಳನ್ನು ಚೆನ್ನಾಗಿ ಬಲ್ಲವರು, ಮತ್ತು ಸ್ವಭಾವದಲ್ಲಿ ಉದಾರಿಗಳು. ಈ ಶಿವಶಂಕರಂ ಅವರು ವೆಂಕಟವರದಯ್ಯಂಗಾರ್ಯರಿಗೂ ಶ್ರೀಮತಿ ಕೃಷ್ಣಮ್ಮನವರಿಗೂ ಮುಖ್ಯ ಪ್ರೋತ್ಸಾಹಕರಾಗಿದ್ದರು. ಅಬಲಾಶ್ರಮವು ಶ್ರೀಕೃಷ್ಣಮ್ಮ ವೆಂಕಟವರದಯ್ಯಂಗಾರ್ಯರ ಜೀವಿತದ ಸಾಧನೆ. ಅವರು ನೆಟ್ಟ ಸಸಿ ಇದು.

ವೆಂಕಟವರದಯ್ಯಂಗಾರ್ಯರ ಮಿತ್ರ ಮಂಡಲಿ ವಿಸ್ತಾರವಾಗಿತ್ತು. ಮೈಸೂರು ಸ್ಟ್ಯಾಂಡರ್ಡ್ ಪತ್ರಿಕೆಯ ಸಂಪಾದಕರಾದ ಶ್ರೀ ಶ್ರೀನಿವಾಸಯ್ಯಂಗಾರ್ಯರು ಅದರಲ್ಲಿ ಮುಖ್ಯರು. ಅವರಲ್ಲದೆ ಸಾತ್ನೂರು ನಾರಾಯಣರಾವ್, ನರಸೋಜಿ ನಾರಾಯಣ್, ಬಾಪೂ ಅನಂತಜೋಷಿ, ವೆಂಕಟಾಚಲಯ್ಯಂಗಾರ್ಯರು ತಮ್ಮ ಶ್ಯಾಮಯ್ಯಂಗಾರ್ಯರು ಇಂಥಾ ಅನೇಕರು ಸಹಾಯವಾಗಿದ್ದರು.

ಈ ಮಹನೀಯರು ಸಹಕಾರಸಂಘ ಪ್ರಯತ್ನದಲ್ಲಿಯೂ ಮುಂದಾಳುಗಳಾಗಿದ್ದರು. ಬಹುಶಃ ಬೆಂಗಳೂರು ಕೋ-ಆಪರೇಟಿವ್ ಬ್ಯಾಂಕಿನ ಸ್ಥಾಪಕರ ಪೈಕಿ ಇವರಲ್ಲಿ ಕೆಲವರಿದ್ದರೆಂದು ಜ್ಞಾಪಕ. ವೆಂಕಟವರದಯ್ಯಂಗಾರ್ಯರ ನಿಷ್ಠೆಯ ವಿಷಯದಲ್ಲಿಯೂ ಪ್ರಾಮಾಣಿಕತೆಯ ವಿಷಯದಲ್ಲಿಯೂ ಎಲ್ಲರಿಗೂ ಸಂಪೂರ್ಣ ವಿಶ್ವಾಸವಿತ್ತು. ಆದದ್ದರಿಂದ ಅವರು ಅಬಲಾಶ್ರಮದ ಬಗ್ಗೆ ಮಾಡಿದ ಬೇಡಿಕೆ ಎಲ್ಲಿಯೂ ವ್ಯರ್ಥವಾಗಲಿಲ್ಲ. ಬಹುಮಂದಿ ಶಕ್ತ್ಯನುಸಾರ ಧನ ಸಹಾಯವನ್ನೂ ಇತರ ಸಹಾಯವನ್ನೂ ಇಷ್ಟದಿಂದ ಕೊಟ್ಟರು. ಹಾಗೆ ಬೆಳೆಯಲು ಪ್ರಾರಂಭವಾದದ್ದು ಅಬಲಾಶ್ರಮ.

ಪ್ರಾರಂಭೋತ್ಸವದ ದಿವಸ ಮಧ್ಯಾಹ್ನ ವೆಂಕಟವರದಯ್ಯಂಗಾರ್ಯರ ಮನೆಯಲ್ಲಿ ಸಂತೋಷ ಭೋಜನ ಏರ್ಪಾಟಾಗಿತ್ತು. ನಾನು ಡಾ॥ ಪಟ್ಟಾಭಿ ಸೀತಾರಾಮಯ್ಯನವರನ್ನು ಮೊದಲು ಕಂಡದ್ದು ಅಲ್ಲಿ. ಆ ಹೊತ್ತಿನ ಸಂಭಾಷಣೆಯಲ್ಲಿ ಪತ್ರಿಕೋದ್ಯೋಗದ ಪ್ರಸ್ತಾವ ಬಂತು. ಯಾರೋ ಆಂಧ್ರರು ತೆಲುಗಿನ 'ಕೃಷ್ಣಾಪತ್ರಿಕೆ' ಯ ಮಾತನ್ನೆತ್ತಿದರು. ಆಗ ಪಟ್ಟಾಭಿ ಸೀತಾರಾಮಯ್ಯನವರು ಆಡಿದ ಒಂದು ಮಾತು ನನ್ನ ಮನಸ್ಸಿಗೆ ನಾಟಿತು. "ಒಳ್ಳೆಯ ಪತ್ರಿಕೆಯು ತನ್ನ ಪ್ರದೇಶದ ಜನಜೀವನವನ್ನು ಮೇಲ್ಮಟ್ಟಕ್ಕೆತ್ತುತ್ತದೆ" ಎಂದು ಆ ಮಾತು. ಅವರಿಗೂ ನನಗೂ ಸ್ನೇಹ ಬೆಳೆಯಿತು. ಹತ್ತು ಹನ್ನೆರಡು ವರ್ಷ ನಡೆಯಿತು. ಆಮೇಲೆ ದಾರಿಗಳು ಬೇರೆಬೇರೆಯಾದವು.

ಉತ್ಸಾಹ ಸಂಭ್ರಮಗಳಲ್ಲಿ ಪ್ರಾರಂಭವಾದ ಅಬಲಾಶ್ರಮ ಕೆಲವು ವರ್ಷಗಳಾದ ಬಳಿಕ ದುರ್ಬಲವಾಯಿತು. ವೆಂಕಟವರದಯ್ಯಂಗಾರ್ಯರೂ ಶ್ರೀಮತಿ ಕೃಷ್ಣಮ್ಮನವರೂ ವೃದ್ಧರಾದರು. ಅನುಕೂಲತೆ ಕಡಮೆಯಾಯಿತು. ಹಾಗೇ ಕೊಂಚ ಕ್ಷೀಣದಶೆಗೆ ಇಳಿದ ಆ ಸಂಸ್ಥೆಯನ್ನು ಪುನರುದ್ಧಾರ ಮಾಡಬೇಕೆಂದು ಸಂಕಲ್ಪಿಸಿ ಮುಂದೆ ಬಂದವರು ಶ್ರೀಮಾನ್ ಎ.ಆರ್. ನಾಗೇಶ್ವರ ಅಯ್ಯರವರು ಮತ್ತು ಅವರ ಧರ್ಮಪತ್ನಿ ಶ್ರೀಮತಿ ಸುಂದರಮ್ಮನವರು. ಇವರ ಸಹಾಯಕ್ಕೆ ಬಂದ ಮಹನೀಯರಲ್ಲಿ ಡಾಕ್ಟರ್ ಬಿ.ಕೆ. ನಾರಾಯಣರಾಯರು ಪ್ರಥಮರು. ಶ್ರೀಮತಿ ಇಂದಿರಾಬಾಯಿ ವಾಸುದೇವ ಮೂರ್ತಿಯವರು ಸಹಕಾರ ನೀಡಿದರು. ಶ್ರೀ ಎಸ್. ನಾರಾಯಣರಾಯರವರೂ ಸಲಹೆ ಕೊಟ್ಟರು. ಶ್ರೀ ಪಿ. ಆರ್. ರಾಮಯ್ಯನವರೂ ಅವರ ಭಾರ್ಯೆ ಶ್ರೀಮತಿ ಜಯಲಕ್ಷ್ಮಮ್ಮನವರೂ ಆಸಕ್ತಿಯಿಂದ ಸಹಕರಿಸಿ ಬಂದರು. ಇತರ ಮಹನೀಯರು ಅನೇಕ ಮಂದಿ ಉದಾರ ಸಹಾಯ ನೀಡಿದರು. ಈ ಎಲ್ಲ ಮಹನೀಯರ ಪ್ರಯತ್ನದಿಂದ ಅಬಲಾಶ್ರಮ ಮತ್ತೆ ತಲೆಯೆತ್ತಿ ನಿಂತು ಅಭಿವೃದ್ಧಿಯ ಸೂಚನೆಗಳನ್ನು ತೋರುತ್ತಿದೆ. ಈ ಸಂಸ್ಥೆ ಹಿಂದೂ ಸಮಾಜಕ್ಕೆ ಶುಭಕರವಾದದ್ದು, ಸಮಸ್ತ ಮಹಾಜನರ ಅಭಿಮಾನಕ್ಕೂ ಅರ್ಹವಾದದ್ದು.

1 ಬಸವನಗುಡಿ ಯೂನಿಯನ್ ಮತ್ತು ಸರ್ವಿಸ್ ಕ್ಲಬ್ ಸಂಸ್ಥೆಯಲ್ಲಿ ಭಾನುವಾರ, ತಾ. ೨೯-೪-೧೯೫೩ ರಂದು ಆ ಸಂಸ್ಥೆಯ ಮೂಲ ಸ್ಥಾಪಕರಲ್ಲೊಬ್ಬರಾದ ಪ್ರೊ॥ ಬಿ.ವೆಂಕಟನಾರಣಪ್ಪನವರ ಭಾವಚಿತ್ರವನ್ನು ಅನಾವರಣ ಮಾಡಿದ ಸಂದರ್ಭದಲ್ಲಿ ಮಾಡಿದ ಭಾಷಣದ ಸಾರಾಂಶ.

1 ಡಾ ॥ ಬಿ.ಕೆ.ನಾರಾಯಣರಾಯರವರು.

1 ಈ ಪದ್ಯದ ನಾಲ್ಕನೆಯಚರಣಕ್ಕೆ-ಜನೇ ಯನ್ನದೇಯಂ ಪ್ರದೇಯಂ ಮಮ ಸ್ಯಾತ್-ಎಂಬ ಒಂದು ಪಾಠಾಂತರವೂ ಉಂಟು.